ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಪುಟ್ಟಸ್ವಾಮಿ

ಪ್ರಕಟಣೆ:

ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,

ಕರ್ನಾಟಕ ವಿಧಾನಸಭೆ ಸಚಿವಾಲಯ,

ವಿಧಾನಸೌಧ, ಬೆಂಗಳೂರು - 560 001.

ಪ್ರತಿಭಾವಂತ ಸಂಸದೀಯ ಪಟುಗಳ
ಬದುಕು ಬರಹ ಮಾಲಿಕೆ

# ಕೆ. ಪುಟ್ಟಸ್ವಾಮಿ

*Eminent Parliamentarian Series*

# K. Puttaswamy



ರಚನೆ: ಡಾ. ಡಿ.ಎಸ್. ಜಯಪ್ಪಗೌಡ
ಮೈಸೂರು ವಿಶ್ವವಿದ್ಯಾನಿಲಯ

ಮೊದಲ ಮುದ್ರಣ
ಮಾರ್ಚ್,2000 - 1000 ಪ್ರತಿಗಳು

ಮುಖಪುಟ ವಿನ್ಯಾಸ
ಸರ್ಕಾರಿ ಮುದ್ರಣಾಲಯ
ಬೆಂಗಳೂರು.

ಪ್ರಕಟಣೆ
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

# ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯಪಟುಗಳ ಬಗ್ಗೆ ಅನೇಕ ಕಿರುಹೊತ್ತಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ: ಬಿ.ಆರ್. ಅಂಬೇಡ್ಕರ್, ಡಾ: ರಾಮಮನೋಹರ ಲೋಹಿಯಾ ಮತ್ತು ಶೇಕ್ ಮಹಮದ್ ಅಬ್ದುಲ್ ಮತ್ತು ಕೃಷ್ಣ ಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಗೆಗಳನ್ನು ನಾವು ಕನ್ನಡಕ್ಕೆ ಭಾಷಾಂತರಿಸಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ಹಿಂದಿನ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್‌ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಕರ್ನಾಟಕದ ಏಳಿಗೆಗಾಗಿ ಶ್ರಮಿಸಿದ ಹಾಗೂ ಪ್ರತಿಭಾವಂತ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತು ಕಿರುಹೊತ್ತಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು. ಈ ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆಯಲ್ಲಿ ಮಾಜಿ ಮುಖ್ಯಮಂತ್ರಿಗಳಾದ ಸರ್ವಶ್ರೀ ಕೆಂಗಲ್ ಹನುಮಂತಯ್ಯ, ಎಸ್. ನಿಜಲಿಂಗಪ್ಪ, ಎಸ್. ಗೋಪಾಲಗೌಡರು, ಶ್ರೀ ಡಿ. ದೇವರಾಜ ಅರಸು, ಜಿ.ವಿ. ಹಳ್ಳೀಕೇರಿ, ವೈಕುಂಠ ಬಾಳಿಗ, ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಮೊದಲಾದ ಮಹನೀಯರ ಕುರಿತ ಕಿರುಹೊತ್ತಗೆಗಳನ್ನು ಹೊರತರಲಾಗಿದೆ.

ಈಗ ಅಸ್ತಿತ್ವಕ್ಕೆ ಬಂದಿರುವ ಹೊಸ ಸರ್ಕಾರವು ಕೂಡ ಈ ಪ್ರಕಟಣೆಗಳ ಬಗ್ಗೆ ಆದ್ಯತೆ ನೀಡುತ್ತಿದೆ. ಈ ಯೋಜನೆಯ ಮುಂದುವರಿಕೆಯ ಅಂಗವಾಗಿ ಶಾಸಕರು ಮತ್ತು ಸಚಿವರಾಗಿ ದೀರ್ಘಕಾಲ ಸೇವೆಸಲ್ಲಿಸಿದ ದಿವಂಗತ ' ಕೆ. ಪುಟ್ಟಸ್ವಾಮಿ ' ಅವರನ್ನು ಕುರಿತ ಈ ಕಿರುಹೊತ್ತಗೆಯನ್ನು ಹೊರತಂದಿದ್ದೇವೆ. ಈ ಕೃತಿಯನ್ನು ರಚಿಸುವ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ವಿದ್ವಾಂಸರಾದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಡಾ. ಡಿ.ಎಸ್. ಜಯಪ್ಪಗೌಡ ಅವರಿಗೆ ವಹಿಸಿಕೊಡಲಾಯಿತು. ಅವರು ಈ ಕಾರ್ಯವನ್ನು

ಅಚ್ಚುಕಟ್ಟಾಗಿ ನಿರ್ವಹಿಸಿ ರಚಿಸಿಕೊಟ್ಟಿದ್ದಾರೆ. ಶ್ರೀಯುತರಿಗೆ ನಾವು ಆಭಾರಿಯಾಗಿದ್ದೇವೆ. ಈ ನಿಟ್ಟಿನಲ್ಲಿ ಸಹಕಾರ ನೀಡಿರುವ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನಾವು ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದವರಿಗೆ ಹಾಗೂ ಉಪಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯಪಟುಗಳ ಬಗೆಗಿನ ಈ ಕಿರುಹೊತ್ತಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಬೋಧಪ್ರದವಾಗಿದ್ದು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಡಿ.ಬಿ.ಕಲ್ಮಣಕರ್
ಸಭಾಪತಿಗಳು
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ,
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಅರಿಕೆ

ಕರ್ನಾಟಕ ರಾಜ್ಯದ ವಿಧಾನಮಂಡಲವು ರಾಜ್ಯದ ಪ್ರತಿಭಾವಂತ ಸಂಸದೀಯಪಟುಗಳನ್ನು ಕುರಿತು ಬದುಕು-ಬರಹ ಮಾಲಿಕೆಯಲ್ಲಿ ಕಿರುಹೊತ್ತಗೆಗಳನ್ನು ಪ್ರಕಟಿಸುತ್ತಿರುವುದು ಶ್ಲಾಘನೀಯವಾದ ಕಾರ್ಯ. ಈ ಯೋಜನೆಯಂತೆ ಕೆ. ಪುಟ್ಟಸ್ವಾಮಿ ಅವರನ್ನು ಕುರಿತು ಈ ಕಿರುಹೊತ್ತಗೆ ಸಿದ್ಧಪಡಿಸುವ ಜವಾಬ್ದಾರಿ ನನ್ನ ಪಾಲಿಗೆ ಬಂದಿತು.

ಕೆ. ಪುಟ್ಟಸ್ವಾಮಿಯವರು ಮೈಸೂರು ಜಿಲ್ಲೆ ಕಂಡ ಯಶಸ್ವಿ ರಾಜಕಾರಣಿಗಳಲ್ಲೊಬ್ಬರು. ಅವರು ಅವಿರತವಾಗಿ ಮೂರು ದಶಕಗಳ ಕಾಲ ಕರ್ನಾಟಕದ ವಿಧಾನ ಸಭೆಯಲ್ಲಿ ಸೇವೆಸಲ್ಲಿಸಿದ ವಿರಳರ ಸಾಲಿಗೆ ಸೇರಿದ್ದಾರೆ. ಅವರು ವಾಗ್ಮಿಯೂ ಕಾನೂನು ತಜ್ಞರು ಆಗಿದ್ದು ಅವರು ವಿಧಾನ ಸಭಾ ಕಲಾಪದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಭಾಗವಹಿಸಿರುವುದು ಕಂಡುಬಂದಿದೆ. ಶ್ರೀಯುತರ ವಿಚಾರಗಳು ಮತ್ತು ವಿಷಯ ವಿಶ್ಲೇಷಣೆ ರೀತಿ ಮತ್ತು ಅವರ ಜೀವನ ಶೈಲಿ ಇವು ಮಾದರಿಯಾಗಿವೆ. ಈ ಕಿರುಹೊತ್ತಗೆ ಶಾಸಕರಿಗೂ ಸಾಮಾನ್ಯ ಓದುಗರಿಗೂ ಉಪಯುಕ್ತವಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ. ಈ ಕಾರ್ಯದಲ್ಲಿ ಮಾಹಿತಿ ನೀಡಿ ಸಹಕರಿಸಿದ ದಿವಂಗತ ಕೆ. ಪುಟ್ಟಸ್ವಾಮಿಯವರ ಕುಟುಂಬ ವರ್ಗದವರಿಗೂ ಮತ್ತು ಇತರ ಮಹನೀಯರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಹೊತ್ತಗೆ ರಚನೆಗೆ ಅನುವು ಮಾಡಿಕೊಟ್ಟ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ ಹಾಗೂ ನನ್ನನ್ನು ಪ್ರೋತ್ಸಾಹಿಸಿದ ಮೈಸೂರು ವಿಶ್ವವಿದ್ಯಾನಿಲಯದ ಸನ್ಮಾನ್ಯ ಕುಲಪತಿಗಳಾದ ಪ್ರೊ. ಎಸ್.ಎನ್. ಹೆಗ್ಡೆ ಅವರಿಗೂ ಋಣಿಯಾಗಿದ್ದೇನೆ.

**ಡಾ. ಡಿ.ಎಸ್. ಜಯಪ್ಪಗೌಡ,**
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು - 570 006.

ಮೈಸೂರು.
ದಿನಾಂಕ: 30-11-1999

# ಪ ರಿ ವಿ ಡಿ

ಪುಟ ಸಂಖ್ಯೆ



## ಭಾಗ ಒಂದು



## ಭಾಗ ಎರಡು

ವಿಧಾನ ಸಭಾ ಕಲಾಪದಲ್ಲಿ

## ಕೆ.ಪುಟ್ಟಸ್ವಾಮಿ

# 1. ಜೀವನ ಮತ್ತು ಸಾಧನೆ

ಶ್ರೀ ಕೆ. ಪುಟ್ಟಸ್ವಾಮಿಯವರು ಮೂರು ದಶಕಗಳ ಕಾಲ ವಿಧಾನಸಭಾ ಸದಸ್ಯರಾಗಿದ್ದು ಅವಿರತವಾದ ಸಂಸದೀಯ ಜೀವನ ನಡೆಸಿದವರು. ಒಂದು ದಶಕದ ಅವಧಿಗೆ ಸಚಿವರಾಗಿ ಜವಾಬ್ದಾರಿ ನಿರ್ವಹಿಸಿದರು. ವೃತ್ತಿಯಿಂದ ವಕೀಲರಾಗಿದ್ದು ಸಂವಿಧಾನ ಮತ್ತು ವಿಧಾನ ಮಂಡಲದ ಸ್ವರೂಪದ ಸೂಕ್ಷ್ಮಗಳನ್ನು ಅರಿತ್ತಿದ್ದವರು. ಅವರ ಗಂಭೀರವಾದ ವ್ಯಕ್ತಿತ್ವ, ಸೂಕ್ಷ್ಮ ಗ್ರಹಿಕೆ ಮತ್ತು ತರ್ಕ ಬದ್ಧವಾದ ಸಂವಾದ - ಇವು ಅವರಿಗೆ ಉತ್ತಮ ಸಂಸದೀಯಪಟುವಾಗಿ ಬೆಳೆಯಲು ಪೂರಕವಾದುವು. ವಿಧಾನ ಸಭಾ ಕಲಾಪಗಳಲ್ಲಿ ಸದಾ ಆಸಕ್ತಿಯಿಂದ ಭಾಗವಹಿಸುತ್ತಿದ್ದ ಶ್ರೀಯುತರು ಕರ್ನಾಟಕದ ಸಂಸದೀಯ ಪರಂಪರೆಗೆ ಅಮೂಲ್ಯ ಕಾಣಿಕೆ ನೀಡಿದ್ದಾರೆ.

**ಜೀವನ ಪರಿಸರ ಮತ್ತು ಶಿಕ್ಷಣ:-**

ಕೆ. ಪುಟ್ಟಸ್ವಾಮಿಯವರು 1917ರಲ್ಲಿ ಅರಕೆರೆಯ ಲಿಂಗೇಗೌಡ ಮತ್ತು ಲಿಂಗಮ್ಮ ದಂಪತಿಗಳ ಜೇಷ್ಠ ಪುತ್ರನಾಗಿ ಜನಿಸಿದರು. ಅವರ ತಂದೆ ಕಳಸ್ತವಾಡಿ ಲಿಂಗೇಗೌಡರೆಂಬ ಹೆಸರಿನಿಂದಲೇ ಪರಿಚಿತರು. ಇದಕ್ಕೆ ಕಾರಣ ಲಿಂಗೇಗೌಡರ ತಂದೆಯವರು ಮೈಸೂರು, ಶ್ರೀರಂಗಪಟ್ಟಣ ರಸ್ತೆಯಲ್ಲಿರುವ ಕಳಸ್ತವಾಡಿಯವರಾಗಿದ್ದು ಅವರು ಶ್ರೀರಂಗಪಟ್ಟಣ ತಾಲ್ಲೂಕಿನ ಅರಕೆರೆಯಲ್ಲಿ ಹೋಗಿ ನೆಲಸಿದ್ದು, ಮುಂದೆ ಅವರ ಮಗ ಲಿಂಗೇಗೌಡರನ್ನು ಕಳಸ್ತವಾಡಿ ಲಿಂಗೇಗೌಡರೆಂದೇ ಕರೆಯಲಾಯಿತು. ಲಿಂಗೇಗೌಡರ ತಂದೆ ಮನೆ ಅಳಿಯನಾಗಿ ಅಲ್ಲಿ ನೆಲೆನಿಂತಿದ್ದರು. ಒಕ್ಕಲಿಗ ರೈತ ಕುಟುಂಬಕ್ಕೆ ಸೇರಿದ ಲಿಂಗೇಗೌಡರು ಹಳ್ಳಿಯ ಅಸಂಖ್ಯಾತ ಅನಕ್ಷರಸ್ಥರಲ್ಲಿ ಒಬ್ಬರಾಗಿರಲಿಲ್ಲ. ಅಲ್ಪ ಸ್ವಲ್ಪ ಅಕ್ಷರ ವಿದ್ಯೆಯಿಂದ ತಮ್ಮ ಜ್ಞಾನವನ್ನು ಕಲಾಭಿರುಚಿಯನ್ನು ಹೆಚ್ಚಿಸಿಕೊಂಡಿದ್ದವರು. ಸುಸಂಸ್ಕೃತ ಜನರಲ್ಲಿ ಅಂದು ಜನಪ್ರಿಯ ಹವ್ಯಾಸವಾಗಿದ್ದ ಪುರಾಣ ಕೇಳುವ ಅಭಿರುಚಿ ಬೆಳೆದುಬಂದಿತ್ತು. ಹಳ್ಳಿಗಾಡಿನ ಜನರು ಭಜನೆ, ಕೀರ್ತನೆ, ಹರಿಕಥೆ ಇವುಗಳ ಹೆಸರಿನಲ್ಲಿ ಮಹಾಕಾವ್ಯ ಮತ್ತು ಪುರಾಣಗಳಲ್ಲಿ ಬರುವ ಕತೆಗಳನ್ನು ಕೇಳಿ ಆನಂದಪಡುತ್ತಿದ್ದರು. ಇಂತಹ ವೇದಿಕೆಗಳಲ್ಲಿ ಲಿಂಗೇಗೌಡರು ಜೈಮಿನಿ ಮತ್ತು ಕುಮಾರ ವ್ಯಾಸ ಭಾರತವನ್ನು ವಾಚನ ಮಾಡುತ್ತಿದ್ದರು. ಹಾಡು ಹೇಳುವುದು ಮತ್ತು ನಾಟಕಗಳಲ್ಲಿ ಪಾತ್ರ ವಹಿಸುವುದು ಅವರಿಗೆ ಸಹಜ ಪ್ರವೃತ್ತಿ ಎಂಬಂತೆ ಮೈಗೂಡಿದ್ದವು. ಇದ್ದ ಸ್ವಲ್ಪ ಆಸ್ತಿಯಿಂದ ಕುಟುಂಬದ ಜೀವನ ನಿರ್ವಹಣೆ ನಡೆಯುತ್ತಿತ್ತು.

ಕೆ. ಪುಟ್ಟಸ್ವಾಮಿಯವರು ಅರಕೆರೆಯಲ್ಲಿ ಕಳೆದ ಬಾಲ್ಯದ ಜೀವನ ಪರಿಸರ ಸಹಜವಾಗಿಯೇ ಅವರ ಮೇಲೆ ಪರಿಣಾಮಬೀರಿತು. ಅರಕೆರೆ ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿರುವ ಹೋಬಳಿ ಕೇಂದ್ರ. ಕಾವೇರಿ ನದಿಯ ತಟವಲ್ಲಿರುವ ಈ ಊರಿಗೆ ರಾಜರುಗಳ ಕಾಲದಿಂದಲೂ ನೀರಾವರಿ ಸೌಲಭ್ಯದ ಶ್ರೀರಕ್ಷೆ ಇದ್ದಿತು. ಚಿಕ್ಕದೇವರಾಯ ನಾಲೆ ಇಲ್ಲಿನ ಗದ್ದೆಗಳಿಗೆ ನೀರುಣಿಸುತ್ತದೆ. ಈ ಊರಿನ ಸುತ್ತಮುತ್ತ ಎತ್ತ ನೋಡಿದರೂ ಐತಿಹಾಸಿಕ ಸ್ಥಳಗಳೇ ಕಂಡುಬರುತ್ತವೆ. ನಿಡುದೂರದಲ್ಲೇ ಗಂಗರ ಪ್ರಸಿದ್ಧ ರಾಜಧಾನಿ ತಲಕಾಡಿದೆ. ಸನಿಯದಲ್ಲಿರುವುದು ಆ ಕಾಲದಲ್ಲೇ ಸುಸ್ಥಾಪಿತವಾಗಿದ್ದ

ಬನ್ನೂರು. ವಿಜಯನಗರದ ಕಾಲದಲ್ಲಿ ಪಾಳೆಯಪಟ್ಟಾಗಿದ್ದ ಶಿವನಸಮುದ್ರ ಸಮೀಪದಲ್ಲೇ ಇದೆ. ಉತ್ತರಕ್ಕೆ ತಿರುಗಿದರೆ ತೊಣ್ಣೂರು, ಮೇಲುಕೋಟೆಗಳಂತಹ ಹೊಯ್ಸಳರ ಕಾಲದ ಪ್ರಸಿದ್ಧ ರಾಜಕೀಯ, ಧಾರ್ಮಿಕ ಕೇಂದ್ರಗಳು. ಪ್ರಾಚೀನ ಧರ್ಮ ಕ್ಷೇತ್ರವಾಗಿದ್ದು ಮೈಸೂರು ಅರಸರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದು ರಾಜಧಾನಿಯಾಗಿ ಕಂಗೊಳಿಸಿದ್ದು ಶ್ರೀರಂಗಪಟ್ಟಣ. ಅದೇ ಈಗಲೂ ತಾಲ್ಲೂಕು ಕೇಂದ್ರ. ಮೈಸೂರು ನಗರವೂ ಇಲ್ಲಿಂದ ದೂರದ ಸ್ಥಳವಲ್ಲ. ಹೀಗೆ ಇತಿಹಾಸಾರಂಭ ಕಾಲದಿಂದಲೂ ಆಧುನಿಕ ಕಾಲದವರೆಗೂ ನಾಗರಿಕ ಜೀವನದ ಪ್ರಭಾವ ವಲಯದಲ್ಲೇ ಬೆಳೆದು ಬಂದದ್ದು ಅರಕೆರೆ. ಆದರಿಂದಲೇ ಇಲ್ಲಿ ಕಲೆ ಮತ್ತು ಸಂಸ್ಕೃತಿಗಳು ಜನ ಜೀವನದಲ್ಲಿ ಹಾಸುಹೊಕ್ಕಾಗಿದ್ದವು.

ಆದರೆ ಗ್ರಾಮೀಣ ಜೀವನ ವಿಧಾನದಲ್ಲಿ ಅಂತಹ ಮಾರ್ಪಾಟಾಗಲಿಲ್ಲ. ಅದಕ್ಕೆ ಮುಖ್ಯ ಕಾರಣ ವಿದ್ಯೆಯಿಂದ ಇಲ್ಲಿನ ಜನಸಾಮಾನ್ಯರು ದೂರವಿದ್ದದ್ದು. ಹೊಯ್ಸಳ ವಿಷ್ಣುವರ್ಧನನು ಶ್ರೀ ರಾಮಾನುಜಾಚಾರ್ಯರ ಪ್ರೇರಣೆಯಿಂದಾಗಿ ಶ್ರೀ ವೈಷ್ಣವರಿಗೆ ಶ್ರೀರಂಗಪಟ್ಟಣದ ಅಷ್ಟ ಗ್ರಾಮಗಳ ದತ್ತಿ ನೀಡಿದನು. ಇದರಿಂದಾಗಿ ಮುಂದೆ ಮೈಸೂರು ಅರಸರ ಕಾಲದವರೆಗೂ ಅಷ್ಟಗ್ರಾಮ ವಿಭಾಗವೆಂಬ ಕಂದಾಯ ವಿಭಾಗವೇ ಅಸ್ತಿತ್ವದಲ್ಲಿದ್ದಿತು. ಶ್ರೀ ವೈಷ್ಣವ ಐಯ್ಯಂಗಾರರು ಇಲ್ಲಿನ ದೊಡ್ಡ ದೊಡ್ಡ ನೀರಾವರಿ ಜಮೀನುಗಳ ಒಡೆಯರಾದರು. ಈ ಜಮೀನ್ದಾರಿ ಪದ್ಧತಿ ರೈತಾಪಿ ವರ್ಗ ವಿಧೇಯತೆಯನ್ನು ಮೈಗೂಡಿಸಿಕೊಳ್ಳಲು ಆಸ್ಪದ ನೀಡಿತು. ರಾಜನಿಷ್ಠೆ ಮತ್ತು ಗೌಡ ಶಾನುಭೋಗರ ಬಗ್ಗೆ ಅಂಜಿಕೆ ಇಲ್ಲಿನ ಸಾರ್ವಜನಿಕ ಜೀವನದ ಭಾಗವಾಗಿದ್ದವು. ಜೀವನಕ್ಕೆ ಕೊರತೆ ಇಲ್ಲದಿದ್ದರೂ ಹೆಚ್ಚಿನ ಸವಲತ್ತುಗಳಿಂದ ದೂರವುಳಿದ ಸಮಾಜದ ಭಾಗವಾಗಿ ಇಲ್ಲಿನ ಜೀವನ ಪರಿಸ್ಥಿತಿ ಇದ್ದಿತು.

ಕಳಸ್ತವಾಡಿ ಲಿಂಗೇಗೌಡರ ಕುಟುಂಬ ದೊಡ್ಡದು. ಅವರಿಗೆ ಮೊದಲನೆ ಪತ್ನಿಯಲ್ಲಿ ಒಬ್ಬ ಹೆಣ್ಣು ಮಗಳು ನಾಲ್ವರು ಗಂಡು ಮಕ್ಕಳು. ಎರಡನೆ ಪತ್ನಿಗೆ ಒಬ್ಬ ಮಗ ಇದ್ದರು. ಇಂತಹ ದೊಡ್ಡ ಸಂಸಾರದಲ್ಲಿ ಬೆಳೆದ ಪುಟ್ಟಸ್ವಾಮಿಯವರು ಹೊಂದಿಕೊಂಡು ಬದುಕುವುದನ್ನು ಎಳೆಯದರಲ್ಲೇ ಕಲಿತುಕೊಂಡರು. ಅವರ ಪ್ರಾಥಮಿಕ ಶಿಕ್ಷಣ ಅರಕೆರೆಯಲ್ಲೇ ನಡೆಯಿತು. ಬಡತನದ ನಡುವೆಯೂ ಓದುವ ಹಂಬಲ ಅವರದಾಗಿತ್ತು. ಅವರ ತಂದೆ ಅಲ್ಪಸ್ವಲ್ಪ ವಿದ್ಯೆ ಕಲಿತಿದ್ದರಿಂದ ಮಗನ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಿದರು. ಪುಟ್ಟಸ್ವಾಮಿಯವರನ್ನು ಮೈಸೂರಿನ ಒಕ್ಕಲಿಗ ವಿದ್ಯಾರ್ಥಿನಿಲಯಕ್ಕೆ ಸೇರಿಸಿದರು. ಅವರಿವರ ಸಹಕಾರದಿಂದಲೂ ಪ್ರೌಢಶಾಲೆ ವಿದ್ಯಾಭ್ಯಾಸ ಮುಗಿಸಿದರು. ಅವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅಲ್ಲಿಗೆ ಅವರ ಶಿಕ್ಷಣದ ಒಂದು ಹಂತ ಮುಗಿಯಿತು.

ಕೆ.ಪುಟ್ಟಸ್ವಾಮಿಯವರು ಹೆಚ್ಚಿನದನ್ನು ಸಾಧಿಸಲು ಹಂಬಲ ಉಳ್ಳ ಮಹತ್ವಾಕಾಂಕ್ಷೆಯ ವ್ಯಕ್ತಿಯಾಗಿದ್ದರು. ಈ ಬುದ್ಧಿವಂತ ವಿದ್ಯಾರ್ಥಿಗೆ ಪ್ರೋತ್ಸಾಹದ ಅಗತ್ಯವಿದ್ದಿತು. ಆಗ ಅವರ ನೆರವಿಗೆ ಬಂದವರು ಅನೇಕರು. ಹಿರಿಯರ ಮಾರ್ಗದರ್ಶನದಲ್ಲಿ ಮೈಸೂರಿನಲ್ಲಿ ಇಂಟರ್‌ಮೀಡಿಯೇಟ್ ಶಿಕ್ಷಣಕ್ಕೆ ಮಹಾರಾಜ ಕಾಲೇಜು ಸೇರಿದರು. ಮುಂದೆ ಬಿ.ಎ.ಆನರ್ಸ್ ಪದವಿಗಳಿಸುವವರೆಗೂ ಅವರ ವಿದ್ಯಾಭ್ಯಾಸ ಅವಿರತವಾಗಿ ಸಾಗಿತು. ಈ ಅವಧಿ ಅವರ

ಜೀವನದ ಮಹತ್ವದ ಘಟ್ಟವಾಗಿದ್ದಿತು. 1930ರ ದಶಕ ಸ್ವಾತಂತ್ರ್ಯ ಹೋರಾಟ ದೃಢಗೊಳ್ಳುತ್ತ ಬಂದ ಕಾಲ. ಆಗ ಕಾಲೇಜು ವಿದ್ಯಾರ್ಥಿಗಳ ಪಾತ್ರವೂ ದೊಡ್ಡದಿದ್ದಿತು. 1938ರಲ್ಲಿ ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹ ಚಳವಳಿಯಲ್ಲಿ ಕೆ. ಪುಟ್ಟಸ್ವಾಮಿಯವರು ವಿದ್ಯಾರ್ಥಿ ಕಾರ್ಯಕರ್ತರಾಗಿ ಭಾಗವಹಿಸಿದರು. ಮಹಾರಾಜ ಕಾಲೇಜಿನ ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿ ಜವಾಬ್ದಾರಿ ನಿರ್ವಹಿಸಿದರು. ವಿದ್ಯಾರ್ಥಿಗಳ ನಡುವೆ ಏರ್ಪಡುತ್ತಿದ್ದ ಚರ್ಚಾಗೋಷ್ಠಿಗಳಲ್ಲಿ ಭಾಗವಹಿಸಿ ಅನೇಕ ಬಹುಮಾನಗಳನ್ನು ಗಳಿಸಿದರು. ನಿಷ್ಠಾವಂತ ಕಮ್ಯುನಿಷ್ಟರಾಗಿದ್ದ ಡಿ. ಕೃಷ್ಣಮೂರ್ತಿ, ಮಾಜಿ ಸಚಿವರಾದ ಹುಚ್ಚಮಾಸ್ತಿಗೌಡ ಮೊದಲಾದವರು ಅವರ ಸಹಪಾಠಿಗಳು. ಕುವೆಂಪು, ನಾ.ಕಸ್ತೂರಿಯವರಂತಹ ಧೀಮಂತರು ಅವರ ಗುರುವರ್ಯರು, ಶ್ರೀ ರಾಮಕೃಷ್ಣಾಶ್ರಮಕ್ಕೂ ಅವರು ಆಗಾಗ ಹೋಗಿಬರುತ್ತಿದ್ದರು. ವಯಸ್ಕರ ಶಿಕ್ಷಣದ ಪ್ರಸಾರ ಮತ್ತು ಗ್ರಾಮ ನೈರ್ಮಲ್ಯದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಸಾಹುಕಾರ್ ಚನ್ನಯ್ಯನವರು ಸ್ಥಾಪಿಸಿದ್ದ ವಿದ್ಯಾರ್ಥಿನಿಲಯದಲ್ಲಿ ವ್ಯವಸ್ಥಾಪಕರಾಗಿ ಕೆಲಸ ಮಾಡಿದರು. ಇಂತಹ ಚಟುವಟಿಕೆ ಭರಿತ ವಿದ್ಯಾರ್ಥಿ ಜೀವನ ಅವರದಾಗಿದ್ದಿತು. ಇದು ಅವರಲ್ಲಿ ಮುಂದಾಳುತನ ಬೆಳೆಯಲು ಸಹಕಾರಿಯಾಯಿತು.

ಬಿ.ಎ.ಆನರ್ಸ್ ಪದವಿಗಳಿಸಿದ ಪುಟ್ಟಸ್ವಾಮಿಯವರು ಅಂದು ಅತ್ಯಂತ ಪ್ರತಿಷ್ಠಿತ ವೃತ್ತಿ ಎನಿಸಿದ್ದ ವಕೀಲಗಿರಿ ಮಾಡುವ ಗುರಿ ಇಟ್ಟುಕೊಂಡಿದ್ದರು. ಅದಕ್ಕಾಗಿ ಅವರು ಎಲ್.ಎಲ್.ಬಿ. ಪದವಿ ಮಾಡುವ ಅಗತ್ಯವಿದ್ದಿತು. ಆಗ ಕಾನೂನು ಶಿಕ್ಷಣ ಸಹ ಸಾಮಾನ್ಯರ ಕೈಗೆಟುಕುವಂತಿರಲಿಲ್ಲ. ಪೂನಾದಲ್ಲಿ ಮಾತ್ರ ಅದು ಲಭ್ಯ, ಪುಟ್ಟಸ್ವಾಮಿಯವರಿಗೆ ಸುಲಭವಾಗಿ ಅಲ್ಲಿಗೆ ಹೋಗಿ ವ್ಯಾಸಂಗ ಮಾಡುವುದು ಸಾಧ್ಯವಿರಲಿಲ್ಲ. ಆದರೆ ಮನಸ್ಸಿದ್ದರೆ ಮಾರ್ಗ ಎಂಬ ಗಾದೆಯ ಮಾತಿನಂತೆ ಅವರ ಧ್ಯೇಯಕ್ಕನುಗುಣವಾದ ಸಹಾಯವೂ ದೊರೆಯಿತು. ಅರಕೆರೆ ಸಮೀಪದ ಗ್ರಾಮದ ಕರಿಘಟ್ಟೇಗೌಡ ಎಂಬ ಅನುಕೂಲಸ್ಥರು ಇವರ ನೆರವಿಗೆ ಬಂದರು. ವಿದ್ಯೆ ಕಲಿಯುವವರಿಗೆ ಪ್ರೋತ್ಸಾಹ ನೀಡಬೇಕೆಂಬ ಮನೋಭಾವ ಕೆಲವರಲ್ಲಾದರೂ ಉಂಟಾಗುತ್ತಿದ್ದ ಕಾಲವದು. ತಂದೆಯವರ ಬೆಂಬಲ ಮತ್ತು ಕರಿಘಟ್ಟೇಗೌಡರ ಸಹಾಯದಿಂದಾಗಿ ಅವರು ಪೂನಾಕ್ಕೆ ಹೋಗಿ ಕಾನೂನು ಶಿಕ್ಷಣ ಪಡೆಯುವುದು ಸಾಧ್ಯವಾಯಿತು. 1942ರ ಹೊತ್ತಿಗೆ ಇವರ ಕಾನೂನು ವ್ಯಾಸಂಗ ಮುಗಿದು ಮೈಸೂರಿನಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು. ಶ್ರೀಯುತರ ಸಹೋದರರಲ್ಲೊಬ್ಬರಾದ ಶ್ರೀ. ಕೆ.ಎಲ್. ಶಂಕರಯ್ಯನವರು ವೈದ್ಯರಾಗಿದ್ದು ನಿವೃತ್ತರಾಗಿದ್ದಾರೆ. ಹೀಗೆ ಇವರ ಕುಟುಂಬದಿಂದ ವಿದ್ಯಾವಂತರು ಬಂದರು.

ಕೆ. ಪುಟ್ಟಸ್ವಾಮಿಯವರ ವಿದ್ಯಾಭ್ಯಾಸ ಜೀವನ ಮುಗಿದು ಅವರು ಸ್ವತಂತ್ರ ಜೀವನ ಆರಂಭಿಸುವ ಕಾಲಕ್ಕೆ ದೇಶದಲ್ಲಿ ಮಹತ್ತರ ಘಟನೆಗಳಾಗುತ್ತಿದ್ದವು. ಸ್ವಾತಂತ್ರ್ಯ ಚಳವಳಿಯು ಉತ್ತುಂಗ ಸ್ಥಿತಿ ತಲುಪಿತ್ತು. 1942ರ ಕ್ವಿಟ್ ಇಂಡಿಯಾ ಚಳವಳಿ ಪಟ್ಟಣ ಗ್ರಾಮಗಳೆನ್ನದೆ ಎಲ್ಲೆಡೆ ವ್ಯಾಪಿಸುತ್ತಿತ್ತು. ಪುಟ್ಟಸ್ವಾಮಿಯವರ ಹುಟ್ಟೂರಾದ ಅರಕೆರೆ ಆಗಲೇ ಕೆಲವು ಸಾವಿರ ಜನಸಂಖ್ಯೆ ಹೊಂದಿದ್ದ ದೊಡ್ಡ ಊರು. ಅಲ್ಲಿನ ಯುವಕರು ವಿದ್ಯಾಭ್ಯಾಸಕ್ಕಾಗಿ ಮತ್ತು ಜೀವನದಲ್ಲಿ ಹೊಸ ಹೊಸ ಅವಕಾಶಗಳನ್ನು ಕಂಡುಕೊಳ್ಳಲು ಸಾರ್ವಜನಿಕ ಕ್ಷೇತ್ರಕ್ಕೆ ಧಾವಿಸುತ್ತಿದ್ದ ಕಾಲ ಅದು. ಅರಕೆರೆಯವರಾಗಿದ್ದ ಐಯ್ಯಂಗಾರ್ ಮನೆತನದ ಎ. ಚನ್ನಕೇಶವಯ್ಯ ಮತ್ತು

ಟಿ. ಚನ್ನಕೇಶವಯ್ಯ ಎಂಬುವರು ಆಗ ಮೈಸೂರು ನಗರದ ಪ್ರಸಿದ್ಧ ವಕೀಲರಾಗಿದ್ದರು. ಕುವೆಂಪು ಅವರ ಸಹಪಾಠಿಗಳಾಗಿದ್ದು ಸುದೈವವಶಾತ್ ಈಗಲೂ ನಮ್ಮೊಂದಿಗಿರುವ ಪಿ. ಮಲ್ಲಯ್ಯನವರು ಅರಕೆರೆಯವರಾಗಿದ್ದು ಮುಂದೆ ಮಂಡ್ಯದಲ್ಲಿ ನೆಲಸಿ ವಕೀಲರೂ ಮತ್ತು ಶಿಕ್ಷಣ ಸಂಸ್ಥೆಗಳ ನೇತಾರರೂ ಆದರು. ಹಾಲಿ ಶ್ರೀರಂಗಪಟ್ಟಣ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರ ಸಂಘದ ಅಧ್ಯಕ್ಷರಾಗಿರುವ ಶ್ರೀ. ಎ. ಕೆಂಚಯ್ಯನವರು ಶ್ರೀ. ಕೆ. ಪುಟ್ಟಸ್ವಾಮಿಯವರ ಓರಗೆಯವರಾಗಿದ್ದು ಅರಕೆರೆ ಊರಿನವರು. ಶಾಸಕರಾಗಿದ್ದ ದಿವಂಗತ ಎ.ಜಿ. ಬಂದೀಗೌಡರು, ವಕೀಲರಾಗಿದ್ದ ಎ.ಸಿ. ಭೈರಪ್ಪನವರು, ಹೈಕೋರ್ಟ್ ನ್ಯಾಯಾಧೀಶರಾಗಿದ್ದ ಎ.ಜಿ. ಸದಾಶಿವರವರು, ಮಂಡ್ಯ ನಗರ ವಾಸಿಗಳಾದ ಶ್ರೀ ಎ.ಸಿ. ಮಾದೇಗೌಡರು ಮೊದಲಾದವರು ಈ ಕಾಲದ ಉತ್ಸಾಹಿ ತರುಣರಾಗಿದ್ದು ಜೀವನದ ಹೊಸ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲು ಆಸಕ್ತರಾಗಿದ್ದವರು. ಇವರಲ್ಲಿ ಅನೇಕರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡವರು, ಸುಭಾಷ್ ಚಂದ್ರಬೋಸರ ಅಣ್ಣ ಶರತ್‌ಚಂದ್ರಬೋಸ್, ನಾರಿಮನ್ ಮೊದಲಾದವರ ಭಾಷಣಗಳು ಇವರ ಮೇಲೆ ಪ್ರಭಾವ ಬೀರಿದ್ದವು. ಇಂತಹ ಯುವ ತಂಡದ ನಡುವೆ ಬೆಳೆದ ಪುಟ್ಟಸ್ವಾಮಿಯವರು ತಮ್ಮ ವಾಕ್ಪಟುತ್ವದಿಂದ ಯುವಕರನ್ನು ಆಕರ್ಷಿಸುತ್ತಿದ್ದರು. 1942 ಮತ್ತು 1947ರ ಸ್ವಾತಂತ್ರ್ಯ ಚಳವಳಿಯಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡರು. ಜೈಲುವಾಸವನ್ನು ಅನುಭವಿಸಿದರು. ಶಿವಮೊಗ್ಗ ಜೈಲಿನಲ್ಲಿ ಕೆಲ ಕಾಲ ಇದ್ದರು. ಇಂತಹ ತ್ಯಾಗ ಮತ್ತು ಹೋರಾಟಗಳಿಂದ ಅವರು ಸದೃಢ ದೇಹದೊಂದಿಗೆ ವ್ಯಕ್ತಿತ್ವವನ್ನೂ ಬೆಳಸಿಕೊಂಡರು. ಮೈಸೂರಿನ ಎಂ.ಎನ್. ಜೋಯಿಸ್, ಹೆಚ್.ಸಿ. ದಾಸಪ್ಪ, ತಿ.ತಾ. ಶರ್ಮ ಮುಂತಾದವರು ಇವರಲ್ಲಿ ಸ್ಫೂರ್ತಿ ತುಂಬಿದರು.

ತುಮುಲದ ದಶಕವಾದ 1940ರ ದಶಕವು ಪುಟ್ಟಸ್ವಾಮಿಯವರ ಜೀವನಕ್ಕೆ ಭದ್ರ ಬುನಾದಿ ಒದಗಿಸಿದ ದಶಕವಾಯಿತು. ಅವರು 1943ರಲ್ಲಿ ಅರಕೆರೆಯ ಸಮೀಪವಿರುವ ಬನ್ನೂರಿನ ಗವೀಗೌಡ ಮತ್ತು ಚಿಕ್ಕತಾಯಮ್ಮ ದಂಪತಿಗಳ ಮಗಳು ಕುಮಾರಿ ಜಯಲಕ್ಷ್ಮಮ್ಮನವರನ್ನು ಕೈಹಿಡಿದರು. ಈ ವಿವಾಹಕ್ಕೆ ನಿಮಿತ್ತರಾದವರು ಪುಟ್ಟಸ್ವಾಮಿಯವರ ಗುರುಗಳಾಗಿದ್ದು ಮುಂದೆ ಶತಾಯುಷಿಯಾಗಿ ಬದುಕಿದ ದಿವಂಗತ ಬೊಮ್ಮರಸೇಗೌಡರು. ಈ ಬನ್ನೂರಿನ ಮನೆಗೆ ಸಾಹುಕಾರ್ ಚನ್ನಯ್ಯನವರ ತಂಗಿಯನ್ನು ಕೊಟ್ಟಿದ್ದಿತು. ಈ ಕಾರಣವಾಗಿಯೂ ಸಾಹುಕಾರ್ ಚನ್ನಯ್ಯನವರ ನಿಕಟ ಸಂಪರ್ಕಕ್ಕೆ ಕೆ. ಪುಟ್ಟಸ್ವಾಮಿಯವರು ಬಂದರು. ಚನ್ನಯ್ಯನವರು ಮೈಸೂರು ಸಂಸ್ಥಾನದ ಪ್ರಮುಖ ಕಾಂಗ್ರೆಸ್ ಮುಖಂಡರಲ್ಲಿ ಒಬ್ಬರಾಗಿದ್ದರು. ಅವರ ಪ್ರೋತ್ಸಾಹ ದೊರೆತದ್ದು ಪುಟ್ಟಸ್ವಾಮಿಯವರ ಜೀವನದ ಮಹತ್ವದ ಘಟನೆಗಳಲ್ಲೊಂದಾಯಿತು. ಅವರು 1946ರಲ್ಲಿ ಮಂಡ್ಯಾ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದರು. ಮುಂದೆ 1948ರಲ್ಲಿ ಮೈಸೂರು ಜಿಲ್ಲೆಯಿಂದ ರಾಜ್ಯಾಂಗ ಸಭೆಗೆ ಚುನಾಯಿತರಾದರು. ಮೂವತ್ತರ ಹರೆಯದಲ್ಲೇ ಪುಟ್ಟಸ್ವಾಮಿಯವರು ಶಾಸಕರಾದದ್ದು ಅವರ ರಾಜಕೀಯ ಜೀವನದ ಶುಭಾರಂಭದ ಸೂಚನೆಯಾಗಿದ್ದಿತು.

ವಕೀಲಿ ವೃತ್ತಿ:-

ಕೆ. ಪುಟ್ಟಸ್ವಾಮಿಯವರು ಗಾಂಧಿ ಯುಗದ ಶಿಶು. ಅವರು ರಾಜಕೀಯ ಮತ್ತು ವಕೀಲಿ ವೃತ್ತಿಗಳೆರಡನ್ನು ಪವಿತ್ರ ಕಾರ್ಯಗಳೆಂದು ಬಗೆದವರು. ತಮ್ಮ ಕಾರ್ಯದಲ್ಲಿ ಪ್ರಾಮಾಣಿಕತೆ ಮತ್ತು ನಿಷ್ಠೆಯನ್ನು ಬೆಳೆಸಿಕೊಂಡಿದ್ದರು. ಅವರು ಪ್ರಾರಂಭದಲ್ಲಿ ಯತಿರಾಜನಾಯ್ಡು ಮತ್ತು ಲಕ್ಷ್ಮೀನಾರಾಯಣರಾಯರ ಬಳಿ ವಕೀಲಿ ಶಿಷ್ಯತ್ವ ಪಡೆದರು. ತರುವಾಯ ಆಗಿನ ಹಿರಿಯ ರಾಜಕಾರಿಣಿ ಮತ್ತು ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಹೆಚ್.ಸಿ. ದಾಸಪ್ಪನವರ ಬಳಿ ಶಿಷ್ಯವೃತ್ತಿ ಆರಂಭಿಸಿದರು. ಆಗಿನಿಂದ ಅವರ ಕಛೇರಿಯಲ್ಲಿ ದೀರ್ಘಕಾಲ ಇವರ ಪ್ರಾಕ್ಟೀಸ್ ಮುಂದುವರಿಯಿತು. ತರುವಾಯ ಸ್ವತಂತ್ರ ಕಛೇರಿ ತೆರೆದರು. ನಗರದ ಉತ್ತಮ ವಕೀಲರಲ್ಲೊಬ್ಬರಾಗಿ ಪುಟ್ಟಸ್ವಾಮಿಯವರು ರೂಪುಗೊಂಡರು. ಅವರ ವೃತ್ತಿಯಿಂದ ಅವರ ವ್ಯಕ್ತಿತ್ವವೂ ಮಾರ್ಪಾಟಾಯಿತು. ಯಾವುದೇ ವಿಚಾರದ ಬಗ್ಗೆಯೂ ಸರಿಯಾದ ಚಿಂತನೆಯ ಅನಂತರ ಪ್ರತಿಕ್ರಿಯಿಸುವ ಮತ್ತು ವಿಷಯಗಳನ್ನು ತಾರ್ಕಿಕವಾಗಿ ವಿಶ್ಲೇಷಿಸುವ ಹಾಗೂ ಸಮಸ್ಯೆಗಳ ಸೂಕ್ಷ್ಮತೆಯನ್ನು ಗ್ರಹಿಸುವ ಗುಣಸಾಮರ್ಥ್ಯಗಳು ಅವರಿಗೆ ಕರಗತವಾದವು. ಇದರಿಂದಾಗಿ ಅವರು ಶಾಸನಸಭೆಯಲ್ಲಿ ಪ್ರಸ್ತಾಪವಾಗುವ ಯಾವುದೇ ವಿಚಾರದ ಬಗ್ಗೆಯಾಗಲಿ ಪ್ರಬುದ್ಧವಾಗಿ ಮಾತನಾಡುವ ಮತ್ತು ವಿನೂತನ ಚಿಂತನೆಗಳನ್ನು ಮುಂದಿಡುವ ಶಕ್ತಿಯನ್ನು ಪಡೆದರು. ಅವರು ತಮ್ಮ ವಕೀಲಿ ವೃತ್ತಿಯನ್ನು 1962ರಲ್ಲಿ ಅವರು ಸಚಿವರಾಗುವವರೆಗೂ ಮುಂದುವರಿಸಿದರು.

ಶಾಸಕಾಂಗದಲ್ಲಿ ಸೋಲರಿಯದ ಸರದಾರ:-

ಪುಟ್ಟಸ್ವಾಮಿಯವರು 1952ರ ಮಹಾಚುನಾವಣೆಯಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನಿಂದ ವಿಧಾನ ಸಭೆಗೆ ಸ್ಪರ್ಧಿಸಿದರು, ಅದರಲ್ಲಿ ಜಯಶೀಲರಾದರು. ಆಗ ಕೆಂಗಲ್ ಹನುಮಂತಯ್ಯನವರು ಮುಖ್ಯ ಮಂತ್ರಿಗಳು. ಆಗ ಕಡಿದಾಳ್ ಮಂಜಪ್ಪ, ಟಿ. ಮರಿಯಪ್ಪ, ಚೆನ್ನಬಸಪ್ಪ, ಟಿ. ಸಿದ್ದಲಿಂಗಯ್ಯ, ಕೆ.ಟಿ. ಭಾಷ್ಯಂ ಮೊದಲಾದ ಸ್ವಾತಂತ್ರ್ಯ ಹೋರಾಟಗಾರರು ಕಾಂಗ್ರೆಸ್ ಮಂತ್ರಿಮಂಡಲದ ಸದಸ್ಯರು. ಪುಟ್ಟಸ್ವಾಮಿಯವರು ವಯಸ್ಸಿನಲ್ಲಿ ಕಿರಿಯರಾದರೂ ಚರ್ಚೆಯಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಿದರು. ಸರಿ ಅನ್ನಿಸಿದ್ದನ್ನು ಹೇಳದೆ ಬಿಡುತ್ತಿರಲಿಲ್ಲ. ಆಗ ಸಾಹುಕಾರ್ ಚೆನ್ನಯ್ಯನವರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರು. ಹನುಮಂತಯ್ಯನವರು ಪುಟ್ಟಸ್ವಾಮಿಯವರ ಬಗ್ಗೆ ಪ್ರಾರಂಭದಲ್ಲಿ ಬಿಗುವಾಗಿಯೇ ಇದ್ದರು. ಆದರೆ ಇದು ತರವಲ್ಲ ಎಂಬ ಅಂಶವನ್ನು ಮಾಜಿ ಶಾಸಕ ಡಾ. ಸಿ. ಬಂದೀಗೌಡರು ಹನುಮಂತಯ್ಯನವರ ಗಮನಕ್ಕೆ ತಂದಾಗ ಅವರು ತಮ್ಮ ನಿಲುವನ್ನು ತಿದ್ದಿಕೊಂಡು ಪುಟ್ಟಸ್ವಾಮಿ ಅವರನ್ನು ವಿಶ್ವಾಸದಿಂದ ಕಾಣತೊಡಗಿದರು.

ಈ ಅವಧಿಯಲ್ಲಿ ಭೂಸುಧಾರಣೆ ಮಾಡುವ ಬಗ್ಗೆ ದೇಶಾದ್ಯಂತ ಮಾತು ಕೇಳಿ ಬರುತ್ತಿತ್ತು. ಆದರೆ ಯಾವ ಸರ್ಕಾರವೂ ಧೈರ್ಯದಿಂದ ಅದನ್ನು ಕೈಗೆ ತೆಗೆದುಕೊಂಡಿರಲಿಲ್ಲ. ಆಗ ಕಂದಾಯ ಸಚಿವರಾಗಿದ್ದ ಕಡಿದಾಳ್ ಮಂಜಪ್ಪನವರು ಈ ಬಗ್ಗೆ ಕಳಕಳಿ ಉಳ್ಳವರಾಗಿದ್ದರು. ಆಗ ಶಾಸಕರಾಗಿದ್ದ ಪುಟ್ಟಸ್ವಾಮಿಯವರು ಮತ್ತು ಮಾಜಿ ಶಾಸಕರಾದ ಡಾ. ಸಿ. ಬಂದೀಗೌಡರು ಶ್ರೀರಂಗಪಟ್ಟಣ ತಾಲ್ಲೂಕಿನ ಗೇಣೀದಾರರ ದುಃಸ್ಥಿತಿಯನ್ನು ಕಡಿದಾಳ್ ಮಂಜಪ್ಪನವರಲ್ಲಿ

ವಿವರಿಸಿದರು. ಆಗ ಮಂಜಪ್ಪನವರು ಸ್ಥಳ ತನಿಖೆಮಾಡಲು ಖುದ್ದಾಗಿ ಶ್ರೀರಂಗಪಟ್ಟಣಕ್ಕೆ ಮುಂದಾಗಿಯೇ ತಿಳಿಸಿ ಬಂದರು. ಜಮೀನ್ದಾರರೆಲ್ಲ ತಮ್ಮ ಮಾತನ್ನು ಕೇಳದೆ ಮಂತ್ರಿಗಳು ಇನ್ನಾರ ಮಾತನ್ನು ಕೇಳುತ್ತಾರೆಂಬ ಆತ್ಮವಿಶ್ವಾಸದಿಂದ ತುಂಬಾ ಕಡಿಮೆ ಸಂಖ್ಯೆಯಲ್ಲಿ ಬಂದರು. ಈ ಶಾಸಕದ್ವಯರ ಉತ್ತೇಜನದಿಂದಾಗಿ ಗೇಣಿ ರೈತರು ದೊಡ್ಡ ಸಂಖ್ಯೆಯಲ್ಲೇ ಬಂದರು. ಕಂದಾಯ ಸಚಿವ ಕಡಿದಾಳ್ ಮಂಜಪ್ಪನವರಿಗೆ ಪರಿಸ್ಥಿತಿಯ ಅರಿವಾಯಿತು. ಅವರು ಹಿಂದಿರುಗಿದವರು ಕೂಡಲೇ ಶ್ರೀರಂಗಪಟ್ಟಣದಲ್ಲಿ ಪ್ರಯೋಗಾರ್ಥವಾಗಿ ಗೇಣಿಶಾಸನ ಜಾರಿಗೆ ತಂದರು. ಡಾ. ಸಿ. ಬಂದೀಗೌಡರ ಪ್ರಕಾರ ಇದು ದೇಶದಲ್ಲೇ ಪ್ರಥಮ ಪ್ರಯೋಗ. ಇದರಿಂದ ಗೇಣೀದಾರರನ್ನು ಬದಲಾಯಿಸುವುದು ಜಮೀನ್ದಾರರಿಗೆ ಕಷ್ಟವಾಯಿತು. ಈ ರೀತಿ ಪುಟ್ಟಸ್ವಾಮಿಯವರು ಶ್ರೀಮಂತರ ಒಡನಾಟದಲ್ಲಿದ್ದರೂ ಬಡವರ ಪರವಾಗಿ ಹೋರಾಡುವ ಬದ್ಧತೆ ಇಟ್ಟುಕೊಂಡಿದ್ದರು. ಹೆಚ್ಚು ಜನಪ್ರಿಯತೆಯನ್ನು ಗಳಿಸಿದರು.

1957ರ ವಿಧಾನ ಸಭಾ ಚುನಾವಣೆ ಬಂದಾಗ ಪುಟ್ಟಸ್ವಾಮಿಯವರು ತಮ್ಮ ಕ್ಷೇತ್ರವನ್ನು ಬದಲಾಯಿಸಿದರು. ತಾವು ವಕೀಲಿ ವೃತ್ತಿ ನಡೆಸುತ್ತಿದ್ದ ಮತ್ತು ವಾಸವಾಗಿದ್ದ ಮೈಸೂರು ನಗರದ ಸುತ್ತವಿದ್ದ ಮೈಸೂರು ತಾಲ್ಲೂಕಿನ ಚಾಮುಂಡೇಶ್ವರಿ ವಿಧಾನ ಸಭಾ ಕ್ಷೇತ್ರದಿಂದ ಸ್ಪರ್ಧಿಸಿದರು. ಹೀಗೆ ಕ್ಷೇತ್ರ ಬದಲಾಯಿಸಲು ಅವರಿಗೆ ಇನ್ನೊಂದು ಮುಖ್ಯ ಕಾರಣವಿತ್ತು, ಅವರು ಶಾಸಕರಾಗಿದ್ದಾಗಲೇ ಅಂದರೆ 1952-53ರ ಅವಧಿಯಲ್ಲಿ ಮೈಸೂರು ನಗರ ಪುರಸಭೆಯ ಸದಸ್ಯರಾಗಿ ಚುನಾಯಿತರಾಗಿದ್ದರು. ಎರಡು ವರ್ಷಗಳ ಕಾಲ ಅದರ ಅಧ್ಯಕ್ಷರೂ ಆದರು. ಇದರಿಂದ ಈ ಅವಧಿಯಲ್ಲಿ ಮೈಸೂರು ನಗರದಲ್ಲಿ ಅವರು ಗಳಿಸಿದ ಜನಬಳಕೆಯೂ ಅವರ ಈ ಕ್ಷೇತ್ರ ಬದಲಾವಣೆಯ ನಿರ್ಧಾರಕ್ಕೆ ಕಾರಣವಾಗಿರಬೇಕು. 1957ರ ಚುನಾವಣೆಯಲ್ಲಿ ಅವರು ಸುಲಭ ಜಯಗಳಿಸಿದರು.

ಹೀಗೆ ಮೂರನೆಯ ಬಾರಿಗೆ ವಿಧಾನ ಸಭಾ ಸದಸ್ಯರಾದರೂ ಪುಟ್ಟಸ್ವಾಮಿಯವರಿಗೆ ಸಚಿವರಾಗುವ ಅವಕಾಶದೊರೆಯಲಿಲ್ಲ. ಆದರೆ ಅದರಿಂದ ನಿರಾಶರಾಗದೆ ಅವರು ಶಾಸನ ಸಭಾ ಕಲಾಪಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು. 1962ರ ಚುನಾವಣೆಯ ಹೊತ್ತಿಗೆ ರಾಜ್ಯದ ರಾಜಕೀಯದಲ್ಲಿ ಕೆಲವೊಂದು ಬದಲಾವಣೆಗಳಾದವು. ಸಾಹುಕಾರ್ ಚನ್ನಯ್ಯನವರು ಜನತಾ ಪಕ್ಷವೆಂಬ ಪಕ್ಷವನ್ನು ಕಟ್ಟಿ ಕಾಂಗ್ರೆಸ್‌ನಿಂದ ಬೇರೆಯಾದರು. ಕೆ. ಪುಟ್ಟಸ್ವಾಮಿಯವರು ಕಾಂಗ್ರೆಸ್ ಪಕ್ಷದಲ್ಲೇ ಉಳಿದರು. ಅವರು ಆ ವರ್ಷದ ವಿಧಾನ ಸಭಾ ಚುನಾವಣೆಯಲ್ಲಿ ಜಯಶೀಲರಾದರು. ಆ ನಂತರ ರಚನೆಯಾದ ಮಂತ್ರಿಮಂಡಲ ಸೇರುವ ಅವಕಾಶ ಇವರಿಗೆ ಒದಗಿತು. ಸಾಹುಕಾರ್ ಚನ್ನಯ್ಯನವರಿಲ್ಲದ ಕಾಂಗ್ರೆಸ್‌ನಲ್ಲಿ ಪುಟ್ಟಸ್ವಾಮಿಯುವರು ಶ್ರೀ ಎಸ್. ನಿಜಲಿಂಗಪ್ಪನವರನ್ನು ಪೂರ್ಣವಾಗಿ ಬೆಂಬಲಿಸಿದ್ದು ಅವರಿಗೆ ಸಚಿವ ಸ್ಥಾನ ಸಿಗಲು ಕಾರಣವಾಯಿತೆಂಬುದು ಆಗಿನ ಕಾಲದ ರಾಜಕೀಯ ವಿದ್ಯಮಾನಗಳನ್ನು ಬಲ್ಲ ಹಿರಿಯರೊಬ್ಬರ ಅಭಿಪ್ರಾಯ. ಇದೇನೆ ಇರಲಿ ಈ ಅನುಭವಿ ರಾಜಕಾರಣಿ ಮುಂದೆ ಸುಮಾರು ಒಂದು ದಶಕದ ಕಾಲ ಸಚಿವ ಸಂಪುಟದ ಸದಸ್ಯರಾಗಿ ವಿವಿಧ ಖಾತೆಗಳನ್ನು ನಿರ್ವಹಿಸಿದರು.

ಪುಟ್ಟಸ್ವಾಮಿಯವರು 1962ರಲ್ಲಿ ಪೌರಾಡಳಿತ ಸಚಿವರಾದರು. ಸ್ವತಃ ಮೈಸೂರು ನಗರದ ಪುರಸಭಾ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಅವರು ಈ ಇಲಾಖೆಯ ಸಮಸ್ಯೆಗಳನ್ನು ಚೆನ್ನಾಗಿ ಅರಿತವರಾಗಿದ್ದರು. 1965 ರಿಂದ ಸಹಕಾರ ಮತ್ತು ವಸತಿ ಸಚಿವರಾದರು. 1967ರ ಸಾರ್ವತ್ರಿಕ ಚುನಾವಣೆಯಲ್ಲಿ ಮೈಸೂರು ನಗರದಿಂದ ಮತ್ತೆ ವಿಧಾನಸಭೆಗೆ ಆಯ್ಕೆಯಾದರು, ಆ ನಂತರವೂ ಸಚಿವರಾಗಿಯೇ ಮುಂದುವರಿದರು. ಆರೋಗ್ಯ ಮತ್ತು ವಸತಿ ಖಾತೆಯನ್ನು ನಿರ್ವಹಿಸಿದರು. 1968 ರಿಂದ ಕಾನೂನು, ಕಾರ್ಮಿಕ ಮತ್ತು ಸಂಸದೀಯ ವ್ಯವಹಾರಗಳ ಖಾತೆಯ ಸಚಿವರಾದರು. 1971ರಲ್ಲಿ ಶ್ರೀ ವೀರೇಂದ್ರ ಪಾಟೀಲರ ಸರ್ಕಾರ ಪತನವಾಗುವವರೆಗೂ ಅವರೊಂದಿಗಿದ್ದರು. 1972ರಲ್ಲಿ ಇಂದಿರಾ ಕಾಂಗ್ರೆಸ್ ಸೇರಿ ಈ ಪಕ್ಷದ ವತಿಯಿಂದ ಮತ್ತೆ ವಿಧಾನ ಸಭೆ ಪ್ರವೇಶಿದರು. ವಿಧಾನ ಸಭೆಯಲ್ಲಿ ಹಿಂದಿನಂತೆಯೇ ಉತ್ಸಾಹದಿಂದ ಕಲಾಪದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು. 1978ರಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಮೈಸೂರು ನಗರದ ಚಾಮರಾಜ ಕ್ಷೇತ್ರದಿಂದ ಜಗಜೀವನರಾಮ್‌ರವರ ಕಾಂಗ್ರೆಸ್ ಫಾರ್ ಡೆಮಾಕ್ರಸಿ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿ ಮತ್ತೆ ವಿಧಾನ ಸಭಾ ಸದಸ್ಯರಾದರು. ಬಹುಶಃ ಹೀಗೆ ಏಳು ಬಾರಿ ಚುನಾವಣೆಯಲ್ಲಿ ನಿರಂತರವಾಗಿ ಜಯಶೀಲರಾಗುತ್ತ ಬಂದವರು. ಮೈಸೂರು ಜಿಲ್ಲೆಯಲ್ಲಿ ಇಬ್ಬರು ಮಾತ್ರವೆಂದು ಹೇಳಬಹುದು. ಇನ್ನೊಬ್ಬರು ಮಾಜಿ ಮುಖ್ಯಮಂತ್ರಿ ಡಿ. ದೇವರಾಜು ಅರಸು. ಕರ್ನಾಟಕದಲ್ಲೂ ಇದೊಂದು ವಿರಳವಾದ ದಾಖಲೆಯೇ ಸರಿ. ಈ ಒಂದು ಅಂಶವೇ ಅವರು ಎಂತಹ ಯಶಸ್ವಿ ರಾಜಕಾರಣಿಯಾಗಿದ್ದರೆಂಬುದನ್ನು ಸಾಬೀತುಪಡಿಸುತ್ತದೆ. ಆದರೆ ವಿಧಿ ಅವರನ್ನು ಹೆಚ್ಚು ಕಾಲ ಜೀವಿಸಲು ಬಿಡಲಿಲ್ಲ. 1978ರ ಚುನಾವಣೆಯಾದ ಸ್ವಲ್ಪ ಕಾಲದಲ್ಲೇ ಅಂದರೆ 1978ರ ಏಪ್ರಿಲ್ 30 ರಂದು ಅವರು ಹೃದಯಾಘಾತದಿಂದ ವಿಧಿವಶರಾದರು. ಇದರಿಂದಾಗಿ ರಾಜಕೀಯ ಕ್ಷೇತ್ರದಲ್ಲಿ ಮಹತ್ಸಾಧನೆ ಮಾಡಿದ್ದ ದಿಗ್ಗಜವೊಂದು ಕಣ್ಮರೆಯಾದಂತಾಗಿತ್ತು.

## ಉತ್ತಮ ಸಂಸದೀಯಪಟು

ಶ್ರೀ ಕೆ. ಪುಟ್ಟಸ್ವಾಮಿಯವರು ಮೂರು ದಶಕಗಳ ಕಾಲ ಅವಿರತವಾದ ಸಂಸದೀಯ ಜೀವನ ನಡೆಸಿದ ಹೆಗ್ಗಳಿಕೆಗೆ ಪಾತ್ರರಾದವರು. ಈ ಸುದೀರ್ಘ ಅವಧಿಗೆ ಮತದಾರರು ಅವರನ್ನು ನಿರಂತರವಾಗಿ ಚುನಾಯಿಸಿ ಕಳುಹಿಸಿದ್ದು ವ್ಯರ್ಥವಾಗಲಿಲ್ಲ. ಅವರು ವಿದ್ಯಾಭ್ಯಾಸ ಪಡೆಯಲು ಮಾಡಿದ ಹೋರಾಟ, ಕಾನೂನು ವಿಷಯದಲ್ಲಿ ಅವರು ಪಡೆದ ಪಾಂಡಿತ್ಯ ಮತ್ತು ವಾಕ್ಪಟುತ್ವ ಜನಸಾಮಾನ್ಯರ ಬಗ್ಗೆ ಅವರಿಗಿದ್ದ ಕಾಳಜಿ ಹಾಗೂ ಸತ್ಯವನ್ನು ಹೇಳಲೇಬೇಕೆಂಬ ಅವರ ಸಂಕಲ್ಪ ಇವು ಅವರನ್ನು ಒಬ್ಬ ಉತ್ತಮ ಸಂಸದೀಯಪಟುವಾಗಿ ರೂಪಿಸಲು ಒಳ್ಳೆಯ ಭೂಮಿಕೆಯನ್ನು ಒದಗಿಸಿದವು. ಅವರು ಗ್ರಾಮಾಂತರ ಪ್ರದೇಶ ಹಾಗೂ ಪಟ್ಟಣ ಪ್ರದೇಶಗಳೆರಡನ್ನು ಪ್ರತಿನಿಧಿಸಿದ್ದು ಇಡೀ ಸಮಾಜದ ಬಗ್ಗೆ ಸಮಗ್ರ ಅರಿವು ಹೊಂದಿದ್ದರು. ಅವರ ಮಾತಿನಲ್ಲಿ ಖಚಿತತೆ ಮತ್ತು ನಿರ್ದಿಷ್ಟ ಉದ್ದೇಶಗಳು ಸ್ಪಷ್ಟವಾಗಿ ಕಂಡುಬರುತ್ತಿದ್ದವು. ಇದಕ್ಕೆ ಅವರ ವಕೀಲ ವೃತ್ತಿ ಸಹಾಯಕವಾಗಿದ್ದಿತೆಂಬುದು ಸ್ಪಷ್ಟ.

ಶ್ರೀಯುತ ಪುಟ್ಟಸ್ವಾಮಿಯವರು ಮೊದಲಿನಿಂದಲೂ ಒಳ್ಳೆಯ ಪಕ್ಷ ಸಂಘಟನೆ ಮತ್ತು ಒಳ್ಳೆಯ ಸರ್ಕಾರ ನಮ್ಮದಾಗಬೇಕೆಂಬ ಆಸೆ ಹೊತ್ತವರು. ಅದಕ್ಕಾಗಿ ಅವರು ವಿಧಾನ ಸಭೆಯಲ್ಲಿ

ಆಡಳಿತ ಪಕ್ಷದ ಸದಸ್ಯರಾಗಿದ್ದರೂ ಸರ್ಕಾರದ ಲೋಪದೋಷಗಳನ್ನು ಬೊಟ್ಟು ಮಾಡಿ ತೋರಿಸುವಲ್ಲಿ ಹಿಂದೆ ಬಿದ್ದವರಲ್ಲ. ಆದರೆ ಅವರ ಈ ಪ್ರಯತ್ನದಲ್ಲಿ ಅವರು ಸಹಜ ವಿನಯವನ್ನು ಪ್ರದರ್ಶಿಸುತ್ತಿದ್ದರೇ ಹೊರತು ಆತ್ಮಪ್ರತಿಷ್ಠೆಯನ್ನು ಮೆರೆದವರಲ್ಲ. 1959-60ರ ಆಯವ್ಯಯ ಪತ್ರದ ಚರ್ಚೆಯಲ್ಲಿ ತಮ್ಮ ಕಳಕಳಿಯನ್ನು ಈ ಕೆಳಕಂಡಂತೆ ನಿವೇದಿಸಿಕೊಂಡಿದ್ದಾರೆ.

" ಆಡಳಿತ ನಡೆಸುವವರು ನಾವು. ಜವಾಬ್ದಾರಿ ನಮ್ಮ ಮೇಲೆ ಬಿದ್ದಿದೆ. ಸಾರ್ವಜನಿಕ ಚುನಾವಣೆಯಲ್ಲಿ ಜನರು ವಿಶ್ವಾಸವಿಟ್ಟು ಕಾಂಗ್ರೆಸ್ ಪಕ್ಷವನ್ನು ಚುನಾಯಿಸಿದ್ದಾರೆ. ಆದ್ದರಿಂದ ಆಡಳಿತದ ಜವಾಬ್ದಾರಿಯನ್ನು ಹೊರುವಾಗ ಯಾವುದಾದರೂ ದೋಷವಿದ್ದರೆ ಅದನ್ನು ಹೇಳಬೇಕಾದದ್ದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ಈ ವಿಚಾರವನ್ನು ನನ್ನ ಒಂದು ಕರ್ತವ್ಯ ದೃಷ್ಟಿಯಿಂದ ಸರ್ಕಾರದಲ್ಲಿ ವಿನಂತಿ ಮಾಡಿಕೊಳ್ಳುತ್ತಿದ್ದೇನೆ ".

ಈ ರೀತಿ ನಯವಾಗಿಯೇ ಸರ್ಕಾರವನ್ನು ತಿದ್ದುವ ದೃಷ್ಟಿ ಅವರದಾಗಿದ್ದಿತು. ಹಾಗೆಯೇ ಅವರು ಯಾವುದಾದರೂ ವಿಷಯದಲ್ಲಿ ಸಚಿವರು ಅಲಕ್ಷ್ಯ ತಾಳಿದ್ದಾರೆಂದು ಅಥವಾ ಅವಜ್ಞೆಯಿಂದಿದ್ದಾರೆಂದು ಭಾವನೆ ಉಂಟಾದಾಗ ಅಂತಹ ವಿಷಯಗಳನ್ನು ವಿವರವಾಗಿ ಬಿಡಿಸಿ ಸಭೆಯಲ್ಲಿ ಮಂಡಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಅದಕ್ಕೆ ರಾಜಕೀಯ ಲೇಪನ ಹಾಕುವುದು ಸಾಮಾನ್ಯವಾದುದರಿಂದ ನಾನು ಅಂತಹ ಸಂಕುಚಿತ ದೃಷ್ಟಿ ಹೊಂದಿಲ್ಲವೆಂದೂ ವಸ್ತುನಿಷ್ಠ ಪ್ರತಿಪಾದನೆಯೇ ತನ್ನ ಗುರಿಯೆಂದು ಅವರು ಒತ್ತಿಹೇಳುತ್ತಿದ್ದರು. ಸಂದರ್ಭವಶಾತ್ ತಮ್ಮಿಂದ ವಿಪರೀತಾರ್ಥ ಬರುವ ಮಾತುಗಳು ಹೊರಬಂದವೆಂದು ತಿಳಿದಾಗ ಅದಕ್ಕಾಗಿ ಕ್ಷಮೆ ಕೇಳಲು ಹಿಂಜರಿಯುತ್ತಿರಲಿಲ್ಲ. 1961ರಲ್ಲಿ ಒಂದು ಕ್ರಿಯಾಲೋಪದ ಬಗ್ಗೆ ಚರ್ಚಿಸುತ್ತಿದ್ದಾಗ ಅವರು ಹೇಳಿದ ಮಾತುಗಳು ಗಮನಾರ್ಹವಾಗಿವೆ. " ಸ್ವಾಮಿ ನಾನು ಆಡತಕ್ಕಂಥ ಮಾತುಗಳಿಗೆ ಯಾವುದಾದರೂ ಈ ಸಭೆಯ ಮರ್ಯಾದೆಗೆ ವಿರೋಧವಾಗಿದ್ದರೆ, ನಾನು ಈ ಸಭೆಯ ಕ್ಷಮಾಪಣೆ ಬೇಡುವುದರಲ್ಲಿ ಮೊದಲನೆಯವನು ಎಂದು ಈ ಸಭೆಗೆ ವಿನಂತಿ ಮಾಡಿಕೊಳ್ಳುತ್ತೇನೆ". ಇದು ಅವರ ಸಭ್ಯತೆಗೆ ಸಾಕ್ಷಿಯಾಗಿದೆ.

ಪುಟ್ಟಸ್ವಾಮಿ ಅವರು ಮೈಸೂರು ನಗರದ ಪುರಸಭಾ ಸದಸ್ಯರಾಗಿ ಮತ್ತು ಅದರ ಅಧ್ಯಕ್ಷರಾಗಿ ಅನುಭವ ಹೊಂದಿದ್ದನ್ನು ಈಗಾಗಲೇ ಉಲ್ಲೇಖಿಸಿದೆ. ಅವರು ತಾವೇ ಪೌರಾಡಳಿತ ಸಚಿವರಾಗಿ ಸಹ ಕಾರ್ಯನಿರ್ವಹಿಸಿದ ಅದೃಷ್ಟವಂತರು. ಅವರು 1970ರ ದಶಕದಲ್ಲಿ ನಮ್ಮ ರಾಜ್ಯದ ಪಟ್ಟಣಗಳ ಅಭಿವೃದ್ಧಿಗೆ ಅಗತ್ಯವಾದ ಆಡಳಿತ ಸಂಸ್ಥೆಗಳು ಹೇಗಿರಬೇಕು ಮತ್ತು ಅದರಲ್ಲಿ ಸರ್ಕಾರದ ಪಾತ್ರವೇನು ಎಂಬ ಬಗ್ಗೆ ಸ್ಪಷ್ಟ ಕಲ್ಪನೆ ಹೊಂದಿದ್ದರು. 1973ರಲ್ಲಿ ವಿಧಾನ ಸಭೆಯಲ್ಲಿ ಪೌರಾಡಳಿತ ಇಲಾಖೆಯ ಬೇಡಿಕೆಗಳ ಬಗ್ಗೆ ನಡೆದ ಚರ್ಚೆಯಲ್ಲಿ ಭಾಗವಹಿಸಿ ಮಾತನಾಡುತ್ತಾ ನೀಡಿದ ಸಲಹೆಗಳು ಅಮೂಲ್ಯವಾಗಿವೆ. ಅವುಗಳೆಂದರೆ (ಅ) ಪುರಸಭೆಗಳು ಅಕ್ಟ್ರಾಯಿ ರದ್ದಾಯಿತಿಯಿಂದ ಅನುಭವಿಸುವ ನಷ್ಟಕ್ಕೆ ಸರ್ಕಾರ ಸೂಕ್ತ ಪರಿಹಾರ ನೀಡಬೇಕು; (ಆ) ದೊಡ್ಡ ದೊಡ್ಡ ಪುರಸಭೆಗಳನ್ನು ನಗರಪಾಲಿಕೆ ಅಥವಾ ಕಾರ್ಪೊರೇಷನ್‌ಗಳಾಗಿ ಪರಿವರ್ತಿಸಲು ಶೀಘ್ರವೇ ಕಾಯಿದೆ ರಚಿಸಬೇಕು; (ಇ) ಬೆಳೆಯುತ್ತಿರುವ ಮಧ್ಯಮ ಪ್ರಮಾಣದ ಪಟ್ಟಣಗಳಿಗೆ ನಗರಾಭಿವೃದ್ಧಿ ಸಮಿತಿಗಳನ್ನು ರಚಿಸಬೇಕು; (ಈ) ನಗರ ಯೋಜನೆ, ನಗರಾಭಿವೃದ್ಧಿ

ಮತ್ತು ನಗರಪಾಲಿಕೆ ಈ ಸಂಸ್ಥೆಗಳ ಕಾಯಿದೆಗಳನ್ನು ಪರಿಶೀಲಿಸಿ ಪರಸ್ಪರ ವ್ಯಾಪಿತ ನಿಬಂಧನೆಗಳಿಂದ ಉಂಟಾಗಬಹುದಾದ ಗೊಂದಲಗಳನ್ನು ಪರಿಹರಿಸಬೇಕು. ಈ ಸಲಹೆಗಳು ಅತ್ಯಂತ ಪ್ರಸ್ತುತವಾಗಿದ್ದು ಮುಂದಿನ ವರ್ಷಗಳಲ್ಲಿ ಅವು ಕಾರ್ಯರೂಪಕ್ಕೆ ಬಂದುದನ್ನು ಕಾಣಬಹುದು.

ಹಾಗೆಯೇ ಪುರಸಭಾ ಚುನಾವಣೆಗಳನ್ನು ಅನಗತ್ಯವಾಗಿ ಮುಂದೂಡುವ ಬಗ್ಗೆ ಅವರ ವಿರೋಧವಿದ್ದಿತು. ಕ್ಷಾಮ ಕಾಲ, ಯುದ್ಧಕಾಲ ಮತ್ತು ಇತರ ಕ್ಷೋಭೆಯ ಕಾಲಗಳನ್ನು ಹೊರತುಪಡಿಸಿ ಸಾಮಾನ್ಯ ಕಾಲದಲ್ಲಿ ಈ ಚುನಾವಣೆಗಳನ್ನು ಮುಂದೂಡಬಾರದೆಂಬುದು ಅವರ ಖಚಿತ ನಿಲುವಾಗಿದ್ದಿತು. ಅವರು ಮೇಲ್ಕಂಡ ಚರ್ಚೆಯ ಸಮಯದಲ್ಲಿ ಹೇಳಿದ ಮಾತುಗಳೆಂದರೆ " ಪ್ರಜಾಪ್ರಭುತ್ವದಲ್ಲಿ ಯಾವುದೇ ಕಾರ್ಯಮಾಡಿದಲ್ಲಿ ನೇರವಾಗಿ ಮಾಡಬೇಕು. ಜನರ ಪ್ರತಿನಿಧಿಗಳಿಂದ ಅಭಿಪ್ರಾಯಪಡೆದು ಮಾಡಬೇಕು. ಇದು ಅತ್ಯಂತ ಆವಶ್ಯಕ. ಇದನ್ನು ಮಾನ್ಯ ಮಂತ್ರಿಗಳು ಆಲೋಚನೆ ಮಾಡಬೇಕು ಎಂದು ಅವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ ". ಇಂತಹ ನಿಸ್ಸಂದಿಗ್ಧ ನಿಲುವು ತಳೆದುದು ಕೆ. ಪುಟ್ಟಸ್ವಾಮಿಯವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯೇ ಸರಿ.

ಪುಟ್ಟಸ್ವಾಮಿಯವರು ಆಡಳಿತ ಪಕ್ಷದ ಸದಸ್ಯರಾಗಿದ್ದರೂ ಸರ್ಕಾರದ ಲೋಪದೋಷಗಳನ್ನು ತೋರಿಸುವಲ್ಲಿ ನಿಷ್ಠುರವಾಗಿಯೇ ಶಾಸನ ಸಭೆಯಲ್ಲಿ ಮಾತನಾಡುತ್ತಿದ್ದರು. ಇದು ನಿಜವಾದ ಶಾಸಕತ್ವದ ಕರ್ತವ್ಯವನ್ನು ಅರಿತವರ ಗುಣವೂ ಹೌದು. 1975-76ರ ಸಾಲಿನ ಆಯವ್ಯಯ ಪತ್ರದ ಮೇಲಿನ ಚರ್ಚೆಯಲ್ಲಿ ಅವರು ಸರ್ಕಾರದ ಕರ್ತವ್ಯವನ್ನು ನೆನಪುಮಾಡಿಕೊಟ್ಟದ್ದು ಹೀಗೆ:-

" ಒಂದು ಕಲ್ಯಾಣಕರವಾದ ಸಮಾಜವನ್ನು ಸೃಷ್ಟಿಸಬೇಕಾದರೆ, ಅದನ್ನು ಕಟ್ಟಬೇಕಾದರೆ ಒಂದು ವೆಲ್‌ಫೇರ್ ಸ್ಟೇಟ್ ಮಾಡಬೇಕಾದರೆ ಕಂದಾಯ ಹಾಕದೇ ಬೇರೆ ಮಾರ್ಗವೇ ಇಲ್ಲ. ಕಂದಾಯ ಸಾಕಷ್ಟು ಪ್ರಮಾಣದಲ್ಲಿ ಹಾಕಲೇಬೇಕು. ಆದರೆ ಹೊಸ ಹೊಸ ಕಂದಾಯವನ್ನು ಹಾಕುವುದಕ್ಕೆ ಮುಂಚೆ ಸರ್ಕಾರ ತನ್ನದೂ ಒಂದು ಕರ್ತವ್ಯ ಇದೆ ಎಂದು ತಿಳಿದುಕೊಳ್ಳಬೇಕು. ಅದು ಏನೆಂದರೆ ಏನು ತೆರಿಗೆಯನ್ನು ವಸೂಲ್ಮಾಡುತ್ತಾರೋ ಆ ಹಣ ಸದುಪಯೋಗ ಮಾಡುತ್ತಿದ್ದೇವೆಯೇ ಅನ್ನುವುದನ್ನು ಸಾರ್ವಜನಿಕರಿಗೆ ಮನದಟ್ಟು ಮಾಡುವುದು ನಮ್ಮ ಕರ್ತವ್ಯ ಎಂದು ಅವರು ತಿಳಿದುಕೊಳ್ಳಬೇಕು ಮತ್ತು ಆ ಬಗ್ಗೆ ಯಾವುದೇ ವಿಧವಾದಂಥ ಹಣ ಪೋಲು ಮಾಡಿದರೂ ಕೂಡ ನಮಗೆ ತೆರಿಗೆ ಹಾಕತಕ್ಕಂಥ ಅಧಿಕಾರ ಕಳೆದು ಹೋಗಿದೆ ಅನ್ನುವುದನ್ನು ತಿಳಿದುಕೊಳ್ಳಬೇಕು. ದೇರ್ ಲೈಸ್ ಯುವರ್ ಡ್ಯೂಟಿ. ಈ ಹಣ ಎಲ್ಲಾದರೂ ಅಪವ್ಯಯವಾಗುತ್ತಿದ್ದರೆ ಅದನ್ನು ಹೇಳಬೇಕಾದ್ದು ನಿಮ್ಮ ಕರ್ತವ್ಯ ".

ಈ ಮಾತನ್ನು ಹೇಳಲು ಸಾಕಷ್ಟು ನೈತಿಕ ಧೈರ್ಯ ಬೇಕು. ಪುಟ್ಟಸ್ವಾಮಿಯವರು ನಮ್ಮ ವೈಯಕ್ತಿಕ ಅಧಿಕಾರ ನಿರ್ವಹಣೆಯಲ್ಲಿ ಅಂತಹ ನೈತಿಕ ಶಿಸ್ತನ್ನು ಉಳಿಸಿಕೊಂಡು ಬಂದಿದ್ದರಿಂದಲೇ ಅವರಿಗೆ ಹಾಗೆ ಆಗ್ರಹಪೂರ್ವಕವಾಗಿ ಹೇಳಲು ಸಾಧ್ಯವಾದದ್ದು.

ಅವರು ಅದೇ ಭಾಷಣದಲ್ಲಿ ಇನ್ನೂ ಮುಂದುವರಿದು ಸರ್ಕಾರ ಮುಟ್ಟಿದ್ದಕ್ಕೆಲ್ಲ ಕಾರ್ಪೊರೇಷನ್ ಅಥವಾ ಸ್ವಯಂಮಾಡಳಿತ ಮಂಡಲಿಗಳನ್ನು ರಚಿಸುತ್ತಿದ್ದುದನ್ನು ಪ್ರಶ್ನಿಸಿದರು. ಇದರಿಂದ ಸರ್ಕಾರದ ಅಧಿಕಾರ ಮತ್ತು ಕೆಲಸ ಮಾಡುವ ಅವಕಾಶ ಮೊಂಡಾಗುತ್ತದೆ. ಆದ್ದರಿಂದ ಅನಗತ್ಯವಾಗಿ ನಿಗಮ ಮಂಡಲಿಗಳನ್ನು ರಚಿಸಬೇಡಿ ಎಂದು ಕಿವಿಮಾತು ಹೇಳಿದರು.

ಶಾಸನ ಸಭೆಯಲ್ಲಿ ಆಯವ್ಯಯ ಪತ್ರದ ಮೇಲೆ ಚರ್ಚೆ ನಡೆಯುವಾಗ ಸಾಕಷ್ಟು ಮಂತ್ರಿಗಳು ಸಭೆಯಲ್ಲಿ ಹಾಜರಿರಬೇಕೆಂದು ಒತ್ತಿ ಒತ್ತಿ ಹೇಳಿದರು. ದಿನಾಂಕ 25-2-75ರ ಅವರ ಭಾಷಣದ ಕೊನೆಯ ಭಾಗದಲ್ಲೇ ಈ ವಿಷಯ ಬರುತ್ತದೆ. ಇದರಿಂದ ಆಯಾ ಮಂತ್ರಿಗಳು ಸದಸ್ಯರ ಅಭಿಪ್ರಾಯವನ್ನು ಮತ್ತು ಆ ಮೂಲಕ ಜನರ ಸಮಸ್ಯೆಗಳನ್ನು ಹಾಗೂ ಸರ್ಕಾರ ಮಾಡಬೇಕಾದ ಕಾರ್ಯಗಳನ್ನು ಸರಿಯಾಗಿ ಗ್ರಹಿಸಲು ಸಾಧ್ಯವೆಂದು ಅವರು ಪ್ರತಿಪಾದಿಸಿದರು. ಇಲ್ಲದಿದ್ದರೆ ಇದೊಂದು ಅರಣ್ಯರೋದನವಾಗುತ್ತದೆ. ಆಯಾ ಮಂತ್ರಿಗಳು ಅವರವರ ಖಾತೆಗಳ ಬೇಡಿಕೆಗಳು ಬಂದಾಗ ಉತ್ತರ ಕೊಡುತ್ತೇವೆಂದು ನುಸುಳಿಕೊಳ್ಳಬಾರದು. ಅದು ಪತ್ರಿಕೆಗಳಲ್ಲಿ ಬಾರದೆ ಜನರಿಗೆ ಸೂಕ್ತ ಮಾಹಿತಿ ದೊರೆಯುವುದಿಲ್ಲ ಎಂದು ತಮ್ಮ ಅನುಭವವನ್ನು ನಿವೇದಿಸಿದರು.

ಅವರ ಕ್ಷೇತ್ರದ ಜನಸಾಮಾನ್ಯರ ವಿಷಯವನ್ನು ಕುರಿತು ಶಾಸನಸಭೆಯಲ್ಲಿ ಪ್ರಸ್ತಾಪಿಸುವುದರಲ್ಲೂ ಅವರು ಮೊದಲಿಗರು. ಮೈಸೂರು ನಗರದ ಶ್ರೀ ಕೃಷ್ಣರಾಜೇಂದ್ರ ಮಿಲ್ಲಿನ ಕಾರ್ಮಿಕರ ಸಮಸ್ಯೆ ಇರಬಹುದು. ನಗರದ ನಾಗರಿಕರ ಸೌಲಭ್ಯಗಳಿರಬಹುದು, ಇವೆಲ್ಲವನ್ನು ಸರ್ಕಾರದ ಗಮನಕ್ಕೆ ತರುವ ಕೆಲಸವನ್ನು ಆದ್ಯತೆಯ ಮೇಲೆ ಮಾಡುತ್ತಿದ್ದರು. ಅವರ ಈ ಗುಣ ಅವರ ಕರ್ತವ್ಯ ಪ್ರಜ್ಞೆಗೂ ಮತ್ತು ಅವರ ರಾಜಕೀಯದ ಯಶಸ್ಸಿಗೂ ದಿಕ್ಸೂಚಿಯಾಗಿದ್ದಿತೆಂಬುದು ಅರಿವಾಗುತ್ತದೆ. ಈ ಸಂಕಲನದ ಮೊದಲ ಕಲಾಪವೇ ಶಿಕ್ಷಣ ಮಾಧ್ಯಮವಾಗಿ ಕನ್ನಡವನ್ನು ಜಾರಿಗೊಳಿಸುವ ವಿಷಯ. ಇದು ನಡೆದದ್ದು 1952 ರಲ್ಲಿ. ಈ ಚರ್ಚೆ ಪ್ರಾರಂಭವಾಗುವುದೇ ಇಂಗ್ಲಿಷ್ ಮಾತುಗಳ ಮೂಲಕ. ಇದು ಸಾರ್ವಜನಿಕವಾಗಿ ಕನ್ನಡದ ಸ್ಥಾನಮಾನ ಗಟ್ಟಿಗೊಂಡಿರದ ಸ್ಥಿತಿಯನ್ನು ಸೂಚಿಸುತ್ತದೆ.

ಕೆ. ಪುಟ್ಟಸ್ವಾಮಿಯವರು ಶಾಸಕರಾಗಿರಲಿ, ಸಚಿವರಾಗಿರಲಿ ಅವರು ಸಂಸದೀಯಪಟುವಾಗಿ ನಿರ್ವಹಿಸಿದ ಪಾತ್ರ ಹಿರಿದಾದುದು. ಸಚಿವರಾಗಿದ್ದಾಗಲೂ ಅವರು ಶಾಸನ ಸಭೆಯಲ್ಲಿ ದೀರ್ಘಹೇಳಿಕೆಗಳನ್ನು ನೀಡಿರುವುದು ಅವರಿಗೆ ಸಾರ್ವಜನಿಕ ವಿಷಯಗಳ ಬಗೆಗೆ ಇದ್ದ ಕಾಳಜಿಗೆ ದ್ಯೋತಕವಾಗಿದೆ. ವಿರೋಧ ಪಕ್ಷದ ಧುರೀಣರು ಸಹ ಅವರ ಸಂಸದೀಯಪಟುತ್ವವನ್ನು ಕೊಂಡಾಡಿದ್ದಾರೆ. ಇವರೊಬ್ಬ ಅಪರೂಪದ ಸಂಸದೀಯಪಟುವೆನ್ನುವುದರಲ್ಲಿ ಸಂದೇಹವಿಲ್ಲ.

## ಸಾರ್ಥಕ ಜೀವನ

ಕೆ. ಪುಟ್ಟಸ್ವಾಮಿಯವರು ರಾಜಕೀಯದಲ್ಲಿ ಯಶಸ್ವಿಯಾದಂತೆಯೇ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನದಲ್ಲೂ ಮಾದರಿಯಾಗಿ ಬದುಕಿದರು. ಅವರು ಮೈಸೂರು ನಗರದಲ್ಲಿ

ನೆಲಸಿ ಸಂಸಾರ ಹೂಡಿದ ಮೇಲೆ ಅವರ ಬಂಧುಗಳ ಹಲವು ಮಕ್ಕಳಿಗೆ ವಿದ್ಯೆ ಕಲಿಯಲು ಅನುಕೂಲವಾಗುವಂತೆ ತಮ್ಮ ಮನೆಯಲ್ಲೇ ಇಟ್ಟುಕೊಂಡು ಓದಿಸಿದರು. ಅವರ ಪತ್ನಿ ಶ್ರೀಮತಿ ಜಯಲಕ್ಷ್ಮಮ್ಮ ಅವರು ಈ ಮಕ್ಕಳನ್ನು ಸಹನೆ, ಅಕ್ಕರೆ ಮತ್ತು ಕಷ್ಟಸಹಿಷ್ಣುತೆಯಿಂದ ನೋಡಿಕೊಂಡರು. ಅವರು ಮಂತ್ರಿಗಳಾದಾಗಲೂ ಅವರ ಮನೆಯಲ್ಲಿ ಓದುವ ಹೊರಗಿನ ವಿದ್ಯಾರ್ಥಿಗಳಿದ್ದೇ ಇರುತ್ತಿದ್ದರು. ಒಮ್ಮೆ ಅವರ ಮನೆಗೆ ಬಂದ ಅಂದಿನ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು ಪುಟ್ಟಸ್ವಾಮಿ ದಂಪತಿಗಳ ಈ ಔದಾರ್ಯವನ್ನು ಹೊಗಳಿಹೋದರಂತೆ. ಹೀಗೆ ವಿದ್ಯಾದಾನಕ್ಕೆ ನೆರವಾದ ಕೀರ್ತಿ ಅವರಿಗೆ ಸಲ್ಲುತ್ತದೆ.

ರಾಜಕೀಯದಲ್ಲಿದ್ದು ಪ್ರಾಮಾಣಿಕವಾಗಿರಬೇಕೆಂಬ ಮಹದಾದರ್ಶವನ್ನು ಇಟ್ಟುಕೊಂಡಿದ್ದವರು ಪುಟ್ಟಸ್ವಾಮಿ ಅವರು. ಮೂರು ದಶಕಗಳ ಕಾಲದ ಅವಿರತ ರಾಜಕೀಯ ಜೀವನದಲ್ಲಿ ಸುಮಾರು ಹತ್ತು ವರ್ಷಗಳ ಕಾಲ ಸಚಿವರಾಗಿದ್ದು ವಕೀಲಿ ವೃತ್ತಿಯನ್ನೂ ಸಾಕಷ್ಟು ಕಾಲ ನಡೆಸಿದರೂ ಅವರು ಗಳಿಸಿದ್ದ ಆಸ್ತಿ ಗೌಣವೆಂದೇ ಹೇಳಬಹುದು. ಅವರು ಮೈಸೂರು ನಗರದ ಕಬೀರ್ ರಸ್ತೆಯಲ್ಲಿ ಒಂದು ವಿಶಾಲ ನಿವೇಶನ ಪಡೆದು ಮನೆ ಕಟ್ಟಲು ಮುಂದಾದರೂ ಅವರಿಗೆ ಅಗತ್ಯವೆನಿಸಿದ್ದು ಕೇವಲ ವಾಸಕ್ಕೆ ಸೂಕ್ತವೆನಿಸಿದ್ದ ಮನೆ. 1949ರಲ್ಲೇ ಅದಕ್ಕೆ ದೊಡ್ಡ ಅಡಿಪಾಯ ಹಾಕಿಸಿದರು. ಆಗ ಕಟ್ಟಿಸಿದ್ದು ಅದರ ಒಂದು ಭಾಗವನ್ನು ಮಾತ್ರ. ಅದರಲ್ಲೇ ಅವರು ಹಲವಾರು ವರ್ಷಗಳನ್ನು ಕಳೆದರು. ಅವರಿಗೆ ಹೆಣ್ಣುಕೊಟ್ಟ ಮಾವನವರಿಗೆ ನಾಲ್ವರು ಹೆಣ್ಣು ಮಕ್ಕಳು ಮಾತ್ರವಿದ್ದುದರಿಂದ ಆ ಕಡೆಯಿಂದಲೂ ಅಲ್ಪಸ್ವಲ್ಪ ನೆರವು ದೊರೆಯಿತು. 1960-61 ರ ಹೊತ್ತಿಗಷ್ಟೆ ಅವರು ಆ ಮನೆಗೆ ಈಗಿನ ರೂಪಕೊಟ್ಟರು. ಮೈಸೂರು ನಗರದಲ್ಲಿದ್ದ ಅವರು ತಮ್ಮ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಳ್ಳಲು ಅಧಿಕಾರವನ್ನು ಬಳಸಿಕೊಳ್ಳುವುದು ಸುಲಭವಿದ್ದರೂ ಅವರು ಆ ಪ್ರಯತ್ನಕ್ಕೆ ಮನಸ್ಸು ಮಾಡಲಿಲ್ಲ. ಹೀಗೆ ಸತ್ಯಸಂಧರಾಗಿ ನಡೆನುಡಿಗಳಲ್ಲಿ ತೋರಿಸಿಕೊಂಡ ಅಪರೂಪದ ವ್ಯಕ್ತಿಗಳ ಸಾಲಿಗೆ ಸೇರಿದವರು. ಕೆ. ಪುಟ್ಟಸ್ವಾಮಿಯವರು ಅದಕ್ಕೆ ಬಹುಶಃ ಅವರು ಬೆಳೆದು ಬಂದ ಸಜ್ಜನರ ಸಂಗವೂ ಸಾಕಷ್ಟು ಕಾರಣವಿರಬಹುದು. ಅವರು ರಾಜಕೀಯದಿಂದ ಗಳಿಸಿದ್ದು ಒಳ್ಳೆಯ ಮಿತ್ರರನ್ನು ಮತ್ತು ಉಳಿಸಿಹೋಗಿದ್ದು ತಮ್ಮ ಕೆಲಸಗಳನ್ನು. ಮೈಸೂರು ನಗರದಲ್ಲಿ ಇವರ ಕಾಲದಲ್ಲಿ ವಿಶ್ವೇಶ್ವರಯ್ಯ ವಾಣಿಜ್ಯ ಸಂಕೀರ್ಣ ನಿರ್ಮಾಣವಾಯಿತು. ಜನತಾ ಬಜಾರ್ ಸ್ಥಾಪನೆ, ಹೊಂಗಳ್ಳಿ ನೀರು ಸರಬರಾಜು ಯೋಜನೆ ಅನುಷ್ಠಾನ, ಸಯ್ಯಾಜಿರಾವ್ ರಸ್ತೆಗೆ ಕಾಂಕ್ರೀಟ್ ಹಾಕಿದ್ದು ಇವುಗಳ ಹಿಂದೆ ಶ್ರೀಯುತರ ಪ್ರಯತ್ನಶೀಲತೆ ಇದ್ದಿತು. ಹೆಚ್. ಕೆಂಪೇಗೌಡರು, ಎಸ್. ಲಿಂಗಣ್ಣ , ಬಿ.ಎನ್. ಕೆಂಗೇಗೌಡರು ಮೊದಲಾದವರು ಇವರಿಂದ ಪ್ರೋತ್ಸಾಹ ಪಡೆದ ರಾಜಕೀಯ ಮುಖಂಡರು, ಅವರೆಲ್ಲ ವಿವಿಧ ರೀತಿಯಲ್ಲಿ ಮೈಸೂರು ನಗರದ ಅಭಿವೃದ್ಧಿಗೆ ಶ್ರಮಿಸಿದರು.

ವಿದ್ಯಾವರ್ಧಕ ಶಿಕ್ಷಣ ಸಂಸ್ಥೆಯ ರೂವಾರಿ:-

ಗ್ರಾಮಾಂತರ ಪ್ರದೇಶದಿಂದ ನಗರಕ್ಕೆ ಬರುವ ವಿದ್ಯಾರ್ಥಿಗಳಿಗೆ ಮತ್ತು ನಗರದಲ್ಲೇ ಬಡತನದ ಒತ್ತಡದಲ್ಲಿ ಬೆಳೆದ ವಿದ್ಯಾರ್ಥಿಗಳಿಗೆ ಮೈಸೂರು ನಗರದ ಪ್ರತಿಷ್ಠಿತ ಶಾಲಾ ಕಾಲೇಜುಗಳಲ್ಲಿ ಪ್ರವೇಶಾವಕಾಶದ ಕೊರತೆ ಇದ್ದಿತು. ಇಂತಹ ಸಂದರ್ಭದಲ್ಲಿ ಅಂದಿನ

ವಿದ್ಯಾವಂತ ಹಿರಿಯರು ಸೇರಿ ಮೈಸೂರು ನಗರದಲ್ಲಿ ಹೀಗೆ ಕಡಿಮೆ ಅಂಕಗಳಿಸಿ ತೇರ್ಗಡೆಯಾಗುವ ವಿದ್ಯಾರ್ಥಿಗಳಿಗೆ ಕಲಿಯಲು ಅವಕಾಶ ಕಲ್ಪಿಸಬೇಕೆಂಬ ಮಹಾದೋದ್ದೇಶದಿಂದ ವಿದ್ಯಾವರ್ಧಕ ಸಂಘವೆಂಬ ಒಂದ ಶಿಕ್ಷಣ ಸಂಸ್ಥೆಯನ್ನು ಸ್ವಾತಂತ್ರ್ಯ ಬಂದ ಹೊಸತರಲ್ಲೇ 1949 ರಲ್ಲಿ ಸ್ಥಾಪಿಸಿದರು. ಅದರ ವತಿಯಿಂದ ಪ್ರೌಢಶಾಲೆ ತೆರೆದರು. ಈ ಸಂಸ್ಥೆಗೆ ಸಾಹುಕಾರ್ ಚನ್ನಯ್ಯನವರು ಅಧ್ಯಕ್ಷರಾದರು. ಕೆ. ಪುಟ್ಟಸ್ವಾಮಿ ಮತ್ತು ನಾ. ಭದ್ರಯ್ಯನವರು ಸ್ಥಾಪಕ ಕಾರ್ಯದರ್ಶಿಗಳಾದರು. ಈ ಶಾಲೆ ಮೊದಲಿಗೆ ಮೈಸೂರು ನಗರದ ಗಾರೆ ಕೇರಿಯಲ್ಲಿ ತಿಮ್ಮಯ್ಯಾಚಾರರ ಛತ್ರದಲ್ಲಿ ಪ್ರಾರಂಭವಾಯಿತು. ಛತ್ರವನ್ನು ಬಾಡಿಗೆಗೆ ತೆಗೆದುಕೊಂಡು ನಡೆಸಲಾಗುತ್ತಿತ್ತು. ಮುಂದೆ ಈ ಶಾಲೆ ರೈಲ್ವೆ ನಿಲ್ದಾಣದ ಸಮೀಪವಿದ್ದ ವಸ್ತು ಪ್ರದರ್ಶನ ಕಟ್ಟಡಕ್ಕೆ ಸ್ಥಳಾಂತರವಾಯಿತು. ವಸ್ತು ಪ್ರದರ್ಶನವಿದ್ದಾಗ ವಿದ್ಯಾರ್ಥಿಗಳಿಗೆ ರಜೆ ಕೊಡಲಾಗುತ್ತಿತ್ತು. ಮುಂದೆ ಈ ಸಂಸ್ಥೆಗೆ ಸುನಂದ ಅಗರಬತ್ತಿಯ ಮಾಲೀಕರಾಗಿದ್ದ ರಾಮಕೃಷ್ಣಯ್ಯ, ಎಂ.ಬಿ. ಬಸವಯ್ಯ, ಬಿ.ಸಿ. ಲಿಂಗಯ್ಯ ಮುಂತಾದವರು ಅಧ್ಯಕ್ಷರಾದರು. ಬಿ. ನಾರಾಯಣಸ್ವಾಮಿ, ಎಸ್. ಲಿಂಗಣ್ಣರಂತಹ ಗಣ್ಯರು ಕಾರ್ಯದರ್ಶಿಗಳಾದರು. ಕೆ. ಪುಟ್ಟಸ್ವಾಮಿಯವರು ರಾಜಕೀಯ ಚಟುವಟಿಕೆಗಳಿಂದ ಬಿಡುವು ಪಡೆಯದ್ದರಿಂದ ಅವರು ಸದಾ ಕಾರ್ಯದರ್ಶಿಯಾಗಿ ಇಲ್ಲವೇ ಪೋಷಕರಾಗಿ ಈ ಸಂಸ್ಥೆಯನ್ನು ಬೆಳೆಸಿದರು.

ವಿದ್ಯಾವರ್ಧಕ ಸಂಘವು ದಿನೇ ದಿನೇ ಪುರೋಭಿವೃದ್ಧಿಗೆ ಬಂದಿತು. ವಸ್ತುಪ್ರದರ್ಶನ ಕಟ್ಟಡದ ಸಮೀಪದ ಖಾಲಿ ಸ್ಥಳ ಈ ವಿದ್ಯಾಸಂಸ್ಥೆಗೆ ನಿವೇಶನವಾಗಿ ದೊರೆಯಿತು. ತರುವಾಯ ಅಲ್ಲಿ ಪ್ರೌಢಶಾಲೆಯೊಂದಿಗೆ ಪದವಿಪೂರ್ವ ಕಿರಿಯ ಕಾಲೇಜು, ಕಾನೂನು ಕಾಲೇಜು, ಪದವಿ ಕಾಲೇಜುಗಳು, ವಾಣಿಜ್ಯ ಪದವಿ ಕಾಲೇಜು ಮುಂತಾದ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಕೆ. ಪುಟ್ಟಸ್ವಾಮಿಯವರು ಕಾನೂನು ಕಾಲೇಜಿನ ಪ್ರಿನ್ಸಿಪಾಲರಾಗಿಯೂ ಕಾರ್ಯನಿರ್ವಹಿಸಿದರು. ಈಗ ಈ ವಿದ್ಯಾಸಂಸ್ಥೆಯು ನಗರದ ಪ್ರಮುಖ ಶಿಕ್ಷಣ ಸಂಸ್ಥೆಗಳಲ್ಲೊಂದಾಗಿದೆ. ಕಾನೂನು ಕಾಲೇಜಿನ ಪ್ರಿನ್ಸಿಪಾಲರಾಗಿ ಮತ್ತು ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಸೇವಾಪ್ರವರ್ತಕರಾದ ಪ್ರೊ. ಪಿ.ಎಂ. ಚಿಕ್ಕಬೋರಯ್ಯನವರು ಹಾಲಿ ಈ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಪುಟ್ಟಸ್ವಾಮಿಯವರ ಗುರಿ ಇಷ್ಟಕ್ಕೆ ಸೀಮಿತವಾಗಿರಲಿಲ್ಲ. ಅವರು ಮೈಸೂರು ನಗರದ ಗೋಕುಲ ಬಡಾವಣೆಯಲ್ಲಿ ಶ್ರೀ ಆನಂದಬಾಯಿ ಪ್ರಸಾದ್ ಅವರು ಸ್ಥಾಪಿಸಿದ " ಬಾಪೂಜಿ ಚಿಲ್ರನ್ಸ್ ಹೋಂ " ಎಂಬ ಅನಾಥಾಶ್ರಮಕ್ಕೆ ಎಲ್ಲಾ ನೆರವು ನೀಡಿದರು. ಅದೇ ಗೋಕುಲ ಬಡಾವಣೆಯಲ್ಲಿ ಒಂದು ನಿವಾಸ ಅಥವಾ ರೆಸಿಡೆನ್ಸಿಯಲ್ ಶಿಕ್ಷಣ ಸಂಸ್ಥೆ ಸ್ಥಾಪಿಸಬೇಕೆಂಬುದು ಅವರ ಕನಸಾಗಿದ್ದಿತು. ಅದಕ್ಕಾಗಿ ನಿವೇಶನ ಪಡೆದು ಅಲ್ಲಿ ವಿದ್ಯಾವರ್ಧಕ ಸಂಘದ ತಾಂತ್ರಿಕ ಶಿಕ್ಷಣ ಸಂಸ್ಥೆ ಪ್ರಾರಂಭಿಸಿ ಅದರ ಸ್ಥಾಪಕ ಅಧ್ಯಕ್ಷರಾದರು. ಮೊದಲಿಗೆ ಒಂದು ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಅಲ್ಲಿ ನೆಲೆಗೊಳಿಸಲಾಯಿತು. ಅವರು ತಾನೇ ವಿದ್ಯಾರ್ಥಿಗಳೊಂದಿಗೆ ಅಲ್ಲಿ ವಾಸಿಸಬೇಕೆಂಬ ಆದರ್ಶವಿಟ್ಟುಕೊಂಡಿದ್ದರು. 1978ರಲ್ಲಿ ಅವರು ಇಹಲೋಕ ತ್ಯಜಿಸಿದಾಗ ಅದೇ ಸ್ಥಳದಲ್ಲಿ ಅವರ ಅಂತ್ಯಕ್ರಿಯೆ ನಡೆಸಲಾಯಿತು. ಈಗ ಅಲ್ಲಿ ಒಂದು ಎಂಜಿನಿಯರಿಂಗ್

ಕಾಲೇಜು ನಡೆಯುತ್ತಿದೆ. ಶಿಶುವಿಹಾರವಿದೆ. ಅಲ್ಲಿ ಸ್ಥಾಪಿಸಿದ ಪ್ರೌಢಶಾಲೆಗೆ ದಿವಂಗತ ಕೆ. ಪುಟ್ಟಸ್ವಾಮಿ ಅವರ ಹೆಸರನ್ನು ಇಡಲಾಗಿದೆ. ಹೀಗೆ ಕೆ. ಪುಟ್ಟಸ್ವಾಮಿಯವರು ತಮ್ಮ ಮುತ್ಸದ್ದಿತನವನ್ನು ರಾಜಕೀಯ ಶಕ್ತಿಯನ್ನು ಜನಕಲ್ಯಾಣಕ್ಕಾಗಿ ವಿನಿಯೋಗಿಸಿ ಕೀರ್ತಿಶೇಷರಾದ ಶ್ರೇಷ್ಠ ಜೀವಿ.

ಕೆ. ಪುಟ್ಟಸ್ವಾಮಿ ದಂಪತಿಗಳಿಗೆ ಮೂವರು ಮಕ್ಕಳು. ಮೊದಲನೆಯವರು ಶ್ರೀಮತಿ ಪ್ರಮೀಳ, ಎರಡನೆಯವರು ಡಾ. ಪಿ. ಚಂದ್ರಶೇಖರ್. ವೈದ್ಯರಾಗಿ ಕೊಲ್ಲಿ ರಾಷ್ಟ್ರದಲ್ಲಿದ್ದಾರೆ. ಮೂರನೆಯುವರು ಶ್ರೀ ಪಿ. ವಿಶ್ವನಾಥ್, ಎಂಜಿನಿಯರಿಂಗ್ ಪದವಿ ಪಡೆದು ಕೈಗಾರಿಕೋದ್ಯಮಿಗಳಾಗಿದ್ದು ರಾಜಕೀಯ ಕ್ಷೇತ್ರದಲ್ಲೂ ಇದ್ದಾರೆ. ಅವರು ಮೈಸೂರು ನಗರ ಪಾಲಿಕೆಯ ಮೇಯರ್ (1983-84) ಆಗಿದ್ದರು. ಹಾಲಿ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಪುಟ್ಟಸ್ವಾಮಿಯವರ ಜೀವನ ಮತ್ತು ಸಾಧನೆಗಳು ಉದ್ದಾತ್ತವಾಗಿದ್ದು ಕರ್ನಾಟಕದ ಸಂಸದೀಯ ಕ್ಷೇತ್ರಕ್ಕೆ ಅವರ ಕೊಡುಗೆ ಅಮೋಘವೆನ್ನುವುದರಲ್ಲಿ ಸಂದೇಹವಿಲ್ಲ.

# ಮಾಹಿತಿ ನೀಡಿದವರು

1) ಶ್ರೀ ಪಿ. ಮಲ್ಲಯ್ಯನವರು, ವಕೀಲರು, ಸುಭಾಷ್‌ನಗರ, ಮಂಡ್ಯ.

2) ಶ್ರೀ ಎ.ಸಿ. ಬಂದೀಗೌಡರು, ಸ್ವಾತಂತ್ರ್ಯ ಹೋರಾಟಗಾರರು, ಸುಭಾಷ್‌ನಗರ, ಮಂಡ್ಯ.

3) ಶ್ರೀ ಎ. ಕೆಂಚಯ್ಯ, ಅಧ್ಯಕ್ಷರು, ಶ್ರೀರಂಗಪಟ್ಟಣ ತಾಲ್ಲೂಕು ಸ್ವಾತಂತ್ರ್ಯ ಹೋರಾಟಗಾರರ ಸಂಘ, ಮಂಡ್ಯ.

4) ಡಾ. ಸಿ. ಬಂದೀಗೌಡರು, ಮಾಜಿ ಶಾಸಕರು, ಶ್ರೀರಂಗಪಟ್ಟಣ.

5) ಶ್ರೀ ಬಿ.ಎನ್. ಕೆಂಗೇಗೌಡರು, ಮಾಜಿ ಶಾಸಕರು, ಮೈಸೂರು.

6) ಕೆ. ಪುಟ್ಟಸ್ವಾಮಿ ಅವರ ಕುಟುಂಬದವರು.

## 2. ಕೆ. ಪುಟ್ಟಸ್ವಾಮಿಯವರ ಜೀವನದ ಹೆಜ್ಜೆ ಗುರುತುಗಳು

1. ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕಿನ ಅರಕೆರೆಯಲ್ಲಿ 1917ರಲ್ಲಿ ಜನನ.
2. 1938 - ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿ.
3. 1939 ಪದವಿ ಪರೀಕ್ಷೆ ತೇರ್ಗಡೆ (ಮೈಸೂರು ವಿಶ್ವವಿದ್ಯಾನಿಲಯ)
4. 1940 ಪೂನಾದ ಕಾನೂನು ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಎಲ್.ಎಲ್.ಬಿ. ಪದವಿ ಪಡೆದಿದ್ದು.
5. 1941 - ವಕೀಲಿ ವೃತ್ತಿಗೆ ಪಾದಾರ್ಪಣೆ.
6. 1942 - ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಸಕ್ರಿಯ ಪಾತ್ರ.
7. 1943 - ವಿವಾಹ.
8. 1946 - ಮಂಡ್ಯ ಜಿಲ್ಲಾ ಬೋರ್ಡ್ ಸದಸ್ಯ.
9. 1947 - ಅರಮನೆ ಸತ್ಯಾಗ್ರಹದಲ್ಲಿ ಭಾಗಿ - ಸೆರೆವಾಸ.
10. 1948 - ಮೈಸೂರು ಜಿಲ್ಲೆ ಸಾಮಾನ್ಯ ಕ್ಷೇತ್ರದಿಂದ ರಾಜ್ಯಾಂಗ ಸಭಾ ಸದಸ್ಯರಾಗಿ ಆಯ್ಕೆ.
11. 1949 - ವಿದ್ಯಾವರ್ಧಕ ಸಂಘದ ಕಾರ್ಯದರ್ಶಿ
12. 1952 - ಶ್ರೀರಂಗಪಟ್ಟಣ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆ.
13. 1954 - 55 ಮೈಸೂರು ನಗರ ಸಭೆ ಅಧ್ಯಕ್ಷರು.
14. 1957 - ಮೈಸೂರು ನಗರದ ವಿಧಾನ ಸಭಾ ಕ್ಷೇತ್ರದಿಂದ ಆಯ್ಕೆ.
15. 1962 - ವಿಧಾನ ಸಭೆಗೆ ಪುನರಾಯ್ಕೆ.
16. 1962-67 ರಾಜ್ಯ ಸಚಿವ ಸಂಪುಟದ ಸದಸ್ಯರಾಗಿ ಪೌರಾಡಳಿತ, ಸಹಕಾರ ಮತ್ತು ವಸತಿ ಖಾತೆಗಳ ನಿರ್ವಹಣೆ.
17. 1967 - ಮೈಸೂರು ನಗರದಿಂದ ವಿಧಾನ ಸಭೆಗೆ ಆಯ್ಕೆ.
18. 1967-70 ಸಚಿವರಾಗಿ ಆರೋಗ್ಯ ಮತ್ತು ವಸತಿ ಹಾಗೂ ಕಾನೂನು, ಕಾರ್ಮಿಕ ಮತ್ತು ಸಂಸದೀಯ ವ್ಯವಹಾರಗಳ ಖಾತೆಗಳ ನಿರ್ವಹಣೆ.
19. 1972 - ಮೈಸೂರು ಜಿಲ್ಲೆಯ ಚಾಮುಂಡೇಶ್ವರಿ ಕ್ಷೇತ್ರದಿಂದ ಮತ್ತೆ ವಿಧಾನ ಸಭೆಗೆ ಚುನಾಯಿತರು.
20. 1974 - ವಿದ್ಯಾವರ್ಧಕ ಸಂಘದ ಕಾನೂನು ಕಾಲೇಜಿನ ಪ್ರಾಂಶುಪಾಲರು.
21. 1978 - ವಿಧಾನ ಸಭೆ ಚುನಾವಣೆಯಲ್ಲಿ ಮೈಸೂರು ನಗರದ ಚಾಮರಾಜ ಕ್ಷೇತ್ರದಿಂದ ಏಳನೆಯ ಬಾರಿಗೆ ವಿಧಾನ ಸಭೆ ಪ್ರವೇಶ.
22. 1978ರ ಏಪ್ರಿಲ್, 30 - ನಿಧನ.

# 1. ಶಿಕ್ಷಣ ಮಾಧ್ಯಮವಾಗಿ ಕನ್ನಡ ಜಾರಿ ಕುರಿತು - 1952.*

**K. PUTTASWAMY:-**

Will the Government be pleased to state:-

(a) The measures that they have taken last year to see that the Regional language become the common medium of instruction in high schools in the State; if any step was taken, what was the effect of such a step;

(b) the step that they are going to take next year for that purpose?

**A - The Hon'ble Sri R. CHENNIGARAMIAH ( Minister for Local Self Government):-**

(a) The question of medium of instruction was discussed at the meeting of the Standing Committee for Education held on 14th June 1951 and as per recommendation of the committee, it was directed in Government Order No.E.2495, dated 18th June 1951, that so far as the single section High Schools are concerned option may be given to have either Kannada or English as the medium of instruction, that in High Schools having more than one section, one section may be reserved for English medium and in the other sections, the medium should be Kannada and that, if more sections are to be reserved for the English medium for the benefit of pupils whose mother-tongue is not Kannada and or who have not studied Kannada at the Middle School stage, the benefit of pupils the same may be done with the permission of the Director of Public Instruction, these rules being applied to Aided High Schools also, as far as possible. It is reported that as this is a transition period, the Government Order could not be strictly enforced.

---

*(ವಿಧಾನ ಸಭಾ ಕಲಾಪ ದಿನಾಂಕ: 22-3-1952)

(b) The Government Order No.E.2495, dated 18th June 1951, will be enforced strictly during the year 1952-53.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

18-6-1951ನೆಯ ತಾರೀಖಿನ ಸರ್ಕಾರಿ ಆಜ್ಞೆಯನ್ನು ಜಾರಿಗೆ ತರಲು ಏನು ಅಡಚಣೆಯಿತ್ತು?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಜಾರಿಗೆ ಕೊಟ್ಟಿದೆ, ಆದರೆ ಪೂರ್ತಿಯಾಗಿ ಜಾರಿ ಕೊಡಲು ಕಾಲವಿರಲಿಲ್ಲ. ಈ ವರ್ಷ ಅದನ್ನು ಮಾಡುತ್ತೇವೆ.

**Sri K. PUTTASWAMY:-**

To what extent was it enforced?

**The Hon'ble Sri R. CHENNIGARAMIAH:**

It cannot be measured. It was extended to the extent possible.

**Sri K. PUTTASWAMY:-**

I want to know what is the extent to which it was enforced?

**The Hon'ble Sri R. CHENNIGARAMIAH:-**

It cannot be measured.

**Sri K. PUTTASWAMY:**

Is it not a fact, that it was not at all enforced?

**The Hon'ble Sri R. CHENNIGARAMIAH:**

No. it is not a fact it was circularised.

**Sri K. PUTTASWAMY:-**

Is 'circularising enough to term it as enforced'?

**The Hon'ble Sri R. CHENNIGARAMIAH:-**

SINCE IT IS NOT ENOUGH? IT IS GOING to be enforced this time.

**Sri K. PUTTASWAMY:-**

What are the steps that you intend taking for the next year?

**The Hon'ble Sri R. CHENNIGARAMIAH:-**

Enforcing this order.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಹೋದ ವರ್ಷದ ಆಜ್ಞೆಯನ್ನು ಈ ವರ್ಷ ಜಾರಿ ಮಾಡಿದರೆ ಮುಂದಿನ ವರ್ಷ ಕಾರ್ಯಕ್ರಮ ತೆಗೆದುಕೊಂಡ ಹಾಗಾಯಿತೆ? ಮುಂದಿನ ವರ್ಷ ಏನೇನು ಕಾರ್ಯಕ್ರಮ ತೆಗೆದುಕೊಳ್ಳುತ್ತೀರಿ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಆ ಆಜ್ಞೆಯನ್ನು ಕಡ್ಡಾಯವಾಗಿ ಜಾರಿ ಮಾಡಲು ಪ್ರಯತ್ನಮಾಡುತ್ತೇವೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಇದಲ್ಲದೆ ಇನ್ನೇನಾದರೂ ಬೇರೆ ಕಾರ್ಯಕ್ರಮ ತೆಗೆದುಕೊಳ್ಳುತ್ತೀರಾ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:**

ಆವಶ್ಯಕವೆಂದು ಕಂಡುಬಂದರೆ ತೆಗೆದುಕೊಳ್ಳುತ್ತೇವೆ.

**Sri K. PUTTASWAMY:-**

Was it not a fact that the Standing Committee met much earlier to devise the steps that are to be taken for the next year?

**The Hon'ble Sri R. CHENNIGARAMIAH:-**

The Standing Committee met earlier to discuss the subject and on the decision of the Standing Committee a separate circular was issued.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

18-6-1951ರಲ್ಲಿ ಆಜ್ಞೆಯಾಯಿತು. ಅದಕ್ಕಿಂತ ಹಿಂದೆ ಸ್ಥಾಯೀಸಮಿತಿ ಸೇರಿದ್ದಾಗ 1952-53ನೇಯ ವರ್ಷ ಮತ್ತು ಇನ್ನು ಮುಂದೆ ಕೆಲವು ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಉದ್ದೇಶಪಟ್ಟಿಲ್ಲವೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಪಟ್ಟಿದ್ದಾರೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಅಲ್ಲಿಂದೀಚೆಗೆ ಸ್ಥಾಯೀಸಮಿತಿ ಸೇರಿತ್ತೇ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಇಲಾಖೆಯವರು ಏನು ಕ್ರಮ ಕೈಕೊಳ್ಳಬೇಕೋ ಅದನ್ನು ಕೈಗೊಂಡಿದ್ದಾರೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಏನು ಕಾರ್ಯಕ್ರಮ ಕೈಗೊಂಡಿದ್ದಾರೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಸ್ಥಾಯೀಸಮಿತಿ ಸೇರಿದ ಮೇಲೆ ಡೈರೆಕ್ಟರವರ ಸಂಗಡ ಚರ್ಚೆಮಾಡಿ ಈ ವರ್ಷ ಏನೇನು ಮಾಡಬೇಕೋ ಅದನ್ನು ಮಾಡಲು ಸೂಕ್ತ ಕ್ರಮ ಕೈಕೊಳ್ಳಬೇಕೆಂದು ಮಾಡಿದ್ದೇವೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:**

ಸಂಪೂರ್ಣವಾಗಿ ಕನ್ನಡ ಮಾಧ್ಯಮ ಜಾರಿಗೆ ಬರಲು ಸಾಕಷ್ಟು ಕಾರ್ಯಕ್ರಮ ಕೈಗೊಂಡಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:**

ಕೆಲವರ ಅಭಿಪ್ರಾಯ ಹಾಗಿದೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:**

ಕನ್ನಡ ಬೋಧಕ ಭಾಷೆಯಾಗಬೇಕೆಂದು ಸರ್ಕಾರಕ್ಕೆ ಅನೇಕ ಸಾರಿ ಎಲ್ಲ ಕಡೆಯಿಂದಲೂ ಒತ್ತಾಯ ಬಂದಿಲ್ಲವೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಕೆಲ ಕಡೆಯಿಂದ ಬಂದಿದೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಯಾವ ರೀತಿಯಲ್ಲಿ ಈ ಸಮಸ್ಯೆಯನ್ನು ಪರಿಹಾರಮಾಡಬೇಕೆಂದು ಸರ್ಕಾರದವರು ಯೋಚನೆ ಮಾಡಿದ್ದಾರೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಉತ್ತರದಲ್ಲಿ ತಿಳಿಸಿರುವಂತೆ ಒಂದು ಸರ್ಕ್ಯುಲರ್ ಕೊಟ್ಟಿದೆ. ಎರಡು ಸೆಕ್ಷನ್‌ಗಳಿರುವ ಕಡೆ ಒಂದು ಸೆಕ್ಷನ್ ಇಂಗ್ಲಿಷ್ ಮಾಧ್ಯಮ, ಇನ್ನೊಂದು ಕನ್ನಡ ಮಾಧ್ಯಮ ಇಟ್ಟುಕೊಳ್ಳಬೇಕು, ಒಂದೇ ಇದ್ದರೆ ಅಂಥಾ ಕಡೆ ಸ್ವಲ್ಪ ಕಷ್ಟವಾಗುತ್ತದೆ.

**ಶ್ರೀ ಕೆ. ಪುಟ್ಟಸ್ವಾಮಿಯವರು:-**

ಇದನ್ನು ಸಂಪೂರ್ಣವಾಗಿ ಸಾಧಿಸುವುದಕ್ಕೆ ಯಾವಾಗ ಸಾಧ್ಯವಾಗುತ್ತದೆ.

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಯಾವಾಗ ಪೂರ್ಣವಾಗಿ ಆಗುತ್ತದೆಯೋ ಆಗ ಆಗುತ್ತದೆ.

**ಶ್ರೀ ಜಿ.ಎ. ಆಚಾರ್ಯರು (ಬೆಂಗಳೂರು ಜಿಲ್ಲೆ):**

ತಕ್ಷಣವೇ ಎಲ್ಲ ಕಡೆಯೂ ಇಂಗ್ಲಿಷನ್ನು ಕಿತ್ತುಹಾಕಿ ಕನ್ನಡ ಮಾಧ್ಯಮವನ್ನು ಮಾಡಲು ಸಾಧ್ಯವೇ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಇಲ್ಲ, ಅಷ್ಟು ತಕ್ಷಣ ಮಾಡುವುದಕ್ಕೆ ಸಾಧ್ಯವಿಲ್ಲ.

**ಶ್ರೀ ಡಿ.ಎಂ. ಸಿದ್ದಯ್ಯನವರು (ಮೈಸೂರು ಜಿಲ್ಲೆ):-**

ಈ ಮಧ್ಯಕಾಲ ಎಲ್ಲಿಯವರೆಗೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಪೂರ್ತಿಯಾಗಿ ಜಾರಿ ಕೊಡಲು ಎಲ್ಲಿಯವರೆಗೆ ಆಗುವುದಿಲ್ಲವೋ ಅಲ್ಲಿಯವರೆಗೆ.

**ಶ್ರೀ ಡಿ.ಎಂ. ಸಿದ್ದಯ್ಯನವರು:-**

ಈ ಪರ್ವಕಾಲದಲ್ಲಿ ಇಂಥಾ ಹುಕುಮುಗಳ್ಯಾವುದನ್ನೂ ಸರ್ಕಾರ ಮಾಡಕೂಡದೆಂದು ಏನಾದರೂ ನಿಯಮವಿದೆಯೇ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಅಂಥ ನಿಯಮಗಳ್ಯಾವುವೂ ಇಲ್ಲ. ಕೆಲವು ತೊಂದರೆಗಳ ಕಾರಣದಿಂದ ಇದನ್ನು ಸಂಪೂರ್ಣವಾಗಿ ಜಾರಿಗೆ ಕೊಡುವುದಕ್ಕೆ ಆಗಲಿಲ್ಲ. ಇದು ಕಾಲಾನುಕ್ರಮದಲ್ಲಿ ಪೂರ್ತಿ ಆಗೇ ಆಗುತ್ತೆ ಅಂತೂ ಈಗ ಸದ್ಯಕ್ಕೆ ಆಗಿಲ್ಲ.

**ಶ್ರೀ ಡಿ.ಎಂ. ಸಿದ್ದಯ್ಯನವರು:-**

ಇದನ್ನು ತಮ್ಮ ಕಾಲದಲ್ಲಿಯೇ ಸಂಪೂರ್ಣಮಾಡಿ ಕೊಡಿ.

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ನಾವು ಮಾಡುವಷ್ಟನ್ನೂ ಮಾಡಿದ್ದೇವೆ.

**ಶ್ರೀ ಎ. ಭೀಮಪ್ಪನಾಯಕರು (ಚಿತ್ರದುರ್ಗ ಜಿಲ್ಲೆ):-**

ಕನ್ನಡ ಮಾಧ್ಯಮವನ್ನು ಜಾರಿಗೆ ಕೊಡಲು ತಮಗೆ ಏನೇನೂ ತೊಂದರೆಗಳಿವೆ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಎಲ್ಲ ಪಠ್ಯ ಪುಸ್ತಕಗಳನ್ನೂ ಕನ್ನಡದಲ್ಲಿ ಬರೆಸುವುದು ಅದಕ್ಕೆ ತಕ್ಕ ಕನ್ನಡ ಪಾಂಡಿತ್ಯವಿರುವ ತರ್ಜುಮೆಗಾರರನ್ನು ಒದಗಿಸಿಕೊಳ್ಳುವುದು ಮತ್ತು ಇತರೇ ಎಲ್ಲಾ ತೊಂದರೆಗಳನ್ನು ನಿವಾರಣೆ ಮಾಡಿ ಜಾರಿಗೆ ತರಲು ಏನೇನು ಪ್ರಯತ್ನಗಳು ಆವಶ್ಯಕವೋ ಅವುಗಳನ್ನೆಲ್ಲಾ ಮಾಡುತ್ತಿರಲಾಗಿದೆ.

**ಶ್ರೀ ಎ. ಭೀಮಪ್ಪನಾಯಕರು:-**

ಹಾಗೆ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿ ಬರೆಸುವುದಕ್ಕೆ ಏನು ಕಾರ್ಯಕ್ರಮವನ್ನು ಕೈಗೊಂಡಿದ್ದೀರಿ? ಇಂಗ್ಲಿಷ್‌ನಲ್ಲಿರತಕ್ಕ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಲು ಪಂಡಿತರನ್ನು ಹೊಂದಿಸಿಕೊಳ್ಳತಕ್ಕ ಬಗ್ಗೆ ತಾವೇನು ಕಾರ್ಯಕ್ರಮಗಳನ್ನು ಈ ತಹಲ್‌ವರೆಗೆ ಕೈಗೊಂಡಿರುತ್ತೀರಿ?

**ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-**

ಇರತಕ್ಕ ಪಂಡಿತರುಗಳೇ ನಮಗೆ ಭಾಷಾಂತರ ಮಾಡಲು ಒತ್ತಾಯಪಡಿಸುತ್ತಿದ್ದಾರೆ, ಹೀಗೆ ಈ ಪಠ್ಯ ಪುಸ್ತಕಗಳಿಂದಲೇನೂ ಅಷ್ಟು ತೊಂದರೆಯೊದಗಿರುವುದಿಲ್ಲ. ಇತರ ಕೆಲವು ತೊಂದರೆಗಳಿಂದ ಇದನ್ನು ಸಂಪೂರ್ಣವಾಗಿ ಜಾರಿಗೆ ಕೊಡಲು ಸಾಧ್ಯವಾಗಿಲ್ಲ ಅಷ್ಟೆ, ಆದರೆ, ಅನೇಕ ಕಡೆಗಳಲ್ಲಿ ವಿದ್ಯಾರ್ಥಿಗಳು ತಮಗೆ ಇಂಗ್ಲಿಷ್ ಮೀಡಿಯಂ ಇರಲೇಬೇಕೆಂದು ಒತ್ತಾಯ ಮಾಡುತ್ತಿದ್ದಾರೆ. ಆದಕ್ಕೆ ಅವರ ತಂದೆ ತಾಯಿಗಳಾಗಿರತಕ್ಕವರು ಸ್ವಲ್ಪ ಅವರನ್ನು ಸರಿಪಡಿಸಬೇಕಾಗಿದೆ. ಪ್ರಿಂಟಿಂಗ್ ವಿಚಾರದಲ್ಲಿ ಏನೂ ತೊಂದರೆ ಬಂದಿಲ್ಲ.

ಶ್ರೀ ಎ. ಭೀಮಪ್ಪನಾಯಕರು:-

ಈಗ ಹಾಲಿ ಹೈಸ್ಕೂಲಿನಲ್ಲಿ ಪಾಠ ಪ್ರವಚನ ನಡೆಯುತ್ತಿರುವ ಪಠ್ಯ ಪುಸ್ತಕಗಳ ಪೈಕಿ ಯಾವ ಯಾವುವನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿದ್ದೀರಿ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಭೂಗೋಳ, ಚರಿತ್ರೆ, ಗಣಿತ ಮತ್ತು ಸೈನ್ಸ್ ಇತ್ಯಾದಿಗಳನ್ನೆಲ್ಲಾ ತರ್ಜುಮೆ ಮಾಡಿಸಲಾಗಿದೆ.

ಶ್ರೀ ಎ. ಭೀಮಪ್ಪನಾಯಕರು:-

ಹಾಗಾದರೆ ಪಠ್ಯ ಪುಸ್ತಕಗಳು ತರ್ಜುಮೆಯಾಗದ ಕಾರಣದಿಂದ ಇದನ್ನು ಜಾರಿಗೆ ಕೊಡಲು ತೊಂದರೆಯಾಗಿಲ್ಲವೆಂಬುದು ನಿಜವೆ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ತೊಂದರೆಯಾಗಿ ನಿಂತಿರುವುದಕ್ಕೆ ಅದೇ ಕಾರಣವೆಂದು ನಾನೇನೂ ಹೇಳಿಲ್ಲ. ಅನೇಕ ಕಾರಣಗಳಲ್ಲಿ ಇದೂ ಒಂದಾಗಿರಬಹುದೆಂದು ಅಷ್ಟೆ.

ಶ್ರೀ ಎ. ಭೀಮಪ್ಪನಾಯಕರು:-

ಹಾಗಾದರೆ ಇದನ್ನು ಸರ್ಕಾರದವರು ಮನಸ್ಸಿಲ್ಲದೆ ಜಾರಿಗೆ ತರಲಿಲ್ಲವೋ ಅಥವಾ ತೊಂದರೆಗಳಿರುವುದರಿಂದ ಜಾರಿಗೆ ತರಲಿಲ್ಲವೋ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಸರ್ಕಾರದವರಿಗೆ ಮನಸ್ಸಿದ್ದೇ ಇದೆ. ಜಾರಿಗೆ ತಾರದಿರುವುದಕ್ಕೆ ಕಾರಣ ಆ ಬಾಬಿನಲ್ಲಿರತಕ್ಕ ಕೆಲವು ತೊಂದರೆಗಳು ಮತ್ತು ಅದಕ್ಕಾಗಿ ಜನರು ಸಾಕಷ್ಟು ಸಹಕಾರ ನೀಡದಿರುವುದು.

ಶ್ರೀ ಎ. ಭೀಮಪ್ಪನಾಯಕರು:-

ಹಾಗಿದ್ದರೆ ಇಂತಿಂಥ ತೊಂದರೆಗಳಿರುವುದರಿಂದ ಸಾಧ್ಯವಾಗಲಿಲ್ಲವೆಂದು ಸರ್ಕಾರದವರು ಏಕೆ ಹೇಳಬಾರದು?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಈಗಾಗಲೇ ಸಾಧಾರಣವಾಗಿ ಎಲ್ಲ ಕಡೆಗಳಲ್ಲಿಯೂ ಕನ್ನಡ ಮಾಧ್ಯಮ ಇದ್ದೇ ಇದೆ. ಆದರೆ ಸದ್ಯದಲ್ಲಿ 18-6-51ರ ಹುಕುಮನ್ನು ಜಾರಿ ಮಾಡಲಾಗಲಿಲ್ಲ. ಮುಂದಕ್ಕೆ ಜಾರಿಗೆ ಬರುತ್ತದೆಂದು ಹೇಳಿದ್ದೇನೆ.

ಶ್ರೀ ಎ. ಭೀಮಪ್ಪನಾಯಕರು:-

ಹೀಗೆ ತಾವು ಇದನ್ನು ಅರ್ಧಂಬರ್ಧ ಜಾರಿ ತಂದಿರುವುದರಿಂದ ಹೈಸ್ಕೂಲನ್ನು ಬಿಟ್ಟ ನಂತರ ಇಂಟರ್‌ಮೀಡಿಯಟ್ ಕಾಲೇಜಿಗೆ ಹೋಗತಕ್ಕ ವಿದ್ಯಾರ್ಥಿಗಳಲ್ಲಿ ದಕ್ಷತೆ ಕಮ್ಮಿಯಾಗುತ್ತಿದೆಯೆಂಬ ಅಂಶ ಸರ್ಕಾರದವರ ಗಮನಕ್ಕೆ ಬಂದಿದೆಯೇ?

**Mr. SPEAKER:-**

That does not arise.

ಶ್ರೀ ಕೆ. ಸುಬ್ಬರಾಯರು (ಬೆಂಗಳೂರು ಜಿಲ್ಲೆ):-

ಪ್ರತಿ ತರಗತಿಯಲ್ಲೂ ಇಂಥಾ ಒಂದೇ ಒಂದು ಶಾಖೆ ಇರತಕ್ಕ ಹೈಸ್ಕೂಲುಗಳು ನಮ್ಮ ಸಂಸ್ಥಾನದಲ್ಲಿ ಎಷ್ಟಿರುತ್ತವೆಂಬುದನ್ನು ಹೇಳುವುದಕ್ಕಾಗುತ್ತದೆಯೇ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ನೋಟೀಸ್.

ಶ್ರೀ ಕೆ. ಸುಬ್ಬರಾಯರು:-

ಒಂದೇ ಒಂದು ತರಗತಿ ಇರತಕ್ಕ ಹೈಸ್ಕೂಲುಗಳಲ್ಲಿ ಇಂಗ್ಲಿಷ್‌ನ್ನು ಮಾಧ್ಯಮವಾಗಿ ತೆಗೆದುಕೊಳ್ಳಲ್ಲಿಕ್ಕೆ ಏತಕ್ಕೆ ಅವಕಾಶವಿರಬೇಕು?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಒಂದು ವೇಳೆ ಅಂಥ ಕಡೆಗಳಲ್ಲಿ ಕನ್ನಡವು ಅವರ ಮಾತೃಭಾಷೆಯಾಗಿಲ್ಲದಂಥ ಸಂದರ್ಭಗಳಿದ್ದರೆ ಆಗ ಅಲ್ಲಿ ಇಂಗ್ಲಿಷ್‌ನ್ನು ಇಟ್ಟುಕೊಳ್ಳಲೇಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿ ಹೇಗೆ ನಡೆಸಬೇಕೆಂಬ ತೀರ್ಮಾನವನ್ನು ಇಲಾಖೆ ಮುಖ್ಯಸ್ಥರಿಗೇ ಬಿಟ್ಟುಬಿಡಲಾಗಿದೆ.

ಶ್ರೀ ಆರ್. ಚೆನ್ನಿಗರಾಮಯ್ಯನವರು:-

ವಿದ್ಯಾಇಲಾಖೆ ಡೈರೆಕ್ಟರು ಮತ್ತು ಸ್ಥಳೀಯ ಆಫೀಸರುಗಳನ್ನೇ ಕೇಳಿಕೊಂಡು ಮಾಡುವಂತೆ ಬಿಟ್ಟುಬಿಡಲಾಗಿದೆ, ಡೈರೆಕ್ಟರು ಸ್ಥಳೀಯ ಹೆಡ್ಮಾಸ್ಟರ ಅಭಿಪ್ರಾಯ ಕೇಳಿ ಅದನ್ನೆಲ್ಲ ಮಾಡುತ್ತಾರೆ.

ಶ್ರೀ ಕಡಿದಾಳ್ ಮಂಜಪ್ಪನವರು (ಶಿವಮೊಗ್ಗ ಜಿಲ್ಲೆ):-

ತನ್ನ ದೇಶ ಭಾಷೆಯನ್ನು ಬಿಟ್ಟು ಪರದೇಶದ ಭಾಷೆಯನ್ನು ತನ್ನ ಶಿಕ್ಷಣ ಮಾಧ್ಯಮವನ್ನಾಗಿ ಇಟ್ಟುಕೊಂಡಿರತಕ್ಕ ದೇಶಗಳು ಜಗತ್ತಿನಲ್ಲಿ ಇನ್ನು ಯಾವುದಾದರೂ ಇವೆಯೇ?

**Mr. SPEAKER:-**

That does not arise.

**Sri H.M. CHANNABASAPPA (Mysore District-General):-**

What is the policy of the Government in regard to this matter?

**The Hon'ble Sri. R. CHENNIGARAMIAH:**

The policy of the Government is quite clear. The policy is the want to introduce Kannada medium in all classes. If possible.

**Sri H.M. CHANNABASAPPA:-**

Have the Government taken any in that direction?

**The Hon'ble Sri R. CHENNIGARAMIAH:-**

Yes.

**Sri H.M. CHANNABASAPPA:-**

Have the Government any plan action in order to reach the goal?

**The Hon'ble Sri R. CHENNIGARAMIAH:-**

Yes.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:-

ತಾವು ಈ ಗುರಿಯನ್ನು ಮುಟ್ಟುವುದಕ್ಕೆ ಯಾವುದಾದರೂ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೀರಾ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಇಲ್ಲಿಯತನಕ ಹೇಳಿದ್ದೆಲ್ಲಾ ಆ ಕಾರ್ಯಕ್ರಮಕ್ಕೆ ಸಂಬಂಧಪಟ್ಟವುಗಳು.

ಶ್ರೀ ಎಚ್.ಎಂ. ಚನ್ನಬಸಪ್ಪನವರು:

ಇನ್ನು ಎಷ್ಟು ದಿವಸಗಳಲ್ಲಿ ಇದನ್ನು ಸಂಪೂರ್ಣಗೊಳಿಸುವಿರಿ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:

ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಸಂಪೂರ್ಣಗೊಳಿಸಲಾಗುತ್ತದೆ.

ಶ್ರೀ ಎಚ್.ಎಂ. ಚನ್ನಬಸಪ್ಪನವರು:-

ಆದರೆ ತಮ್ಮಲ್ಲಿ ಈ ಯೋಜನೆ ಬಗ್ಗೆ ನಿರ್ಧಾರವಾದ ಕಾರ್ಯಕ್ರಮಗಳಿವೆಯೇ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಪ್ರತಿಯೊಂದು ತರಗತಿಯಲ್ಲೂ ಎಲ್ಲೆಲ್ಲಿ ಒಂದೊಂದು ಸೆಕ್ಷನ್ ಇದೆಯೋ ಅಂಥ ಕಡೆ ಮಾತೃಭಾಷೆ ಕನ್ನಡ ಒಂದೇ ಇರತಕ್ಕವರಿದ್ದರೆ ಕನ್ನಡ ಮಾಧ್ಯಮ ಒಂದನ್ನೇ ಇಟ್ಟುಕೊಳ್ಳಬೇಕಂತಲೂ, ಹಾಗೆ ಮಾತೃಭಾಷೆ ಬೇರೆ ಬೇರೆ ಇರತಕ್ಕ ವಿದ್ಯಾರ್ಥಿಗಳಿರುವ ಕಡೆ 2-3 ಸೆಕ್ಷನ್ನುಗಳನ್ನಿಟ್ಟುಕೊಂಡಿದ್ದರೆ ಅಲ್ಲಿ ಇಂಗ್ಲಿಷ್ ಮೀಡಿಯಂ ಇರಬಹುದೆಂದೂ ಉಳಿದ ಕಡೆ ಡೈರೆಕ್ಟರ್ ಅನುಮತಿ ಇರಬಹುದೆಂದೂ ಉಳಿದ ಡೈರೆಕ್ಟರ್ ಅನುಮತಿ ಪ್ರಕಾರ ನಡೆಯಬಹುದೆಂದೂ ತೀರ್ಮಾನ ಆಗಿದೆ.

ಶ್ರೀ ಎಚ್.ಎಂ. ಚನ್ನಬಸಪ್ಪನವರು:-

ಈ ಕಾರ್ಯಕ್ರಮದಿಂದ ತಾವು ಗುರಿಯನ್ನು ಮುಟ್ಟಬಹುದೆಂದು ಭಾವಿಸಿದ್ದೀರಾ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಹೌದು.

ಶ್ರೀ ಎಂ.ಸಿ. ಶಿವಾನಂದಶರ್ಮರವರು (ಬೆಂಗಳೂರು ಜಿಲ್ಲೆ):-

ಇತರ ಪ್ರಾಂತ್ಯಗಳಲ್ಲಿ ಹೀಗೆ ಕನ್ನಡ ಮಾಧ್ಯಮ ಅಥವಾ ಅವರ ದೇಶ ಭಾಷೆಯನ್ನು ಜಾರಿಗೆ ತರಲು ಏನೇನು ಕಾರ್ಯಕ್ರಮಗಳನ್ನು ಕೈಗೊಂಡಿರುತ್ತಾರೆಂಬ ಬಗ್ಗೆ ತಿಳಿಯಲು ತಾವೇನಾದರೂ ಪ್ರಯತ್ನಪಟ್ಟಿದ್ದೀರಾ?

ಮಾನ್ಯ ಶ್ರೀ ಆರ್. ಚೆನ್ನಿಗರಾಮಯ್ಯನವರು:-

ಅವರವರ ಪ್ರಾಂತ್ಯಗಳಿಗೆ ಅನುಗುಣವಾಗಿರುವಂತೆ ಅವರು ಕಾರ್ಯಕ್ರಮಗಳನ್ನು ಹಾಕಿಕೊಂಡಿರಬಹುದು. ನಾವೂ ಸಹ ಇಲ್ಲಿ ನಮ್ಮ ದೇಶಕ್ಕೆ ಅನುಗುಣವಾದ ರೀತಿಯಲ್ಲೇ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ.

## 2. ರಾಜ್ಯ ಆಯವ್ಯಯ ಪತ್ರ ಕುರಿತು - 1959-60.*

ಸ್ವಾಮಿ, ಈ ಸಭೆಯ ಮುಂದಿರತಕ್ಕ ಡಿಮ್ಯಾಂಡಿನ ವಿಚಾರದಲ್ಲಿ ನಾಲ್ಕು ಮಾತುಗಳನ್ನಾಡಬೇಕೆಂದು ನಾನು ಇಚ್ಛಿಸುತ್ತೇನೆ. ಮೊದಲನೆಯದಾಗಿ ರಾಜ್ಯಪಾಲರ ಸಿಬ್ಬಂದಿಯ ವಿಚಾರವಾಗಿ ಒಂದು ಮಾತನ್ನು ಹೇಳಬೇಕಾಗಿದೆ. ರಾಜ್ಯಪಾಲರು ಸಂಬಳ ಮತ್ತು ಸಾರಿಗೆ (ಸಂಪ್ಚ್ಯುಟರಿ ಅಲೋಯೆನ್ಸ್) ಇದಾವುದನ್ನೂ ತೆಗೆದುಕೊಳ್ಳುತ್ತಿಲ್ಲ. ಇದಕ್ಕಾಗಿ ನಾವು ನಮ್ಮ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನರ್ಪಿಸಬೇಕಾಗಿದೆ. ಅವರ ಸಿಬ್ಬಂದಿಯಲ್ಲಿ ಆಗುತ್ತಿರುವ ಖರ್ಚನ್ನು ಖೋತಾ ಮಾಡಿಕೊಳ್ಳುವುದಕ್ಕೆ ಅವಕಾಶವಿದೆ ಎನ್ನುವುದನ್ನು ಈ ಸಮಯದಲ್ಲಿ ಸೂಚಿಸಲು ಇಚ್ಛಿಪಡುತ್ತೇನೆ. ಆ ಸಿಬ್ಬಂದಿಗೆ ಐದು ಲಕ್ಷಕ್ಕೆ ಮೇಲ್ಪಟ್ಟು ಹಣವನ್ನೊದಗಿಸಿದೆ. ಸಂಸ್ಥಾನದ ಆಡಳಿತವನ್ನು ನಡೆಸುತ್ತಿರತಕ್ಕ ಎಲ್ಲಾ ಜವಾಬ್ದಾರಿಯನ್ನೂ ಹೊತ್ತು ಸಮರ್ಪಕವಾಗಿ ಆಡಳಿತವನ್ನು ನಡೆಸಿದರೂ ಕೂಡ ಈ ಸಭೆಯ ವಿರೋಧ ಪಕ್ಷದ ಸದಸ್ಯರ ಆಕ್ಷೇಪಣೆಗೆ, ನಿಂದನೆಗೆ, ಒಳಗಾಗಿರತಕ್ಕ ಮಂತ್ರಿಗಳಿಗೆ ಇಲ್ಲಿ ಒದಗಿಸಿರತಕ್ಕ ಐದು ಲಕ್ಷ ಚಿಲ್ಲರೆ ರೂಪಾಯಿಗಳ ವಿಚಾರದಲ್ಲಿ ಬಹು ಕಟುವಾಗಿ ಟೀಕೆ ಮಾಡುತ್ತಾ ಬಂದಿದ್ದಾರೆ. ಅವರು ಟೀಕೆ ಮಾಡುವುದು ಸರಿಯಲ್ಲವೆಂದು ಹೇಳುವುದಿಲ್ಲ. ಅವರಿಗೆ ಟೀಕೆ ಮಾಡುವುದಕ್ಕೆ ಸ್ವಾತಂತ್ರ್ಯವಿದೆ. ಆದರೆ ಟೀಕೆಯ ದೃಷ್ಟಿಯಿಂದ ರಾಜ್ಯಪಾಲರ ಸಿಬ್ಬಂದಿಗೆ ಒದಗಿಸಿರತಕ್ಕ ಐದು ಲಕ್ಷ ರೂಪಾಯಿಗಳನ್ನು ಅಳತೆಮಾಡಿ ನೋಡುವುದಾದರೆ ಅದರಲ್ಲಿ ಖೋತಾ ಮಾಡಿಕೊಳ್ಳುವುದಕ್ಕೆ ಅವಕಾಶವಿದೆ ಎಂದು ಹೇಳುವುದಕ್ಕೆ ಸಂಕೋಚವೇನೂ ಆಗುವುದಿಲ್ಲ. ಈ ಟೀಕೆ ರಾಜ್ಯಪಾಲರ ವ್ಯಕ್ತಿತ್ವಕ್ಕಾಗಲೀ, ಅವರ ಮೇಲಿನ ಆಕ್ಷೇಪಣೆ ಎಂದಾಗಲಿ ಮಾನ್ಯ ಸ್ನೇಹಿತರುಗಳು ಯಾರೂ ಭಾವಿಸಬಾರದೆಂದು ನಾನು ವಿನಂತಿಮಾಡಿಕೊಳ್ಳುತ್ತೇನೆ. ಅವರಿಗೆ ಈ ಸಭೆಯವರು ಒದಗಿಸತಕ್ಕ ಸಿಬ್ಬಂದಿಯಿಂದಲೇ ಅವರ ಸ್ಥಾನಮಾನವನ್ನು ಉಳಿಸಿಕೊಳ್ಳಬೇಕಾದ ಸ್ಥಿತಿಯಲ್ಲಿ ಅವರೇನೂ ಇಲ್ಲ. ಆದುದರಿಂದ ಸರ್ಕಾರದವರು ಈ ವಿಚಾರದಲ್ಲಿ ಪರಿಶೀಲನೆ ಮಾಡಿ ಆವಶ್ಯಕವಾದ ಕಡೆ ಅವಕಾಶವಿದ್ದರೆ ಖೋತಾ ಮಾಡುವುದು ಒಳ್ಳೆಯದೆಂದು ಈ ಸಮಯದಲ್ಲಿ ನಾನು ನಮ್ರತೆಯಿಂದ ಸೂಚಿಸಲು ಇಚ್ಛಿಪಡುತ್ತೇನೆ.

ಎರಡನೆಯದಾಗಿ ಈ ಸಭೆಯ ಹಕ್ಕು ಬಾಧ್ಯತೆಗೆ, ಸಭೆ ತನ್ನ ಕಾರ್ಯವನ್ನು ನೆರವೇರಿಸುವುದಕ್ಕೆ ಅವಕಾಶವಾಗದೆ ಇರತಕ್ಕ ಒಂದೆರಡು ಅಂಶಗಳನ್ನು ಹೇಳುವುದಕ್ಕೆ ಇಚ್ಛಿಪಡುತ್ತೇನೆ. ಹೋದ ವರ್ಷ 1957-58 ನೆಯ ಸಾಲಿನ ಸಪ್ಲಿಮೆಂಟರಿ ಡಿಮ್ಯಾಂಡಿನ ಮೇಲೆ ಮಾತನಾಡುವಾಗ ನಾನು ಸರ್ಕಾರದ ಗಮನವನ್ನು ಈ ವಿಚಾರದ ಕಡೆಗೆ ಎಳೆದ ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿ ಈ ಸಭೆಗೆ ಬಂದು ಚರ್ಚೆಯಾಗಿ ಬಹಳ ವರ್ಷಗಳಾಗಿ ಹೋದವು. ನನಗೆ ಜ್ಞಾಪಕವಿರುವ ಹಾಗೆ 1955 ರಲ್ಲಿ ಚರ್ಚೆಯಾಯಿತೋ ಏನೂ ಆಗಿದ್ದರೂ ಆಗಿರಬಹುದು. 1950 ರಲ್ಲಿ ಆದ ಹಾಗೆ ಕಾಣಲಿಲ್ಲ. ವಿಶಾಲ ಮೈಸೂರು ಆದ ಮೇಲೆ ರಾಜ್ಯ ಪುನರ್ವಿಂಗಡಣೆಯಾದ ಮೇಲೆ ಈ ತಹಲ್‌ವರೆಗೂ ಕೂಡ ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿ ನಮ್ಮ ಮುಂದೆ ಬಂದಿಲ್ಲ. ಈ ವಿಚಾರವನ್ನು ನಾನು ಹೋದ ವರ್ಷ ಪ್ರಸ್ತಾಪ ಮಾಡಿದಾಗ ಮಾನ್ಯ ಹಣಕಾಸಿನ ಸಚಿವರು ಇದು ಸರ್ಕಾರದ ಜವಾಬ್ದಾರಿಯಲ್ಲ. ಸಭೆಯ ಅಧ್ಯಕ್ಷರು ಪಬ್ಲಿಕ್

*(ವಿಧಾನ ಸಭಾ ಕಲಾಪ ದಿನಾಂಕ: 8-3-1959)

ಅಕೌಂಟ್ಸ್ ಸಮಿತಿಗೆ ಬೇರೆ ಒಬ್ಬ ಅಧ್ಯಕ್ಷರನ್ನು ನೇಮಿಸಿ ಅವರಿಂದ ವರದಿಯನ್ನು ತರಿಸತಕ್ಕ ಜವಾಬ್ದಾರಿಯನ್ನು ಹೊಂದಿರುತ್ತಾರೆಂದು ಹೇಳಿದರು. ಸರ್ಕಾರವೇ ಆಗಲಿ, ಅಧ್ಯಕ್ಷರೇ ಆಗಲಿ, ಅಥವಾ ಈ ಸಭೆಯವರೇ ಆಗಲಿ, ಯಾರೇ ಆಗಲಿ ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿಯು ಈ ಸಭೆಯ ಮುಂದೆ ಬರದೆ ಇದ್ದರೆ, ಅದರ ಪರಿಣಾಮವೇನೆಂಬುದನ್ನು ಆಲೋಚನೆ ಮಾಡಬೇಕೆಂದು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ.

ಅಧ್ಯಕ್ಷರು:-

ಅವರು ಕೆಲಸವನ್ನು ಪೂರ್ತಿಮಾಡಿದ್ದಾರೆ. ಇಷ್ಟರಲ್ಲಿಯೇ ವರದಿಯು ತಮ್ಮ ಮುಂದೆ ಬರುತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಪಬ್ಲಿಕ್ ಅಕೌಂಟ್ಸ್ ಕಮಿಟಿ ಮತ್ತು ಎಸ್ಟಿಮೇಟ್ಸ್ ಕಮಿಟಿ ಈ ಎರಡು ಕಮಿಟಿಗಳ ವರದಿಗಳೂ ಬಹಳ ಪ್ರಾಮುಖ್ಯವಾದುವು. ಈ ಸಭೆಯು ಸರ್ಕಾರಕ್ಕೆ ಒದಗಿಸತಕ್ಕ ಹಣ ಸರಿಯಾದ ರೀತಿಯಲ್ಲಿ ಖರ್ಚಾಗುತ್ತಿದೆಯೋ, ಅದು ದುರ್ವ್ಯಯವಾಗುತ್ತಿದೆಯೋ ಅಥವಾ ಸದ್ವಿನಿಯೋಗವಾಗುತ್ತಿದೆಯೋ ಎನ್ನುವ ವಿಚಾರವನ್ನು ಈ ಸಭೆಗೆ ವರದಿ ಮಾಡತಕ್ಕ ಈ ಎರಡು ಪ್ರಾಮುಖ್ಯವಾದಂಥ ಸಮಿತಿಗಳು ತಮ್ಮ ವರದಿಯನ್ನು ನಮ್ಮ ಸಭೆಯ ಮುಂದೆ ಇಡುವುದಕ್ಕೆ ಆಗಿಲ್ಲ. ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವಿಚಾರದಲ್ಲಿ ನಾನು ಏನು ಆಕ್ಷೇಪಣೆಯನ್ನು ಹೇಳುತ್ತಿದ್ದೇನೆಯೋ ಅದು ಎಸ್ಟಿಮೇಟ್ಸ್ ಕಮಿಟಿಯ ವಿಚಾರದಲ್ಲಿಯೂ ಅನ್ವಯವಾಗುತ್ತದೆ. ಎಸ್ಟಿಮೇಟ್ಸ್ ಕಮಿಟಿಯ ವರದಿ 1955-56ನೆಯ ಸಾಲಿನಲ್ಲಿ ಈ ಸಭೆಯಲ್ಲಿ ಮುಂದೆ ಬಂದಿತ್ತು. ಅಲ್ಲಿಂದೀಚೆಗೆ ನಾವು ಒದಗಿಸಿದಂಥ ಹಣ ಸರಿಯಾಗಿ ವಿನಿಯೋಗವಾಗಿದೆಯೇ, ಯಾವ ಯಾವ ರೀತಿಯಲ್ಲಿ ವಿನಿಯೋಗವಾಗಿದೆ ಎನ್ನುವ ವಿಚಾರದಲ್ಲಿ ಎಸ್ಟಿಮೇಟ್ಸ್ ಕಮಿಟಿ ನಮಗೆ ವರದಿಯನ್ನು ಕೊಡುವುದಕ್ಕೆ ಆಗಿಲ್ಲ. ನಾನು ಸಭೆಯ ಅಧ್ಯಕ್ಷರಲ್ಲಿ ವಿನಂತಿ ಮಾಡಿಕೊಳ್ಳುವುದು ಸಾಧ್ಯವಾದಷ್ಟು ಮಟ್ಟಿಗೂ ಕೂಡಲೇ ಈ ಅಧಿವೇಶನದಲ್ಲಿಯೋ ಎರಡು ಸಮಿತಿಗಳ ವರದಿಗಳೂ ಕೂಡ ನಮ್ಮ ಮುಂದೆ ಬರುವುದಷ್ಟೇ ಅಲ್ಲ, ಬಂದಮೇಲೆ ಅವುಗಳ ಮೇಲೆ ಚರ್ಚೆ ಮಾಡುವುದಕ್ಕಾದರೂ ಕಾಲವನ್ನು ಒದಗಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಅಧ್ಯಕ್ಷರು:-

ಈಗ ಪಬ್ಲಿಕ್ ಅಕೌಂಟ್ಸ್ ಕಮಿಟಿ ರಿಪೋರ್ಟ್ ಬರುತ್ತದೆ. ಈ ಅಧಿವೇಶನದಲ್ಲಿಯೇ ಅದರ ಮೇಲಿನ ಚರ್ಚೆಗೆ ಒಂದು ದಿವಸವನ್ನು ಕೊಡಬೇಕೆಂದು ಮಾಡಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಅನೇಕ ರಿಪೋರ್ಟುಗಳು ಸಭೆಯ ಮುಂದೆ ಏನೋ ಒಂದು ರೀತಿಯ ಔಪಚಾರಿಕವಾಗಿ ಬರುತ್ತಿರುವಂತೆ ನನಗೆ ಭಾಸವಾಗುತ್ತದೆ. ಪಬ್ಲಿಕ್ ಸರ್ವಿಸ್ ಕಮಿಷನ್ ವರದಿಯ ವಿಚಾರವನ್ನು ನಿನ್ನೆಯ ದಿನ ವಿರೋಧಪಕ್ಷದ ಸದಸ್ಯರಾದ ಶ್ರೀಮಾನ್ ಕೆಂಚಪ್ಪನವರು ಈ ಸಭೆಯ ಗಮನಕ್ಕೆ

ತಂದರು. ಪಬ್ಲಿಕ್ ಅಕೌಂಟ್ಸ್ ಕಮಿಟಿ ರಾಜ್ಯಾಂಗಕ್ಕನುಗುಣವಾಗಿ ಪ್ರತಿ ಸಾಲಿನಲ್ಲಿಯೂ ಕೂಡ ಅವರು ಮಾಡಿರುವುದನ್ನು ತಿಳಿಸಬೇಕಾಗಿದೆ. ಅದು ಅದರ ಕರ್ತವ್ಯ. ರಾಜ್ಯಾಂಗದಲ್ಲಿ ಅಡಗಿರತಕ್ಕ ಕಾನೂನಿಗೆ ವಿರುದ್ಧವಾಗಿ ಮೂರು ವರ್ಷಗಳಿಂದ ನಮಗೆ ರಿಪೋರ್ಟು ಬಂದಿಲ್ಲ. ಇದು ಸರಿಯೋ? ಇದಕ್ಕಾಗಿ ಸರ್ಕಾರದವರು ಏನು ಮಾಡಿದ್ದಾರೆ? ಕಾನ್‌ಸ್ಟಿಟ್ಯೂಷನಲ್ ಆಬ್ಲಿಗೇಷನ್ ಇದೆ. ಪಬ್ಲಿಕ್ ಸರ್ವಿಸ್ ಕಮಿಷನ್‌ರವರು ಅದನ್ನು ತಿರಸ್ಕಾರ ಮಾಡಿದರೆ ಅದರಿಂದ ನಮಗೆ ಏನು ಹಿಡಿತ ಇದೆ ಎನ್ನುವುದನ್ನು ಪರಿಶೀಲನೆ ಮಾಡಬೇಕಾಗಿದೆ. ಕಳೆದ ಅಧಿವೇಶನದಲ್ಲಿ ನಾನು 1955-56ರ ಪಬ್ಲಿಕ್ ಸರ್ವಿಸ್ ಕಮಿಷನ್ ರಿಪೋರ್ಟ್ ಬಗ್ಗೆ ಚರ್ಚೆ ಆಗಬೇಕು ಎಂದು ತಮಗೆ ಒಂದು ನೋಟಿಸ್ ಕೊಟ್ಟಿದ್ದೆನು. ಅದನ್ನು ಪರಿಶೀಲನೆ ಮಾಡುತ್ತೇವೆಂದು ಹೇಳಿದರು. ಈಚೆಗೆ ಇಂಡಿಯಾ ದೇಶದ ಕೆಲವು ಸಂಸ್ಥಾನಗಳ ಪಬ್ಲಿಕ್ ಸರ್ವಿಸ್ ಕಮಿಷನ್ ರಿಪೋರ್ಟ್ ಚರ್ಚೆ ಆಗಬೇಕಾದದ್ದು ಅವಶ್ಯಕ. ಪಬ್ಲಿಕ್ ಸರ್ವಿಸ್ ಕಮಿಷನ್‌ನವರು ಮಾಡಿದ್ದನ್ನೆಲ್ಲಾ ಸರ್ಕಾರದವರು ಒಪ್ಪಲೇಬೇಕು ಎನ್ನುವ ವಿದಾಯ ಏನೂ ಇಲ್ಲ. ಆ ಸಮಿತಿಯವರು ಮಾಡಿದ ಶಿಫಾರಸ್ಸುಗಳು ಸಮಾಜಕ್ಕೆ ನ್ಯಾಯವನ್ನು ಒದಗಿಸಿಕೊಡುವುದಿಲ್ಲ ಎಂದು ಸರ್ಕಾರಕ್ಕೆ ಖಚಿತವಾದರೆ ಸರ್ಕಾರದವರು ಆ ಶಿಫಾರಸ್ಸುಗಳನ್ನು ನಿರಾಕರಿಸುವುದಕ್ಕೆ ಅವಕಾಶವಿದೆ. ಅವರು ಹಾಗೆ ನಿರಾಕರಿಸುದುದಕ್ಕೆ ಈ ಸಭೆಯಲ್ಲಿ ಪರಿಷ್ಕಾರ ಇದೆಯೇ ಇಲ್ಲವೇ ಎನ್ನುವುದನ್ನು ತಿಳಿಯಲು ಅವಕಾಶವಿದೆ. ಪಬ್ಲಿಕ್ ಸರ್ವಿಸ್ ಕಮಿಷನ್ ಅವರು ಏನೂ ಮಾಡಿದರೂ ಅದು ನ್ಯಾಯ ಎಂದು ಬಂದಿದೆ. ಸರ್ಕಾರದವರಿಗೂ ಕೂಡ ಆ ರೀತಿ ಮಾಡುವುದು ಸುಲಭವಾಗುತ್ತದೆ. ಯಾವುದನ್ನಾದರೂ ಏತಕ್ಕೆ ವ್ಯತ್ಯಾಸವಾಯಿತು ಎಂದು ಕೇಳಿದಾಗ ಪಬ್ಲಿಕ್ ಸರ್ವಿಸ್ ಕಮಿಷನ್ ಅವರು ಸಲಹೆ ಮಾಡಿದರು ನಾವು ಅದರಂತೆ ಮಾಡಿದೆವು ಎಂದು ಹೇಳಿದರೆ ತಮ್ಮ ಮೇಲೆ ಬರತಕ್ಕ ಆರೋಪಣೆಗೆ ಉತ್ತರ ಹೇಳುವುದಕ್ಕೆ ಸುಲಭವಾಗುತ್ತದೆ ಎಂದು ಅನೇಕ ವೇಳೆ ಪಬ್ಲಿಕ್ ಸರ್ವಿಸ್ ಕಮಿಷನ್ ಮಾಡತಕ್ಕ ಕೆಲಸ ಮತ್ತು ಅವರು ಅನುಸರಿಸಿದ ನೀತಿ ಸರಿ ಇಲ್ಲದೆ ಇದ್ದರೂ ಕೂಡ, ಸರ್ಕಾರದವರು ಹೆದರಿ ನಿಸ್ಸಹಾಯಕರಾಗಿದ್ದಾರೆ ಎಂದು ನನ್ನ ಭಾವನೆ. ಪ್ರಾಂತಗಳ ಪುನರ್‌ವಿಂಗಡಣೆ ರಿಪೋರ್ಟಿನಲ್ಲಿ ಯಾವುದೋ ಅಂಕಿಅಂಶಗಳಿವೆ, ಅದರಂತೆ ಉದ್ಯೋಗವನ್ನು ಹಂಚಿಕೊಡುತ್ತಿದ್ದಾರೆಂದು ನಾನು ಕೇಳಿದ್ದೇನೆ. ನಾನು ಹತ್ತಾರು ವರ್ಷಗಳಿಂದ ಈ ಸಭೆಯಲ್ಲಿ ಸದಸ್ಯನಾಗಿದ್ದೇನೆ. ನಾನು ಈ ವಿಚಾರದಲ್ಲಿ ತಿಳಿದುಕೊಳ್ಳಬೇಕು ಎನ್ನುವ ಕುತೂಹಲವಿದ್ದರೂ ನಾನು ನಿಸ್ಸಂಕೋಚವಾಗಿ ಒಪ್ಪಿಕೊಳ್ಳುತ್ತಾ ಇರುವುದು ಪಬ್ಲಿಕ್ ಸರ್ವಿಸ್ ಕಮಿಷನ್‌ನವರು ಈ ಹುದ್ದೆಗಳನ್ನು ಕೊಡುವುದರಲ್ಲಿ ಯಾವ ನೀತಿಯನ್ನು ಅನುಸರಿಸುತ್ತಿದ್ದಾರೆ ಎಂಬುದು ನನಗೆ ತಿಳಿಯದ್ದು ಆಗಿದೆ. ಒಂದು ವಿಚಾರ ಮೊನ್ನೆ ನನ್ನ ಗಮನಕ್ಕೆ ಬಂದಿತು. ನಮ್ಮ ಊರಿನ ನಯನಜ ಜಾತಿಯ ಒಬ್ಬ ಹುಡುಗ ಹಲವಾರು ವರ್ಷ ಮಿಡಲ್ ಸ್ಕೂಲ್ ಹೆಡ್‌ಮಾಸ್ಟರಾಗಿ ತಾತ್ಕಾಲಿಕ ಹುದ್ದೆಯಲ್ಲಿದ್ದರೂ ಕೂಡ, ಆತ ಆ ಹುದ್ದೆಗೆ ಅರ್ಜಿ ಹಾಕಿದ. ಆತನಿಗೆ ಕೆಲಸ ಸಿಕ್ಕಲಿಲ್ಲ. ದೇವಾಂಗ ಜಾತಿಯ ಒಬ್ಬ ಹುಡುಗನಿಗೆ ಕೊಟ್ಟರು. ಕೊಡುವುದಕ್ಕೆ ನಾನು ಆಕ್ಷೇಪಣೆ ಮಾಡುವುದಿಲ್ಲ. ಮೂರು ಜಾತಿಯ ಗ್ರೂಪ್ ಇದೆ. ನಯನಜ ಕ್ಷತ್ರಿಯರು ಅವರಿಗಿಂತಲೂ ಮೇಲೆ ಬಂದಿದ್ದಾರೆ. ಆದ್ದರಿಂದ ಆ ಸಲದ ಹುದ್ದೆ ಮೂರು ಜಾತಿಗಳಿಗೇ ಅಲ್ಲದೆ ಬೇರೆ ಬೇರೆ ಜಾತಿಗಳಿಗೆ ಹೋಗಬೇಕು ಎನ್ನುವ ವಿವರಣೆ ಸಹ ದೊರೆಯಿತು.

ನಿಜವಾಗಿಯೂ ಇದು ನನಗೆ ಆಶ್ಚರ್ಯವೆನಿಸಿತು. ನನಗೆ ತಿಳಿದಮಟ್ಟಿಗೆ ಪಟ್ಟಣ ವಾಸಿಗಳಾಗಿರುವ ನಯನಜ ಕ್ಷತ್ರಿಯರನ್ನು ಬಿಟ್ಟರೆ ಬಾಕಿ ಇರುವವರು ಯಾವ ರೀತಿಯಲ್ಲೂ ಕೂಡ ಷೆಡ್ಯೂಲ್‌ನವರಿಗಿಂತ ಮೇಲು ದರ್ಜೆಯಲ್ಲಿ ಇಲ್ಲ. ಇದ್ದರೂ ಕೂಡ ಬಿ.ಎ. ಪರೀಕ್ಷೆ, ಬಿ.ಇಡಿ. ಪರೀಕ್ಷೆ ಮಾಡಿದವರಿಗೆ ಒಂದು ಮಿಡಲ್ ಸ್ಕೂಲ್ ಹೆಡ್ಮಾಸ್ಟರ್ ಕೆಲಸ ಸಿಕ್ಕುವುದಿಲ್ಲ ಎಂದರೆ ಹುದ್ದೆಗಳನ್ನು ಕೊಡುವಲ್ಲಿ ಯಾವ ನೀತಿಯನ್ನು ಅನುಸರಿಸುತ್ತಾರೆ ಎಂದು ತಿಳಿದುಕೊಳ್ಳಬೇಕಾದದ್ದು ಆವಶ್ಯಕ. ಆದ್ದರಿಂದ ಈ ವರ್ಷ ಪಬ್ಲಿಕ್ ಸರ್ವಿಸ್ ಕಮಿಷನ್ ಅವರು ಕೊಟ್ಟಿರುವ ವರದಿಯನ್ನು ಈ ಸಭೆಗೆ ಸಲ್ಲಿಸಬೇಕಾದದ್ದು ಕರ್ತವ್ಯ. ಆದ್ದರಿಂದ ಕರ್ತವ್ಯಲೋಪ ಮಾಡಿದ್ದರೆ ಸರ್ಕಾರದವರು ರಾಜ್ಯಾಂಗದಲ್ಲಿ ಯಾವ ರೀತಿ ಅದನ್ನು ಸರಿಪಡಿಸಬೇಕೆಂಬ ಬಗ್ಗೆ ಆಲೋಚನೆ ಮಾಡಬೇಕಾದದ್ದು ಅತ್ಯಗತ್ಯವಾಗಿದೆ ಎಂದು ನಾನು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ನಮ್ಮ ಜಿಲ್ಲಾ ಮಟ್ಟದಲ್ಲಿ ನಡೆಯುತ್ತಾ ಇರತಕ್ಕ ಆಡಳಿತದ ವಿಚಾರವನ್ನು ಈಗಾಗಲೇ ಶ್ರೀಮಾನ್ ಎಸ್. ರಾಮಯ್ಯನವರು ಹೇಳಿದ್ದಾರೆ. ನಾನಾದರೂ ಅದೇ ಅಂಶಗಳನ್ನು ಒತ್ತಿ ಹೇಳಬೇಕು ಎಂದಿದ್ದೇನೆ. ನಾನು ಪುನರುಕ್ತಿ ದೋಷಕ್ಕೆ ಒಳಗಾದರೂ ಸರ್ಕಾರದ ಮನಸ್ಸಿಗೆ ಹಿಡಿಯಬೇಕು ಎಂದು ಅದನ್ನು ಪುನಃ ಒತ್ತಿ ಹೇಳುವುದಕ್ಕೆ ತಮ್ಮ ಅಪ್ಪಣೆಯನ್ನು ಬೇಡುತ್ತಿದ್ದೇನೆ. ಸ್ವಾಮಿ, ಜಿಲ್ಲಾಧಿಕಾರಿಗಳನ್ನು ಹಳ್ಳಿಗಳ ಜನರು ನೋಡಿ ತಮ್ಮ ಕೆಲಸ ಮಾಡಿಕೊಂಡು ಬರಬೇಕು ಎಂದರೆ ಜಿಲ್ಲಾಧಿಕಾರಿಗಳು ಸುಮಾರು ತಿಂಗಳಿಗೆ ಸರಾಸರಿ 25 ದಿನ ಹೆಡ್ ಕ್ವಾರ್ಟರ್ಸ್‌ನಲ್ಲಿ ಇರುವುದಕ್ಕೆ ಆಗುತ್ತಾ ಇಲ್ಲ. ಬೇರೆ ಕೆಲಸಗಳಿಗೋಸ್ಕರ ಅವರು ಇನ್‌ಸ್ಪೆಕ್ಟ್ ಮಾಡುವುದಕ್ಕೆ ಹೋಗುವುದಿದೆ. ಈಚೆಗೆ ಅಭಿವೃದ್ಧಿ ಕಾರ್ಯಗಳೂ ಕೂಡ ನಡೆಯುತ್ತಾ ಇವೆ. ಆ ಕೆಲಸವನ್ನು ನೋಡುವುದಕ್ಕೆ ಹೋಗಬೇಕಾಗಿದೆ. ಬಹಳ ದಿನ ಮಂತ್ರಿಗಳು ಪ್ರವಾಸ ಮಾಡುವಾಗ ಅವರ ಜೊತೆಯಲ್ಲಿ ಹೋಗುವುದರಿಂದ ಜನರ ಕೆಲಸಗಳಿಗೆ ಬಹಳ ಅಡಚಣೆಯಾಗಿದೆ. ಈ ಸ್ಥಿತಿ ಬರೀ ಜಿಲ್ಲಾಧಿಕಾರಿಗಳು ಒಬ್ಬರದೇ ಅಲ್ಲ. ಸ್ವಾಮಿ, ಮೈಸೂರು ನಗರದಲ್ಲಿ ಜವಾಬ್ದಾರಿಯುತ ಸ್ಥಾನದಲ್ಲಿರತಕ್ಕ ಯಾವ ಅಧಿಕಾರಿಯನ್ನೂ ಕಂಡು ಒಂದು ವಾರದಿಂದ ಹುಡುಕುವುದಕ್ಕೆ ಆಗಲಿಲ್ಲ. ವಿಚಾರಿಸಿದ್ದರಲ್ಲಿ ಮಂತ್ರಿಗಳ ಜೊತೆಯಲ್ಲಿ ಪ್ರವಾಸ ಹೋಗಿದ್ದಾರೆ ಎಂದು ಗೊತ್ತಾಯಿತು. ಸ್ವಾಮಿ ಈ ವಿಚಾರಗಳನ್ನು ಹೇಳುವಾಗ ನನ್ನ ಉದ್ದೇಶ ಒಂದೇ ಆಗಿದೆ. ಆಡಳಿತ ನಡೆಸುವವರು ನಾವು ಜವಾಬ್ದಾರಿ ನಮ್ಮ ಮೇಲೆ ಬಿದ್ದಿದೆ, ಸಾರ್ವಜನಿಕ ಚುನಾವಣೆಯಲ್ಲಿ ಜನರು ವಿಶ್ವಾಸವಿಟ್ಟು ಕಾಂಗ್ರೆಸ್ ಪಕ್ಷವನ್ನು ಚುನಾಯಿಸಿದ್ದಾರೆ. ಆದ್ದರಿಂದ ಆಡಳಿತದ ಜವಾಬ್ದಾರಿಯನ್ನು ಹೊರುವಾಗ ಯಾವುದಾದರೂ ದೋಷ ಇದ್ದರೆ ಅದನ್ನು ಹೇಳಬೇಕಾದದ್ದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ಈ ವಿಚಾರವನ್ನು ನನ್ನ ಒಂದು ಕರ್ತವ್ಯ ದೃಷ್ಟಿಯಿಂದ ಸರ್ಕಾರದಲ್ಲಿ ವಿನಂತಿಮಾಡಿಕೊಳ್ಳುತ್ತಿದ್ದೇನೆ.

ಶ್ರೀ ಸಿ.ಜೆ. ಮುಕ್ಕಣ್ಣಪ್ಪ:-

ಬಹುವಾಗಿ ಮಾನ ತೆಗೆಯಬೇಡಿ.

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ ಅಷ್ಟರಲ್ಲೇ ಇರುವುದಾದರೆ ಹೇಳುತ್ತೇನೆ. ಸರ್ಕಾರದವರು ತಾವು ಪ್ರವಾಸ ಮಾಡುವ ವೇಳೆಯಲ್ಲಿ ಎಷ್ಟು ಕನಿಷ್ಟ ಸಿಬ್ಬಂದಿಯನ್ನು ಕರೆದುಕೊಂಡು ಹೋಗಬಹುದು ಎಂಬುದನ್ನು ನಿಗದಿ ಮಾಡಬೇಕು. ಒಂದು ಜಿಲ್ಲೆಯಲ್ಲಿ ಒಂದೇ ತಿಂಗಳಲ್ಲಿ ಹೆಚ್ಚು ಮಂತ್ರಿಗಳು ಬಂದರೆ ಅಲ್ಲಿನ ಕೆಲಸ ಕಾರ್ಯಗಳಿಗೆ ಬಹಳ ಅಡಚಣೆಯಾಗುತ್ತದೆ. ಮಂತ್ರಿಗಳು ಪ್ರವಾಸಮಾಡಬೇಕಾದದ್ದು ಆವಶ್ಯಕ. ಅವರು ಹೋಗಿ ಸ್ಥಳದ ಕುಂದುಕೊರತೆಗಳನ್ನು ತಿಳಿದುಕೊಳ್ಳಬೇಕಾದದ್ದು ಆವಶ್ಯಕ. ಆವಶ್ಯಕವಾದಂಥ ಈ ಕೆಲಸವನ್ನು ಮಾಡುವಾಗ ಬರೀ ಹೆಚ್ಚು ಆಡಳಿತಕ್ಕೆ ಧಕ್ಕೆ ಬಾರದಂತಹ ರೀತಿಯಲ್ಲಿ ಅವರು ನೋಡಿಕೊಳ್ಳಬೇಕು. ಮಿಸಲೇನಿಯಸ್ ಹೆಡ್ಡಿಂಗಿನಲ್ಲಿ ಏಳೆಂಟು ಸಾವಿರ ರೂಪಾಯಿಗಳಿದ್ದದ್ದು ಎಂದರೆ ಹೋದ ವರ್ಷದ ರಿವೈಜ್ ಎಸ್ಟಿಮೇಟಿನಲ್ಲಿ 3.35 ಇದ್ದದ್ದು ಈ ಹೊಸದಾಗಿರುವ ಬಡ್ಜೆಟ್ಟಿನಲ್ಲಿ 9.00 ಲಕ್ಷ ರೂಪಾಯಿಗಳಿಗೆ ಬಂದಿದೆ. ಹೀಗೆ ಈ ಒಂಭತ್ತು ಲಕ್ಷ ರೂಪಾಯಿಗಳ ಹಣವನ್ನು ಏತಕ್ಕಾಗಿ ಒದಗಿಸಬೇಕೆಂದರೆ, ಪುಟ 51ರಲ್ಲಿ, ಬಡ್ಜೆಟ್ ಮೆಮೊರ್‍ಯಾಂಡಂನಲ್ಲಿ ಈ ರೀತಿಯಾಗಿದೆ:

"(i) Miscellaneous:

(q) Miscellaneous: The expenditure connected with Dasara Festivities and expenditure on other Miscellaneous items is debited to this minor head". ನನಗೆ ಇದನ್ನು ಓದಿದ ಮೇಲೆ ಈ ಮಿಸಲೇನಿಯಸ್ ಹೆಡ್ಡಿಂಗನ್ನು ಪೂರ್ತಿಯಾಗಿ ದಸರಾಕ್ಕೇನೆ ಖರ್ಚು ಮಾಡಿದ್ದಾರೆಯೋ ಏನೋ ಗೊತ್ತಾಗುವುದಿಲ್ಲ. ಒಬ್ಬರೇ ಡೆಪ್ಯುಟಿ ಕಮೀಷನರ್ ಅವರಿಗೆ ಎರಡು ಸಾವಿರ ರೂಪಾಯಿಗಳ ಮೇಲ್ಪಟ್ಟು ಕೊಡುತ್ತಿರಲಿಲ್ಲ. ಆದರೆ ಇಲ್ಲಿ ಒಂಭತ್ತು ಲಕ್ಷ ರೂಪಾಯಿಗಳನ್ನು ಏತಕ್ಕಾಗಿ ಒದಗಿಸಬೇಕು ಎಂದು ನಾನು ಕೇಳುತ್ತಿದ್ದೇನೆ.

ಇಷ್ಟು ಮಾತುಗಳನ್ನು ಹೇಳಿ ಈಗ ನಮ್ಮ ಮುಂದೆ ಇರುವ ಡಿಮ್ಯಾಂಡನ್ನು ನಾನು ಅನುಮೋದಿಸುತ್ತೇನೆ.

## 3. ಒಂದು ಕ್ರಿಯಾ ಲೋಪದ ಬಗ್ಗೆ - 1961.*

ಡಾ. ಬಿ.ಕೆ. ನಾಗೂರ್:-

ನಾನು ನಿನ್ನೆಯಿಂದ ಎಲ್ಲವನ್ನೂ ನೋಡುತ್ತಿದ್ದೇನೆ. ನಾನು ಎಷ್ಟೋ ಸಾರಿ ನನಗೆ ಚಾನ್ಸ್‌ಕೊಡಿ ಎಂದು ಕೇಳಿದ್ದೇನೆ. ನನ್ನ ಕಡೆ ಸ್ವಲ್ಪ ದೃಷ್ಟಿಯನ್ನು ಅಧ್ಯಕ್ಷರು ಇಡಬೇಕು.

ಉಪಾಧ್ಯಕ್ಷರು:-

ಒಂದು ವಿಧಿಲೋಪ ಇರುವಾಗ ಇನ್ನೊಂದು ವಿಧಿ ಲೋಪ ಹೇಗೆ ಆಗುತ್ತದೆ?

**Sri K. Puttaswamy:-**

On a point of order.

**Sri .C.J. Muckannappa:-**

Sri Narayanaswamy wanted to raise a point of order. You have not allowed him to have his say.

ಉಪಾಧ್ಯಕ್ಷರು:-

ಕ್ರಿಯಾಲೋಪ ಎತ್ತುವುದೇನೋ ಸರಿ ಆದರೆ ಅವರು ಸುಮ್ಮನೆ ಕುಳಿತು ಬಿಟ್ಟರು. ಅದಕ್ಕೆ ನಾನು ಏನು ಮಾಡಬೇಕು? ಅವರು ಏಳಲಿಲ್ಲ.

ಶ್ರೀ ಸಿ.ಜೆ. ಮುಕ್ಕಣ್ಣಪ್ಪ:-

ತಾವು ಸರಿಯಾಗಿ ಗಮನಿಸಲಿಲ್ಲ.

**Sri. Y. Veerappa:-**

When the Speaker assured the Honourable Member, he kept quiet.

ಉಪಾಧ್ಯಕ್ಷರು:-

ಎಲ್ಲರೂ ಕುಳಿತುಕೊಳ್ಳಿ. ಇದೇ ರೀತಿ ಮುಂದುವರಿದರೆ ನಾನು ಈ ಸಭೆಯನ್ನು ಖಂಡಿತವಾಗಿ ಮುಂದಕ್ಕೆ ಹಾಕಬೇಕಾಗುತ್ತದೆ.

---

*(ವಿಧಾನ ಸಭಾ ಕಲಾಪ ದಿನಾಂಕ: 11-4-1961)

ಶ್ರೀ ಕೆ. ಪುಟ್ಟಸ್ವಾಮಿ:-

On a point of order. ವಿರೋಧಪಕ್ಷದ ಸದಸ್ಯರಲ್ಲಿ ಈಚೆಗೆ ಅನ್ಯಾಯ ಪ್ರವೃತ್ತಿ ಹೆಚ್ಚಾಗಿ ಅಧ್ಯಕ್ಷರ ಆಜ್ಞೆಗೆ ಮತ್ತು ರೂಲಿಂಗ್‌ಗಳಿಗೆ ವಿರೋಧ ಮಾಡಿ ಈ ಸಭೆಯಲ್ಲಿ ಗಲಭೆಯನ್ನುಂಟುಮಾಡುವ ಪ್ರವೃತ್ತಿ ಕಂಡುಬರುತ್ತಿದೆ. ಇದನ್ನು ಅಧ್ಯಕ್ಷರು ಸರಿಯಾದ ರೀತಿಯಲ್ಲಿ ಹತೋಟಿಗೆ ತರದೇ ಹೋದರೆ, ಈ ಸಭೆಯ ಗೌರವ ಮತ್ತು ಘನತೆಗೆ ಧಕ್ಕೆ ಉಂಟಾಗಬಹುದು...

**Sri C.J. Muckannappa:-**

What is the point of order involved? He cannot sarcastically make remarks. ಮಾನ್ಯ ಸದಸ್ಯರು ನಮ್ಮಿಂದ ಪಾಠ ಕಲಿಯಬೇಕು ಅವರು ಆ ಮಾತುಗಳನ್ನು ವಾಪಸ್ಸು ಪಡೆಯಬೇಕು. ಆ ಬಗ್ಗೆ ಅಧ್ಯಕ್ಷರು ರೂಲಿಂಗ್ ಕೊಡಬೇಕು.

ಉಪಾಧ್ಯಕ್ಷರು:-

ಈ ರೀತಿ ಆತಂಕವನ್ನುಂಟುಮಾಡುವುದು ಸರಿಯಲ್ಲ. ಕುಳಿತುಕೊಳ್ಳಿ.

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಸದಸ್ಯರು ಮಾತನಾಡುವಾಗ ನಮ್ಮಿಂದ ಪಾಠ ಕಲಿಯಬೇಕೆಂದು ಹೇಳಿದರು. ಅವರ ಪಾಠ ನಾವು ಕಲಿಯಬೇಕಾದ ಅವಕಾಶವೇ ಇಲ್ಲ. ಇಂತಹ ಪ್ರತಿಭಟನೆಗೆ ನಾನೇನು ಜಗ್ಗುವನಲ್ಲ.

**Sri. Y. Veerappa:-**

I want him not to utter such words on the floor of the House. He must have regard for sanctity and procedure.

**Sri M. Ramappa:-**

Why should he make observations of an unwarranted character? He is making a big speech, Making allegations.

**Sri C.J. Muckannappa:-**

I want to know what is the point of order involved.

**Mr. Deputy Speaker:-**

I have allowed him to speak and will give him a chance to defend himself.

ಶ್ರೀ ಕೆ. ಪುಟ್ಟಸ್ವಾಮಿ:-

ಸ್ವಾಮಿ, ನಾನು ಆಡತಕ್ಕಂಥ ಮಾತುಗಳಲ್ಲಿ ಯಾವುದಾದರೂ ಈ ಸಭೆಯ ಮರ್ಯಾದೆಗೆ ವಿರೋಧವಾಗಿದ್ದರೆ ನಾನು ಈ ಸಭೆಯ ಕ್ಷಮಾಪಣೆ ಬೇಡುವುದರಲ್ಲಿ ಮೊದಲನೆಯವನು ಎಂದು ಈ ಸಭೆಗೆ ವಿನಂತಿ ಮಾಡಿಕೊಳ್ಳುತ್ತೇನೆ. ಶ್ರೀಮಾನ್ ಮುಕ್ಕಣ್ಣಪ್ಪನವರು ಮಾತನಾಡುತ್ತಾ ಒಂದು ಮಾತು ಹೇಳಿದರು. ನಾನು ಈ ಸಭೆಯ ಗೌರವ ಘನತೆ ಕಾಪಾಡುವ ವಿಚಾರವನ್ನು ಅವರಿಂದ ಕಲಿಯಬೇಕಾಗಿಲ್ಲ, ನಾನು ಒಂದು ಮಾತು ಹೇಳುತ್ತೇನೆ. ಶ್ರೀಮಾನ್ ಮುಕ್ಕಣ್ಣಪ್ಪನವರಿಂದ ನಾವು ಪಾಠ ಕಲಿತರೆ ಈ ಸಭೆಯ ಆವಶ್ಯಕತೆಯೇ ಇರುವುದಿಲ್ಲ.

**Sri C.J. Muckannappa:-**

Sir, I want to know whether this is the point of order he has raised? He is alleging all sorts of things against the opposition.

**Sri J.B. Mallaradhya:-**

Sir, if this is the way he is provoking every member on this side, it would not be right. He must state his point of order, if any.

**Sri M. Ramappa:-**

Mr. Speaker, I submit that there should be a point of order on some rules of procedure of this house and not make a categorical statement like this alleging us.

**Mr. Deputy Speaker:-**

Sri Puttaswamy, will please explain his point of order.

**Sri C.M. Arumugham:-**

Sir, You are allowing him to make all sorts of allegations against us. He has not raised any point of order at all, but he is indulging in alleging against the opposition members.

ಡಾ. ಬಿ.ಕೆ. ನಾಗೂರ್:-

ಪುಟ್ಟಸ್ವಾಮಿಯವರ ತರಹ ಮಾತನಾಡಲಿಕ್ಕೆ ನಮಗೂ ಬರುತ್ತದೆ.

**Mr. Deputy Speaker:-**

Sri Arumugham, will please listen to what he says first.

**Sri H.M. Channabasappa(Minister for Home):-**

Sir, it is not in fitness of things......

**Sri J.B. Mallaradhya:-**

Sir, I stood up earlier and I am on my legs, but you have allowed the Hon'ble Minister to speak.

**Sri K. Puttaswamy:-**

Sir, if Mr. Mallaradhya wanted me to yield I would have definitely yielded. Now, I have yielded to Mr. Channabasappa.

**Sri H.M. Channabasappa:-**

Sir, I wish to submit, what ever may be the provocation. It is better to wait till the Hon'ble member completes his remarks. If there is really any objectionable statement it is open to any Member to seek protection through you.

**Sri C.M. Arumugham:-**

Sir, Mr. B.L. Narayanaswamy raised a point of order. When the Speaker stood up, he sat down, but in the meanwhile you allowed Mr. Puttaswamy to raise a point of order.

**Mr. Deputy Speaker:-**

Sri Arumugham, has begun to finds fault with every thing; it is not right; this will not do; he finds fault with anything and everything.

**Sri C.M. Arumugham:-**

When the procedure is not followed properly, I have to raise objection.

**Mr. Deputy Speaker:-**

How to decide when every member stands up and begins to speak? He should leave it to me.

**Sri B.L. Narayanaswamy:-**

Sir, I had raised a point of order and that is not decided.

ಉಪಾಧ್ಯಕ್ಷರು:-

ಎಲ್ಲರೂ ಹೀಗೆ ಒಂದೇ ಸಾರಿ ನಿಂತುಕೊಂಡರೆ, ತೀರ್ಮಾನ ಮಾಡುವುದು ಹೇಗೆ? ಪುಟ್ಟಸ್ವಾಮಿಯವರು ಅವರ ವಿಧಿ ಲೋಪವನ್ನು ಸ್ವೀಕರಿಸಿದ ಮೇಲೆ ತಾವು ಮಾತನಾಡಿ ಸ್ವಲ್ಪ ಹೇಳುವುದನ್ನು ಕೇಳಿರಿ.

ಶ್ರೀ ಕೆ. ಪುಟ್ಟಸ್ವಾಮಿ:-

ನಾನು ಎತ್ತಿದಂಥ ಕ್ರಿಯಾಲೋಪ ಬಹಳ ಸಾಮಾನ್ಯವಾದುದು, ತಾವು ತಮ್ಮ ವಿವೇಚನೆಯನ್ನು ಉಪಯೋಗಿಸಿ ಒಬ್ಬ ಸದಸ್ಯರು ಭಾಷಣ ಮಾಡಿ ಆದಮೇಲೆ ಇನ್ನೊಬ್ಬ ಸದಸ್ಯರನ್ನು ಕರೆಯುವುದಕ್ಕೆ ಪ್ರಯತ್ನಪಟ್ಟರೆ ಅದು ತಮಗಿರುವ ಅಧಿಕಾರ. ತಮ್ಮ ಈ ಅಧಿಕಾರವನ್ನು ಉಪಯೋಗಿಸುವುದಕ್ಕೆ ಈ ಸಭೆಯಲ್ಲಿ ಇಷ್ಟೊಂದು ಅಡ್ಡಿ ಆತಂಕಗಳನ್ನು ಇಟ್ಟಿದ್ದಾರೆ ಎನ್ನುವುದಕ್ಕೆ ನಾನು ವಿವರಣೆ ಮಾಡಿ ಹೇಳಬೇಕಾಗಿಲ್ಲ. ಇಂಥ ಅಡ್ಡಿ ಆತಂಕಗಳನ್ನು ಉಂಟುಮಾಡುವುದು ಈ ಸಭೆಯ ಘನತೆಗೆ ತಕ್ಕದ್ದಲ್ಲ. ಅದಕ್ಕೆ ತಾವು ಅವಕಾಶ ಕೊಡಬಾರದು. ನಮ್ಮ ಈ ಸಭೆಯ ಘನತೆ ಗೌರವಗಳಿಗೆ ಕುಂದುಂಟಾಗುತ್ತಿದೆ. ಆದ್ದರಿಂದ ಈ ತರಹ ಪ್ರತಿಭಟನೆ ಮಾಡತಕ್ಕವರಿಗೆ ತಕ್ಕ ಶಾಸ್ತಿ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುವುದೇ ನಾನು ಎತ್ತಿದ ಕ್ರಿಯಾಲೋಪ.

ಉಪಾಧ್ಯಕ್ಷರು:-

ಶ್ರೀ ಬೊಮ್ಮೆಗೌಡರನ್ನು ಕರೆದದ್ದು ನಿಜ. ವೆಂಕಟರೆಡ್ಡಿಯವರು ಅಡ್ಡಿಮಾಡಿದರು ಹಾಗೆ ಮಾಡಬೇಡಿ ಎಂದು ಅವರಿಗೆ ಪರ್‌ಸಿಸ್ಟ್ ಮಾಡಿ ಹೇಳಿದ ಒಬ್ಬ ಸದಸ್ಯರನ್ನು ಕರೆದಾಗ ಇನ್ನೊಬ್ಬ ಸದಸ್ಯರು ಮಾತನಾಡಬೇಕೆಂದು ನಿಂತುಕೊಂಡರು. ಅವರಿಗೆ ಕುಳಿತುಕೊಳ್ಳಿ ಎಂದು ಹೇಳಿದೆ. ಅವರು ಮರ್ಯಾದೆ ಬೇಕೆಂದು ಹಠಮಾಡಿದರು. ಸದಸ್ಯರು ಸಭೆಯ ತೀರ್ಮಾನಕ್ಕನುಸರಿಸಿ ನಡೆಯಬೇಕು. ಆದಷ್ಟು ಮಟ್ಟಿಗೆ ಸದಸ್ಯರುಗಳು ಯಾವ ಸದಸ್ಯರನ್ನು ಕರೆದಿರುತ್ತದೆಯೋ ಅವರಿಗೆ ಅವಕಾಶ ಕೊಡಬೇಕು, ಅದನ್ನು ಬಿಟ್ಟು ಕೆಲವು ಸದಸ್ಯರುಗಳು ಕಾರ್ಯವಿಧಾನದ ನಿಯಮಾವಳಿಗೆ ವಿರೋಧವಾಗಿ ಸಭೆಯ ಘನತೆ ಗೌರವಗಳಿಗೆ ಚ್ಯುತಿ ಉಂಟಾಗುವ ರೀತಿಯಲ್ಲಿ ಕಾರ್ಯ ಕಲಾಪಗಳಿಗೆ ಅಡ್ಡಿ ಮಾಡಿದರು. ಇದು ಲೆಜಿಸ್ಲೇಚರ್ ಮೆಂಬರುಗಳಿಗೆ ನ್ಯಾಯವಾದುದಲ್ಲ. ಪ್ರಜಾಪ್ರಭುತ್ವ ಸರ್ಕಾರದಲ್ಲಿ ಈ ಸಭೆ ಒಂದು ನಿಯಮ ನಿಬಂಧನೆಗಳನ್ನು ರಚಿಸುವಾಗ ಅದಕ್ಕೆ ತಕ್ಕಂತೆ ಸಭೆಯ ಘನತೆ ಗೌರವಗಳನ್ನು ಕಾಪಾಡತಕ್ಕಂಥಾದ್ದು ಪ್ರತಿಯೊಬ್ಬರ ಕರ್ತವ್ಯ. ತಾವೆಲ್ಲರೂ ದೊಡ್ಡ ದೊಡ್ಡ ಕ್ಷೇತ್ರದಿಂದ ಬಂದಿದ್ದೀರಿ. ತಮ್ಮ ಕ್ಷೇತ್ರದ ಮತದಾರರು ತಾವು ದೊಡ್ಡ ಕಾರ್ಯ ಸಾಧನೆಯನ್ನು ಮಾಡುತ್ತೀರಿ ಎಂದು ಇಲ್ಲಿಗೆ ಕಳುಹಿಸಿದ್ದಾರೆ. ಆದುದರಿಂದ ಈ ಸಭೆಯ ಘನತೆ ಗೌರವಗಳನ್ನು ಕಾಪಾಡಿಕೊಂಡು ಬರತಕ್ಕಂಥಾದ್ದು ಅವರ ಕರ್ತವ್ಯ. ಅದನ್ನು ಬಿಟ್ಟು ಈ ತರಹಮಾಡುವುದು ಚೆನ್ನಾಗಿಲ್ಲ. ಶ್ರೀ ಬೊಮ್ಮೆಗೌಡರು ಈಗ ಮಾತನಾಡುತ್ತಾರೆ.

**Sri J.B. Mallaradhya:-**

I rise to a point of order.

**ಉಪಾಧ್ಯಕ್ಷರು:**

ನಾನು ರೂಲಿಂಗ್ ಕೊಟ್ಟ ಮೇಲೆ ಸದಸ್ಯರುಗಳು ಈ ರೀತಿ ವರ್ತಿಸಿದರೆ ಖಂಡಿತವಾಗಿಯೂ ಚೆನ್ನಾಗಿರುವುದಿಲ್ಲ. ಅಧ್ಯಕ್ಷರು ಕೊಟ್ಟ ಮೇಲೆ ಕ್ರಿಯಾಲೋಪವನ್ನೆತ್ತುವುದು ಚೆನ್ನಾಗಿರುವುದಿಲ್ಲ.

**Sri J.B. Mallaradhya:-**

When a member raised point of order......

**Mr. Deputy Speaker:-**

No. No.

**Sri J.B. Mallaradhya:-**

Sir, I obey to the decision of the Chair, But, without knowing what my point of order is, it would not be fair to say, there is no point of order... You please here me fully.

**Mr. Deputy Speaker:-**

Sri Mallaradhya is no doubt an Hon'ble member of this House.

**Sri J.B. Mallaradhya:-**

You have not heard me fully.

**ಉಪಾಧ್ಯಕ್ಷರು:-**

ನಾನು ಹೇಳಿದುದನ್ನು ಕೇಳಿ. ನಾನು ನಿಂತುಕೊಂಡಿರುವಾಗ ಈ ರೀತಿ ಅವರು ನಿಂತುಕೊಂಡು ಬಿಟ್ಟರೆ ಹೇಗೆ?....... ಮಲ್ಲಾರಾಧ್ಯರು ಹೀಗೆ ನಿಂತುಕೊಂಡೇ ಇರುತ್ತಾರೆಂದರೆ ಬಹಳ ವ್ಯಸನವಾಗುತ್ತದೆ......... ಮತ್ತೆ ನಾರಾಯಣ ಸ್ವಾಮಿಯವರು ನಿಂತುಕೊಳ್ಳುತ್ತಿದ್ದಾರೆ.

ತಾವುಗಳೆಲ್ಲ ಈ ತರಹ ಮಾಡಬಾರದು. ನಾನು ಈಗಾಗಲೇ ಈ ವಿಚಾರದಲ್ಲಿ ತೀರ್ಮಾನ ಕೊಟ್ಟಿದ್ದೇನೆ ಅಂದಮೇಲೆ ಈಗಾಗಲೇ ಕ್ರಿಯಾಲೋಪದ ವಿಚಾರ ನಿರ್ಣಯವಾದಂತಾಗಿದೆ.

ಶ್ರೀ ಜೆ.ಬಿ. ಮಲ್ಲಾರಾಧ್ಯ:

ಅಧ್ಯಕ್ಷರೇ ತಮ್ಮ ತೀರ್ಮಾನಕ್ಕೆ ನಾವೆಲ್ಲರೂ ಶಿರಸಾವಹಿಸಿ ತಲೆಬಾಗುತ್ತೇವೆ. ತಮ್ಮ ತೀರ್ಮಾನವನ್ನು ನಾವೆಂದೂ ವಿರೋಧಿಸತಕ್ಕವರಲ್ಲ. We respect the chair. Please do not mistake us. We have certainly highest respect to the Chair, whatever be the decision you give. My friend Sri Narayanaswamy raised a point of order earlier than Sri Puttaswamy. Before you ask Bomme Gowda to speak, give Sri Narayanaswamy a hearing.

**Mr. Deputy Speaker:**

The matter was decided.

**Sri J.B. Mallaradhya:**

That is my point. You have not heard Sri Narayanaswamy explain his point. You give him a chance and then give a ruling.

ಶ್ರೀ ಬಿ.ಎಲ್. ನಾರಾಯಣಸ್ವಾಮಿ:

ನನ್ನ ಪಾಯಿಂಟ್ ಆಫ್ ಆರ್ಡರ್ ಇಷ್ಟೇ.

**Mr. Deputy Speaker:**

The matter has already been decided....... (several members rose).

ಶ್ರೀ ಬಿ.ಎಲ್. ನಾರಾಯಣಸ್ವಾಮಿ:

ನನ್ನ ಪಾಯಿಂಟ್ ಆಫ್ ಆರ್ಡರ್ ಬಗ್ಗೆ ತಾವು ನಾನು ಏನು ಹೇಳುತ್ತೇನೆಂಬುದನ್ನೇ ಕೇಳದೆ........

**Mr. Deputy Speaker:**

I will admit provided Sri Narayanaswamy does not connect it with the other point of order already disposed of.

## 4. ಸಹಕಾರ ಖಾತೆಗೆ ಸಂಬಂಧಿಸಿದ ಪ್ರಶ್ನೋತ್ತರಗಳು-1966.*

*Q-96. Sri V. SRINIVASA SHETTY (Graduates, Constituency) on behalf of Sri G.V. ANJANAPPA (Graduates, Constituency).

Will the Minister for Co-operation and Housing be pleased to state:-

a) The total money invested by Government in Co-operative Societies in the State;

b) the total number of cases of defalcations, Embezzlements, misappropriation detected so far;

c) the total amount involved in those cases;

d) the steps taken by Government to recover the money?

**A.-Sri K. PUTTASWAMY (Minister for Co-operation and Housing).**

a) Rs. 9,22,87,277-00.

b) 393.

c) Rs. 28,39,670-74.

d) Civil and Criminal actions are taken.

**Sri V. SRINIVASA SHETTY:-**

You have stated that total number of cases of defalcations is 393 and the total amount involved in these cases is Rs. 28,39,670. I want to know out of 393 cases, in how many cases, civil action has been instituted and in how many cases criminal action has been instituted?.

**Sri K. PUTTASWAMY:-**

In all these cases criminal law has been set in motion. In most of the cases civil action has also been taken.

---

*(ವಿಧಾನ ಪರಿಷತ್ತಿನ ಕಲಾಪ ದಿನಾಂಕ: 22-11-1966)

**Sri V. SRINIVASA SHETTY:-**

Are there any convictions in the criminal cases so far disposed of?

**Sri K. PUTTASWAMY:-**

So far 15 cases have ended in conviction and in 33 cases, the accused has been acquitted and there are six cases in which 'B' report has been submitted and in 11 cases in which 'C' report has been submitted, in three cases, they have been discharged and in two cases they have been released by the Court on probation. In all 70 cases have been disposed of.

**ಶ್ರೀ ವಿ. ವೆಂಕಟಪ್ಪ:-**

ಕೇಸಸ್ ಹಾಕದೇ ಇರುವುದು ಎಷ್ಟೋ ಇವೆ, ಅಲ್ಲವೇ ಸ್ವಾಮಿ?

**Sri K. PUTTASWAMY:-**

There may be a few cases in which criminal action may not have been set in motion because even after a complaint is received, we will have to hold enquiry and satisfy ourselves whether there is any prima facie case before we put the matter in the hands of the Police.

**Sri M.P.L. SASTRY:-**

May I know how many are urban societies and how many are rural societies and what is the number of people involved in these 393 cases?

**Sri K. PUTTASWAMY:-**

I think that definitely deserves a separate question.

**ಶ್ರೀ ಕೆ.ಎಸ್. ಚೆನ್ನಪ್ಪ:-**

ಈ ಕೇಸುಗಳಲ್ಲಿ ಅಷ್ಟು ಸರ್ಕಾರದ ದುಡ್ಡು ಅನ್ಯಾಯ ಆಗಬೇಕಾದರೆ ಇಲಾಖೆಯವರ ಸರಿಯಾದ ನಿಗಾವಣೆ ಅವುಗಳ ಮೇಲೆ ಇಲ್ಲವೇ, ಈ ರೀತಿ ಅನ್ಯಾಯವಾಗಿದೆ ಎಂದು ಒಪ್ಪಿಕೊಳ್ಳುತ್ತೀರಾ?

ಶ್ರೀ ಕೆ. ಪುಟ್ಟಸ್ವಾಮಿ:-

ಈ ಇಲಾಖೆ ಸಂಪೂರ್ಣ ನಿಗಾವಣೆ ಇಟ್ಟಿರುವುದರಿಂದಲೇ ಅಷ್ಟು ಕಡಿಮೆಯಾಗಿರುವುದು.

ಶ್ರೀ ಎಸ್. ಶ್ರೀನಿವಾಸಶೆಟ್ಟಿ:-

28,39,670,74 ರೂಪಾಯಿಗಳಲ್ಲಿ ಸರ್ಕಾರ ಎಷ್ಟು ವಸೂಲಿ ಮಾಡಲಿಕ್ಕೆ ಸಾಧ್ಯವಾಯಿತು?

**Sri K. PUTTASWAMY:-**

Out of this amount, Rs.5,60,507 and 2 paise has been recovered and yet an amount of Rs. 22,79,163 and 72 paise is remaining out of it.

ಶ್ರೀ ಎಸ್. ಶ್ರೀನಿವಾಸಶೆಟ್ಟಿ:-

393 ಕೇಸುಗಳಲ್ಲಿ ಯಾವ ಜಿಲ್ಲೆಯಲ್ಲಿ ಹೆಚ್ಚು ಹಣ ದುರುಪಯೋಗವಾಗಿದೆ, ಸ್ವಾಮಿ?

ಶ್ರೀ ಕೆ. ಪುಟ್ಟಸ್ವಾಮಿ:-

ಯಾವುದೋ ಒಂದು ಜಿಲ್ಲೆ ಮನಾಪಲಿ ಇಲ್ಲ. ಎಲ್ಲಾ ಜಿಲ್ಲೆಯಲ್ಲೂ ಅಷ್ಟಷ್ಟು ಆಗಿದೆ. In Belgaum, according to figures with me, subject to correction, Rs. 3,14,673-11 has been involved and that seems to be the highest.

ಶ್ರೀ ಜೆ.ಬಿ. ಮಲ್ಲಾರಾಧ್ಯ:-

ಸೊಸೈಟಿಗಳಿಗೆ ಸಂಬಂಧಪಟ್ಟ 393 ಚುನಾವಣೆ ಕೇಸುಗಳು ಏನು ಇವೆ, ಅವುಗಳಲ್ಲಿ ಸರ್ಕಾರದವರು ಷೇರು ಬಂಡವಾಳ ಒದಗಿಸಿರುವಂಥಾದ್ದು ಎಷ್ಟು?

**Sri K. PUTTASWAMY:-**

I require notice.

ಶ್ರೀ ಎಂ. ಗೋವರ್ಧನರಾವ್:-

ಸಾಲ ಮುಳುಗಿ ಹೋಗದಂತೆ ಏನಾದರೂ ಆಧಾರ ಇದೆಯೇ?

**Sri K. PUTTASWAMY:-**

In most of these cases, the amount can be recovered,

because we have taken civil action and got the properties of the delinquents attached.

ಶ್ರೀ ಜೆ.ಬಿ. ಮಲ್ಲಾರಾಧ್ಯ:-

ಈ 393 ಕೇಸುಗಳಿಗೆ ಸಂಬಂಧಪಟ್ಟ ಸೊಸೈಟಿಗಳಲ್ಲಿ ಸರ್ಕಾರದ ಪರವಾಗಿ ಕೋ-ಆಪರೇಟೀವ್ ಇನ್‌ಸ್ಪೆಕ್ಟರ್ಸ್ ಮತ್ತು ಇತರ ಅಧಿಕಾರಿಗಳು ಎಷ್ಟು ಜನ ಇದ್ದಾರೆ?

**Sri K. PUTTASWAMY:-**

Again, the Hon'ble member may be aware of Government having their nominee in only certain types of societies and for only such societies, if they ask we give our personnel from the Department to serve as secretaries.

ಶ್ರೀ ಜೆ.ಬಿ. ಮಲ್ಲಾರಾಧ್ಯ:-

ನಾನು ಕೇಳುವುದು ಇಷ್ಟು: ಇಂತಹ ಸಂಸ್ಥೆಗಳಲ್ಲಿ ಸರ್ಕಾರದ ಅಧಿಕಾರಿಗಳು ಇದ್ದು ಹಣದ ದುರುಪಯೋಗವಾಗಿದೆ. ಅವರು ಕಾರಣರಾಗಿ ಇದ್ದರೆ ಎಷ್ಟು ಮಟ್ಟಿಗೆ ಅವರು ಕಾರಣರು ಎಂದು ತಿಳಿಸುತ್ತೀರಾ?

2.45 ಪಿ.ಎಂ.

ಶ್ರೀ ಕೆ. ಪುಟ್ಟಸ್ವಾಮಿ:-

393 ಕೇಸುಗಳಲ್ಲಿ ಎಷ್ಟರಲ್ಲಿ ಸರ್ಕಾರಿ ಸಿಬ್ಬಂದಿ ಇತ್ತು ಎಂದು ಹೇಳಬೇಕಾದರೆ ನೋಟೀಸ್ ಬೇಕು.

ಶ್ರೀ ಎಂ. ಗೋವರ್ಧನರಾವ್:-

ಡಿಟೆಕ್ಟೆಡ್ ಕೇಸಸ್ 393. ಅನ್‌ಡಿಟೆಕ್ಟಡ್ ಕೇಸಸ್ ಬಹಳ ಇರಬಹುದು ಅಲ್ಲವೆ?

ಶ್ರೀ ಕೆ. ಪುಟ್ಟಸ್ವಾಮಿ:-

ಅದು ಅವರವರ ಮನೋವೃತ್ತಿಯ ಮೇಲೆ ಹೋಗುತ್ತದೆ.

ಶ್ರೀ ಕೆ.ಟಿ. ಶಾಮಯ್ಯಗೌಡ:-

28,39,670-74 ರೂಪಾಯಿಗಳು ಲೆಕ್ಕ ಸಿಕ್ಕದೆ : ಇನ್ನೂ ಬಹಳ ಸಿಕ್ಕಬೇಕು. ಇದರಲ್ಲಿ ಡಿಪಾರ್ಟ್‌ಮೆಂಟ್ ಅಧಿಕಾರಿಗಳ ಉದಾಸೀನತೆ ಮತ್ತು ಸಹಕಾರ ಇಲ್ಲದೆ ಆಗಿಲ್ಲವೆಂದು ತಮ್ಮ ಗಮನಕ್ಕೆ ಬಂದಿದೆಯೇ?

ಶ್ರೀ ಕೆ. ಪುಟ್ಟಸ್ವಾಮಿ:-

ಅದು ಊಹೆ.

ಶ್ರೀ ಕೆ.ಟಿ. ಶಾಮಯ್ಯಗೌಡ:-

ಇಂತಹ ಅಧಿಕಾರಿಗಳಲ್ಲಿ ಎಷ್ಟು ಅಧಿಕಾರಿಗಳಿಗೆ ಶಿಕ್ಷೆ ಆಗಿದೆ? ಯಾರಿಗಾದರೂ ಶಿಕ್ಷೆ ಮಾಡಿದ್ದೀರಾ?

ಶ್ರೀ ಕೆ. ಪುಟ್ಟಸ್ವಾಮಿ:-

15 ಕೇಸುಗಳಲ್ಲಿ ಕನ್‌ವಿಕ್ಷನ್ ಆಗಿದೆ.

ಶ್ರೀ ಕೆ.ಟಿ. ಶಾಮಯ್ಯಗೌಡ:-

ಇವರ ಪೈಕಿ ಸರ್ಕಾರಿ ನೌಕರರು ಇದ್ದಾರೆಯೇ?

ಶ್ರೀ ಕೆ. ಪುಟ್ಟಸ್ವಾಮಿ:-

ಅದು ನನಗೆ ಗೊತ್ತಿಲ್ಲ, ಈಗ ಹೇಳುವುದಕ್ಕಾಗುವುದಿಲ್ಲ.

ಶ್ರೀ ಕೆ. ಲಕ್ಕಪ್ಪ:-

ಈ ರೀತಿ ದೊಡ್ಡ ಪ್ರಮಾಣದ ಹಣದ ದುರುಪಯೋಗ ಆಗದ ರೀತಿಯಲ್ಲಿ ತಡೆಗಟ್ಟುವುದಕ್ಕೆ ಏನಾದರೂ ಕ್ರಮ ಇತ್ತೀಚೆಗೆ ತೆಗೆದುಕೊಂಡಿದ್ದೀರಾ?

ಶ್ರೀ ಕೆ. ಪುಟ್ಟಸ್ವಾಮಿ:-

ದೇಶದಲ್ಲಿ ಸಹಕಾರ ಸಂಘಗಳ ಸಂಖ್ಯೆ ಜಾಸ್ತಿಯಾಗಿದೆ. ವ್ಯವಹಾರ ಕೂಡ ಹೆಚ್ಚಾಗಿದೆ. ಸರ್ಕಾರ 9 ಕೋಟಿ 22 ಲಕ್ಷ ಹಣವನ್ನು ತನ್ನ ಪಾಲು ಬಂಡವಾಳ ಕೊಟ್ಟಿದೆ. ಈ ಕಾರಣದಿಂದ ಇತ್ತೀಚೆಗೆ ನಮ್ಮ ಇಲಾಖೆಗೆ ಸಿಬ್ಬಂದಿ ವರ್ಗ ಹೆಚ್ಚಿಸಿದೆ. ಸಹಕಾರ ಸಂಘಗಳ ವ್ಯವಹಾರಗಳ ಮೇಲೆ ಹೆಚ್ಚು ನಿಗಾವಣೆ ಇಟ್ಟುಕೊಳ್ಳುವುದಕ್ಕೆ ಅದರಿಂದ ಸಾಧ್ಯವಾಗುತ್ತದೆ ಎಂದು ನಂಬಿಕೊಂಡಿದ್ದೇನೆ.

ಶ್ರೀ ಆರ್.ಎಸ್. ಮಹಾಂತಶೆಟ್ಟಿ:-

ಬೆಳಗಾಮ್ ಜಿಲ್ಲೆಯಲ್ಲಿ 3 ಲಕ್ಷಕ್ಕಿಂತ ಹೆಚ್ಚು ಮಿಸ್‌ಅಪ್ರೋಪ್ರಿಯೇಷನ್ ಆಗಿದೆ, ಎಂದು ಕೇಳಿದ್ದೇನೆ. ಅದು ಯಾವ ಯಾವ ಸೊಸೈಟಿಯಲ್ಲಿ ಆಗಿದೆ ದಯವಿಟ್ಟು ಹೇಳುತ್ತೀರಾ? ಅಥವಾ ಬ್ಯಾಂಕಿನಲ್ಲಿ ಆಗಿದೆಯೇ?

ಶ್ರೀ ಕೆ. ಪುಟ್ಟಸ್ವಾಮಿ:-

ಅದು ಇಲ್ಲಿ ಹುಡುಕಿ ಹೇಳಬೇಕು. ಅವನ್ನು ಈಗಲೇ ಹೇಳಬೇಕೆಂದರೆ ಈ ಸಭೆಯ ಕಾಲ ತೆಗೆದುಕೊಂಡ ಹಾಗಾಗುತ್ತದೆ. ಮಾನ್ಯ ಸದಸ್ಯರು ಅಪೇಕ್ಷಿಪಟ್ಟರೆ ನಾನು ಅವರಿಗೆ ತಿಳಿಸುತ್ತೇನೆ.

**Sri V. SRINIVASA SHETTY:-**

In all these 393 cases has any action been taken against officials concerned with these societies?

**Sri K. PUTTASWAMY:-**

In some of these cases, officials are also involved and while setting criminal law or civil law, we do not take into consideration whether he is an official or non-official. The law is no respector of persons. We do set any law into motion against officials and non-officials whoever have committed mistake.

**Sri V. SRINIVASA SHETTY:-**

May I take that in these 393 cases there are a number of officials who are accused?

**Sri K. PUTTASWAMY:-**

There are a few officials.

ಶ್ರೀ ಕೆ.ಎಸ್. ಚೆನ್ನಪ್ಪ:-

4-6 ವರ್ಷಗಳ ಕಾಲ ಜನರಲ್ ಬಾಡಿ ಮೀಟಿಂಗ್ ಆಗದೆ ಲೆಕ್ಕ ಪತ್ರ ಪರಿಶೀಲಿಸದೆ ಇರುವ ಸೊಸೈಟಿಗಳು ಇದರಲ್ಲಿ ಎಷ್ಟು?

ಶ್ರೀ ಕೆ. ಪುಟ್ಟಸ್ವಾಮಿ:-

ಕೆಲವು ಈ ರೀತಿ ಹಣ ದುರುಪಯೋಗ ಆಗತಕ್ಕಂಥ ಸೊಸೈಟಿಗಳಲ್ಲಿ ಕಾನೂನು ಪ್ರಕಾರ ನಡೆಯತಕ್ಕ ನಡೆವಳಿಕೆಗಳನ್ನು ಅನೇಕ ವೇಳೆ ನಡೆಯದೆ ಹೀಗೆ ಆಗುವುದು ಉಂಟು. ಆದರೆ ಮಾನ್ಯ ಸದಸ್ಯರು ಕೇಳಿರತಕ್ಕ ಅಂಕಿಅಂಶ ಕೊಡಬೇಕು ಎಂದರೆ ಹೊಸ ಪ್ರಶ್ನೆ ಕೇಳಿದರೆ ಕೊಡಬಹುದು.

Sri JIVARAJ HIRACHAND SHAH:-

What is the percentage of principal that has been invested or is involved in these societies?

Sri K. PUTTASWAMY:-

If a rough calculation is relied upon, it is about 2 percent.

ಶ್ರೀ ಜೆ.ಬಿ. ಮಲ್ಲಾರಾಧ್ಯ:-

ಸಹಕಾರ ಸಂಘಗಳಲ್ಲಿ ಹಣ ದುರುಪಯೋಗವಾಗಿದೆ ಎಂದು ಕೋರ್ಟಿಗೆ ಕೇಸು ದಾಖಲು ಮಾಡಿದ ಮೇಲೆ ಎಷ್ಟು ಹಣ ಸರಕಾರಕ್ಕೆ ವಾಪಸ್ಸು ಬಂದಿದೆ ಎನ್ನುವುದರ ಬಗ್ಗೆ ಸರಕಾರ ವಿವರಗಳನ್ನು ಕೊಡುತ್ತದೆಯೇ?

ಶ್ರೀ ಕೆ. ಪುಟ್ಟಸ್ವಾಮಿ:-

ನನಗೆ ತಿಳಿದಿರುವ ಮಟ್ಟಿಗೆ ಈ ವರ್ಷದಲ್ಲಿ ಯಾವ ಕೇಸಿನಿಂದಲೂ ಹಣ ವಾಪಸ್ಸು ತೆಗೆದುಕೊಂಡಿಲ್ಲ.

ಶ್ರೀ ಜೆ.ಬಿ. ಮಲ್ಲಾರಾಧ್ಯ:-

ಈ ಪ್ರಶ್ನೆಗೆ ಸಂಬಂಧಪಟ್ಟಂತೆ ಇಂತಹ ನಿದರ್ಶನಗಳು ತಮ್ಮ ಗಮನಕ್ಕೆ ಬಂದಿವೆಯೇ? ಕೋರ್ಟುಗಳಲ್ಲಿ ಇಂತಹ ವ್ಯವಹಾರಗಳು ಆರಂಭವಾದ ಮೇಲೆ ಇಲ್ಲಿನ ಅಧಿಕಾರಿಗಳು ಎಷ್ಟು ಹಣವನ್ನು ವಾಪಸು ಮಾಡಿದ್ದಾರೆ ಎನ್ನುವುದನ್ನು ನಾನು ಇಲ್ಲಿ ಕೇಳುತ್ತಿದ್ದೇನೆ.

ಶ್ರೀ ಕೆ. ಪುಟ್ಟಸ್ವಾಮಿ:-

ಈ ಅವಧಿಯಲ್ಲಿ ಬಹುಶಃ ಒಂದೆರಡು ಕೇಸುಗಳು ಇರಬಹುದು. ಆದರೆ ನನಗೆ ನೆನಪು ಇರುವ ಮಟ್ಟಿಗೆ ಈ ಬಗ್ಗೆ ಎರಡು ಮೂರು ವರ್ಷಗಳಿಂದ ಯಾವ ಕೇಸುಗಳಿಂದಲೂ ಹಣ ವಾಪಸ್ಸು ತೆಗೆದುಕೊಂಡಿಲ್ಲ.

ಶ್ರೀಮತಿ ಎಂ.ಆರ್. ಲಕ್ಷಮ್ಮ:-

ಉತ್ತರದಲ್ಲಿ ತಾವು ಹೇಳಿರುವಂತೆ ಅಕ್ರಮ ವ್ಯವಹಾರಗಳು ನಡೆದಿರುವುದು 393 ಕೇಸುಗಳಲ್ಲಿ ಎಂದು ಇದೆ. ಈ ದೇಶದಲ್ಲಿರುವ ಒಟ್ಟು ಸಹಕಾರ ಸಂಘಗಳ ಸಂಖ್ಯೆ ಪ್ರಮಾಣದಲ್ಲಿ ತೆಗೆದುಕೊಂಡರೆ ಇದರ ಶೇಕಡಾವಾರು ಎಷ್ಟು ಬರಬಹುದು?

ಶ್ರೀ ಕೆ. ಪುಟ್ಟಸ್ವಾಮಿ:-

ನಮ್ಮ ರಾಜ್ಯದಲ್ಲಿ ಸುಮಾರು 18 ಸಾವಿರದಿಂದ 19 ಸಾವಿರ ಸಹಕಾರ ಸಂಘಗಳ

ಸಂಖ್ಯೆ ಇದೆ. ಅದರ ಶೇಕಡವಾರು ಎಷ್ಟು ಎಂದು ನಾನು ಹೇಳುವುದಕ್ಕಾಗುವುದಿಲ್ಲ. ಮಾನ್ಯ ಸದಸ್ಯರೇ ಇದರಲ್ಲಿರುವ ಲೆಕ್ಕದಂತೆ ಗುಣಾಕಾರ ಅಥವಾ ಭಾಗಾಕಾರ ಮಾಡಿಕೊಳ್ಳಬಹುದು.

ಶ್ರೀ ಕೆ.ಟಿ. ಶಾಮಯ್ಯಗೌಡ:-

ಅಕ್ರಮ ವ್ಯವಹಾರಗಳು ಪತ್ತೆಯಾಗುವುದು ಆಡಿಟರ್ ರಿಪೋರ್ಟ್ ಬಂದಮೇಲೆ. ಇದರ ಮೇಲೆ ಕ್ರಮ ತೆಗೆದುಕೊಳ್ಳಲು ರಿಜಿಸ್ಟ್ರಾರ್‌ರವರ ಮಂಜೂರಾತಿಗೆ ಹೋಗಿ ಬರಬೇಕಾದರೆ ಸುಮಾರು 2-3 ವರ್ಷಗಳಾಗುತ್ತವೆ. ಇಷ್ಟರೊಳಗೆ ಇಲ್ಲಿ ದುಡ್ಡು ಛಪಾವಣೆಯಾಗಿರುವುದರ ಮೇಲೆ ಯಾವ ಕ್ರಮ ತೆಗೆದುಕೊಳ್ಳುವುದಕ್ಕೂ ಆಗುತ್ತಿಲ್ಲ. ಇದರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು ಸರಿಯಲ್ಲವೇ? ಅಥವಾ ಇದಕ್ಕನುಗುಣವಾದ ಒಂದು ಕಾನೂನು ತರುವುದು ಅಗತ್ಯವಲ್ಲವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಹೊಸದಾಗಿ ಇದಕ್ಕೆ ಕಾನೂನು ಮಾಡಬೇಕಾಗಿಲ್ಲ. ನಮ್ಮಲ್ಲೇ ಈಗ ಸಾಕಷ್ಟು ಸಿಬ್ಬಂದಿ ಇರುವುದರಿಂದ ಅವರಿಗೇ ಇನ್ನಷ್ಟು ಜವಾಬ್ದಾರಿಗಳನ್ನು ವಹಿಸಿದರೆ ಇನ್ನೂ ಚೆನ್ನಾಗಿ ಹತೋಟಿಗೆ ತರಬಹುದು. ಇದಕ್ಕಾಗಿ ರಿಜಿಸ್ಟ್ರಾರ್‌ರವರ ಜೊತೆಗೆ ಪ್ರತಿಯೊಂದು ಡಿವಿಜನ್ನಿನಲ್ಲಿಯೂ ಜಾಯಿಂಟ್ ರಿಜಿಸ್ಟ್ರಾರ್‌ಗಳಿದ್ದಾರೆ ಹಾಗೂ ಡೆಪ್ಯೂಟಿ ರಿಜಿಸ್ಟ್ರಾರ್‌ಗಳಿದ್ದಾರೆ ಇವರುಗಳಿಗೆ ಇನ್ನೂ ಹೆಚ್ಚು ಅಧಿಕಾರಗಳನ್ನು ಕೊಡಬೇಕೆಂದು ಯೋಚನೆ ಮಾಡುತ್ತಿದ್ದೇವೆ.

ಶ್ರೀ ವಿ. ವೆಂಕಟಪ್ಪ:-

ಇದರಲ್ಲಿ ಒಂಭತ್ತು ಕೋಟಿಯಷ್ಟು ಹಣ ಇನ್‌ವೆಸ್ಟ್ ಮಾಡಿದೆ ಎಂದು ಹೇಳಿದ್ದೀರಿ. ಇದರಲ್ಲಿ ಷೇರು ಹಣ ಮಾತ್ರವೇ ಅಥವಾ ಸಾಲದ ಹಣವೂ ಸೇರಿದೆಯೋ?

ಶ್ರೀ ಕೆ. ಪುಟ್ಟಸ್ವಾಮಿ:-

ಸಾಲದ ಹಣ ಸೇರುವುದಿಲ್ಲ. ಷೇರು ಹಣ ಮಾತ್ರ ಇದರಲ್ಲಿ ಸೇರಿದೆ.

ಶ್ರೀಮತಿ ಎಂ.ಆರ್. ಲಕ್ಷ್ಮಮ್ಮ:-

ಗುಣಾಕಾರ ಹಾಗೂ ಭಾಗಾಕಾರ ಮಾಡಿದರೆ ತಾವು ಹೇಳಿದಂತೆ ರಾಜ್ಯದಲ್ಲಿ 45 ಸಹಕಾರ ಸಂಘಗಳಿಗೆ ಒಂದು ಸಂಘದಲ್ಲಿ ಅಕ್ರಮ ವ್ಯವಹಾರ ನಡೆದಿದೆ ಎಂದು ಇದರ ಶೇಕಡವಾರು ಬರುತ್ತದೆ. ಅದರ ಬಗ್ಗೆ ಇನ್ನೂ ಸಾಕಷ್ಟು ಬಿಗಿಯಾದ ಕ್ರಮಗಳನ್ನು ತೆಗೆದುಕೊಂಡರೆ ಇಲ್ಲಿ ನಡೆಯುವ ಅಕ್ರಮ ವ್ಯವಹಾರಗಳನ್ನು ಕಡಿಮೆ ಮಾಡುವುದಕ್ಕೆ ಆಗುವುದಿಲ್ಲವೇ? ಬೇಕಾದರೆ ಕಾನೂನನ್ನೂ ತಿದ್ದುಪಡಿ ಮಾಡಬಹುದಲ್ಲವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಇದಕ್ಕಾಗಿ ಕಾನೂನು ತಿದ್ದುಪಾಟು ಮಾಡುವ ಆವಶ್ಯಕವಿಲ್ಲ. ಈಗ ನಮ್ಮಲ್ಲಿ ಹೆಚ್ಚು ಸಿಬ್ಬಂದಿ ಇದೆ. ಇವರುಗಳಿಗೆ ಇನ್ನೂ ಹೆಚ್ಚಿನ ಅಧಿಕಾರಗಳನ್ನು ಕೊಟ್ಟು ಅವರಿಗೇ ಸರಿಯಾದ ಮಾಹಿತಿಗಳನ್ನು ಕೊಟ್ಟರೆ ಇದನ್ನು ತಡೆಗಟ್ಟಬಹುದು ಎಂದು ಇದರ ಬಗ್ಗೆ ಸರಕಾರ ಯೋಚನೆ ಮಾಡುತ್ತಿದೆ. ಅಲ್ಲದೆ ಎಲ್ಲಿ ಹೆಚ್ಚು ತಪ್ಪುಗಳಾಗುತ್ತಿದೆ ಎನ್ನುವುದು ಆಡಿಟ್ಟು ರಿಪೋರ್ಟು ಬಂದ ಮೇಲೆ ಗೊತ್ತಾಗುತ್ತದೆ. ಅದರ ಮೇಲೆ ತಕ್ಕ ಕ್ರಮ ತೆಗೆದುಕೊಳ್ಳಬೇಕು. ಅಲ್ಲದೆ ಮಾನ್ಯ ಸಭಾಪತಿಗಳು ಅಪ್ಪಣೆ ಕೊಟ್ಟರೆ ಸ್ವಲ್ಪ ಕಾಲದ ಮುಂಚೆ ಮಾನ್ಯ ಸದಸ್ಯರೊಬ್ಬರು ಎಂದರೆ ಬೆಳಗಾಂ ಸದಸ್ಯರು ಎಷ್ಟು ಬ್ಯಾಂಕುಗಳಲ್ಲಿ ದುರುಪಯೋಗ ನಡೆದಿದೆ ಎಂದು ಕೇಳಿದರು. ಇದರ ವಿವರಗಳು ಹೀಗಿದೆ: ಬೆಳಗಾಂನಲ್ಲಿ ಎರಡು ಕೋಆಪರೇಟೀವ್ ಬ್ಯಾಂಕುಗಳಿವೆ. ಒಂದು ಹುಕ್ಕೇರಿ ಅರ್ಬನ್ ಕೋಆಪರೇಟೀವ್ ಬ್ಯಾಂಕಿನಲ್ಲಿ 1,40,909 ರೂಪಾಯಿಗಳ ದುರುಪಯೋಗವಾಗಿದೆ. ಎರಡನೆಯದು ಬೆಳಗಾಂ ಮುಸ್ಲಿಂ ಅರ್‌ಬನ್ ಬ್ಯಾಂಕಿನಲ್ಲಿ 21,000 ರೂಪಾಯಿಗಳು, ಇನ್ನೊಂದು ಸಂಕೇಶ್ವರ ಅರ್ಬನ್ ಕೋಆಪರೇಟೀವ್ ಬ್ಯಾಂಕಿನಲ್ಲಿ 50,500 ರೂಪಾಯಿಗಳು ಇಷ್ಟು ಇಲ್ಲಿ ದುರುಪಯೋಗವಾಗಿದೆ.

**Sri V. SREEVIVASA SHETTY:-**

Sir, in view of this notable performance by the Co-operative Societies, Do Government believe that these Co-operative Societies are a successful thing?

**Sri K. PUTTASWAMY:-**

Government firmly believe that the movement of co-operation is resulting in success.

ಶ್ರೀ ಎಂ. ಗೋವರ್ಧನರಾವ್:-

ಇತರ ರಾಜ್ಯಗಳಲ್ಲಿರುವ ಸಹಕಾರ ಸಂಘಗಳಿಗೂ ನಮ್ಮಲ್ಲಿರುವ ಸಹಕಾರ ಸಂಘಗಳಿಗೂ ಹೋಲಿಸಿ ನೋಡಿದರೆ ಸಹಕಾರ ತತ್ವವನ್ನು ಚೆನ್ನಾಗಿ ಪಾಲಿಸಿಕೊಂಡು ಬರುವುದರಲ್ಲಿ ನಮ್ಮ ರಾಜ್ಯದಲ್ಲಿ ತೃಪ್ತಿಕರವಾಗಿ ನಡೆಯುತ್ತಿದೆ ಎಂದು ನಾನು ತಿಳಿದಿದ್ದೇನೆ. ತಮ್ಮ ಅನುಭವದಲ್ಲಿ ಬೇರೆ ರಾಜ್ಯಗಳಿಗಿಂತ ನಮ್ಮ ರಾಜ್ಯದಲ್ಲಿ ಸಹಕಾರದ ಪ್ರಗತಿ ಹೇಗಿದೆ ಎನ್ನುವುದನ್ನು ಹೇಳುವುದಕ್ಕೆ ಸಾಧ್ಯವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಒಟ್ಟು ಇಂಡಿಯಾ ದೇಶದಲ್ಲಿರುವ ಸಹಕಾರ ಸಂಸ್ಥೆಗಳ ಪ್ರಗತಿಯನ್ನು ಹೋಲಿಸಿದರೆ ಮಹಾರಾಷ್ಟ್ರ ಮೊದಲನೇ ಸ್ಥಾನದಲ್ಲಿದೆ. ನಮ್ಮ ಮೈಸೂರು ರಾಜ್ಯ ಎರಡನೆಯದಾಗಿದೆ ಎಂದು ತಜ್ಞರು ಅಭಿಪ್ರಾಯ ಕೊಟ್ಟಿದ್ದಾರೆ.

ಶ್ರೀ ಎಂ.ವಿ. ವೆಂಕಟಪ್ಪ:-

ಲಾರ್ಜ್‌ಸ್ಕೇಲ್ ಕೋಆಪರೇಟೀವ್ ಸೊಸೈಟಿಗಳಿಗೆ ಬಂಡವಾಳಕ್ಕಾಗಿ ಸರಕಾರ ಸಹಾಯ ಮಾಡುತ್ತಿದೆ. ಅದರಂತೆ ಬೆಂಗಳೂರಿನಲ್ಲಾಗಲೀ ಜನತಾ ಬಜಾರಿಗೆ ಎಷ್ಟು ಸಹಾಯ ಕೊಟ್ಟಿದೆ?

ಶ್ರೀ ಕೆ. ಪುಟ್ಟಸ್ವಾಮಿ:-

ಇದು ಈ ಪ್ರಶ್ನೆಗೆ ಸಂಬಂಧಪಟ್ಟಿದ್ದಲ್ಲ. ಇದರ ಬಗ್ಗೆ ವಿವರಗಳಿಗೆ ನೋಟೀಸು ಬೇಕು ಎಂದು ಹೇಳಬೇಕಾಗಿದೆ.

Sri KESHAVA RAO NITTURKAR:-

In view of the total money invested by government at what rate of interest are we getting by return and what is the advantage to the State revenues per year?

ಶ್ರೀ ಕೆ. ಪುಟ್ಟಸ್ವಾಮಿ:-

ವಿ ಕ್ಯಾನ್‌ನಾಟ್ ಟೇಕ್ ಎನಿ ಇಂಟರೆಸ್ಟ್ ಫ್ರಮ್ ಕೋಆಪರೇಟೀವ್ ಸೊಸೈಟೀಸ್. ನಾವು ಕೊಟ್ಟಿರುವುದು ಪಾಲು ಬಂಡವಾಳಕ್ಕಲ್ಲ, ನಾವು ಕೊಡುವ ಹಣಕ್ಕೆ ಅಲ್ಲಿ ಬರುವ ಉತ್ಪತ್ತಿಯಲ್ಲಿ ಬಡ್ಡಿ ಎಂದು ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ. ಸಹಕಾರ ಸಂಘಗಳಿಗೋಸ್ಕರ ಎಂದು ಕೊಟ್ಟಿದ್ದಾಗ ಅದರಲ್ಲಿ ಬರುವ ಆದಾಯದಲ್ಲಿ ಶೇಕಡಾ ಆರೂಕಾಲು ಪರ್ಸೆಂಟಿನಷ್ಟು ಡಿವಿಡೆಂಡನ್ನು ಮೆಂಬರುಗಳಿಗೆ ಕೊಡಬಹುದು. ಅದಕ್ಕಿಂತ ಹೆಚ್ಚಿಗೆ ಕೊಡಬಾರದು ಎಂದು ಸೂಚನೆ ಕೊಡಲಾಗಿದೆ. ಶೇಕಡಾ ಆರೂಕಾಲು ಪರ್ಸೆಂಟಿನಷ್ಟು ಡಿವಿಡೆಂಡು ಕೊಡುವುದಕ್ಕೆ ಅವಕಾಶ ಇದೆ. ಕೆಲವು ಸಂದರ್ಭಗಳಲ್ಲಿ ಶೇಕಡಾ ಆರೂಕಾಲಕ್ಕಿಂತ ಕಡಿಮೆಯಾಗುವುದು ಇದ್ದರೆ ಪರೋಕ್ಷವಾಗಿ ಜನತೆಗೆ ಆಗಿರತಕ್ಕ ದುಡ್ಡಿನ ನಷ್ಟವನ್ನು ಗಮನಕ್ಕೆ ತೆಗೆದುಕೊಂಡು ಸಾಮಾನ್ಯವಾಗಿ ಎಷ್ಟು ಬಡ್ಡಿ ನಿರೀಕ್ಷೆ ಮಾಡಬೇಕೋ ಅದಕ್ಕೆ ಹತ್ತರಷ್ಟು ಜನಗಳಿಗೆ ಅನುಕೂಲ ಮಾಡಬೇಕೆಂದು ಇದರಲ್ಲಿ ಮಾಡಿದೆ.

ಶ್ರೀ ಎ.ಹೆಚ್. ಶಿವಾನಂದಸ್ವಾಮಿ:-

ಉತ್ತರದಲ್ಲಿ 393 ಪ್ರಕರಣಗಳಲ್ಲಿ ಅಕ್ರಮ ವ್ಯವಹಾರಗಳು ನಡೆದಿದೆ ಎಂದು ಹೇಳಲಾಗಿದೆ. ಇದರಲ್ಲಿ ಅಧಿಕಾರಿಗಳೇ ತಪ್ಪುಗಳನ್ನು ಕಂಡು ಹಿಡಿದಿದ್ದಾರೋ? ಇಲ್ಲವೇ ಬೇರೆ ಜನರಿಂದ ದೂರುಗಳು ಬಂದು ಅದರ ಮೇಲೆ ಅಧಿಕಾರಿಗಳು ಕ್ರಮ ತೆಗೆದುಕೊಂಡಿದ್ದಾರೋ?

ಶ್ರೀ ಕೆ. ಪುಟ್ಟಸ್ವಾಮಿ:-

ಆಡಿಟ್ಟು ರಿಪೋರ್ಟು ಹೊರಬಿದ್ದ ಮೇಲೆ 393 ಕೇಸುಗಳಲ್ಲಿ ದುರುಪಯೋಗವಾಗಿದೆ ಎಂದು ತಿಳಿದುಬಂದಿದೆ. ಇದರಲ್ಲಿ ಅಧಿಕಾರಿಗಳು ಎಷ್ಟು ಜನ ಮಾಡಿದ್ದಾರೆ ಅಥವಾ ಬೇರೆ ಜನ ಇದರಲ್ಲಿದ್ದಾರೆಯೇ ಎನ್ನುವುದನ್ನು ಪರಿಶೀಲನೆ ಮಾಡಿ ನೋಡಿ ಹೇಳಬೇಕಾಗುತ್ತದೆ.

**Sri KESHAVA RAO NITTURKAR:-**

Shall we take it that the total money that is invested in Co-operative Societies is a non earning investment?

**Sri K. PUTTASWAMY:-**

Definitely not.

**Mr. CHAIRMAN:-**

Since the Hon'ble Minister for Home is engaged in the other House, he has requested that question No. 139 may be taken up tomorrow. It will be taken up tomorrow. Now Short Notice Question No.

## 5. ರಾಜ್ಯ ಆಯವ್ಯಯ ಪತ್ರ ಕುರಿತ ಚರ್ಚೆ - 1968-69.*

ಸ್ವಾಮಿ, ನೆನ್ನೆಯಿಂದ ವೈದ್ಯಕೀಯ ಮತ್ತು ಜನಾರೋಗ್ಯ ಇಲಾಖೆಗಳಿಗೆ ಸಂಬಂಧಪಟ್ಟ ಬೇಡಿಕೆಗಳ ವಿಚಾರದಲ್ಲಿ ಈ ಮನೆಯ ಮಾನ್ಯ ಸದಸ್ಯರುಗಳು ಹೇಳಿರತಕ್ಕಂಥ ಅನೇಕ ಉಪಯುಕ್ತವಾದ ಅಂಶಗಳಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ಮಾನ್ಯ ಸದಸ್ಯರಿಗೆ ನಾನಾ ಮಟ್ಟಗಳಲ್ಲಿ ಇರತಕ್ಕ ಆಸ್ಪತ್ರೆಗಳ ನಿಕಟ ಪರಿಚಯ ಹೇಗೆ ಇದೆಯೋ ನನಗೂ ಅಷ್ಟೇಮಟ್ಟಿಗೆ ಇದೆ ಎಂದು ಹೇಳಬೇಕಾದ್ದು ಅಗತ್ಯ ಇದೆ. ಸಚಿವನಾದ ಮಾತ್ರಕ್ಕೇ ಆಸ್ಪತ್ರೆಗಳಿಗೆ ರೋಗಿಯಾಗಿ ಹೋದಾಗ, ರೋಗಿಗಳನ್ನು ಕರೆದುಕೊಂಡು ಹೋದಾಗ ಅಲ್ಲಿ ದೊರೆಯುತ್ತಾ ಇರತಕ್ಕ ಸ್ವಾಗತ ಅಲ್ಲಿ ಕೊಡತಕ್ಕ ಚಿಕಿತ್ಸೆ ಮತ್ತು ಇತರ ವಿಚಾರಗಳನ್ನು ನಾನು ಮರೆತಿಲ್ಲ. ಇಲ್ಲಿ ಮಾನ್ಯ ಸದಸ್ಯರುಗಳು ಹೇಳಿರತಕ್ಕ ಅಂಶಗಳೆಲ್ಲಾ ನಿಜವಲ್ಲ ಎಂದು ಹೇಳುವುದಕ್ಕೆ ನಾನು ಸಿದ್ಧನಾಗಿಲ್ಲ, ಬಹುಮಟ್ಟಿಗೆ ಸತ್ಯಾಂಶ ಇದೆ. ಅದನ್ನು ನಾನು ಒಪ್ಪಿಕೊಳ್ಳದಿದ್ದರೆ ಅದು ತಪ್ಪಾಗುತ್ತದೆ. ಮಾನ್ಯ ಸದಸ್ಯರು ಒಂದು ವಿಚಾರವನ್ನು ಪ್ರಾಧಾನ್ಯವಾಗಿ ಪ್ರಸ್ತಾಪ ಮಾಡಿದರು. ಆಸ್ಪತ್ರೆಗಳಲ್ಲಿ ಮಾನವೀಯತೆಯ ದೃಷ್ಟಿಯಿಂದ ರೋಗಿಗಳನ್ನು ನೋಡುತ್ತಿಲ್ಲ, ಹೃದಯ ಪರಿವರ್ತನೆಯಾಗಬೇಕು ಎಂದು ಹೇಳಿದರು. ಹೃದಯವನ್ನು ಪರಿವರ್ತನೆ ಮಾಡತಕ್ಕ ಮಾನವೀಯತೆಯು ಮಾರುಕಟ್ಟೆಯಲ್ಲಿ ಸಿಕ್ಕುವ ವಸ್ತುವಲ್ಲ. ಅದನ್ನು ಎಷ್ಟು ಬೋಧಿಸಿದರೂ ಕೂಡ ಅದು ಬರುತ್ತದೆ ಎಂದು ತಾವು ತಿಳಿದುಕೊಳ್ಳಬೇಡಿ. ಈ ರೀತಿ ಬೋಧಿಸತಕ್ಕವರಿಗೇನೂ ಕಡಿಮೆ ಇಲ್ಲ. ವೈದ್ಯರಾಗಿರತಕ್ಕವರು, ವೈದ್ಯಕೀಯ ಸಿಬ್ಬಂದಿಯಲ್ಲಿರತಕ್ಕವರು ತಮ್ಮ ಹಾಗೆಯೇ ಪಾಠಶಾಲೆಗಳಲ್ಲಿ ಕಾಲೇಜುಗಳಲ್ಲಿ ಕಲಿತಿರುವವರು. ನಾವು ವಿದ್ಯಾರ್ಥಿಗಳಾಗಿದ್ದ ಕಾಲದಲ್ಲಿ ಮಾನವೀಯತೆಯ ಮೇಲೆ ಮತ್ತು ಬಡವರನ್ನು ಕಂಡಂಥ ವೇಳೆಯಲ್ಲಿ ಅನುಕಂಪವನ್ನು ತೋರಿಸತಕ್ಕ ವಿಚಾರದಲ್ಲಿ ನಮಗೆ ಸಾಕಷ್ಟು ಪಾಠ ಆಗಿದೆ. ಆದರೆ ಅನುಕಂಪ ಬರುವುದು ಪೂರ್ವಜನ್ಮ ಸುಕೃತ ಫಲದಿಂದ ಬರುತ್ತದೆಯೇ ವಿನಾ ಕೆಲಸದಲ್ಲಿ ಬರುತ್ತದೆ ಎಂದು ನಾನು ತಿಳಿದಿದ್ದೇ ಆದರೆ, ಅದು ಬರಿಯ ಭ್ರಾಂತಿ. ಕಾನೂನಿನಿಂದ ಬರುವುದಿಲ್ಲ. ಮತ್ತೆ ಅದು ಸರಿಹೋಗುವುದು ಹೇಗೆ? ನಾನು ನನ್ನ ಜವಾಬ್ದಾರಿಯನ್ನು ತಪ್ಪಿಸುವುದಕ್ಕೆ ಹೀಗೆ ಹೇಳುತ್ತಿಲ್ಲ. ಇದು ನಮ್ಮ ನ್ಯಾಶನಲ್ ಕ್ಯಾರೆಕ್ಟರಿಗೆ ಸಂಬಂಧಪಟ್ಟದ್ದು. ಎಲ್ಲಾ ವಲಯದಲ್ಲೂ, ಎಲ್ಲಾ ವರ್ಗದ ಜನರಲ್ಲೂ ಮಾನವೀಯತೆಯು ಸ್ವಲ್ಪಮಟ್ಟಿಗೆ ಲೋಪ ಇರತಕ್ಕಂತಹ ಜನರು ಇದ್ದಾರೆ. ಅಲ್ಲಿಯ ಜನರು ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿ ರೋಗರುಜಿನಗಳಿಂದ ಬಳಲತಕ್ಕ ಜನರಿಗೆ ವೈದ್ಯಕೀಯ ಚಿಕಿತ್ಸೆಗಳನ್ನು ಒದಗಿಸುವಂತಹ ಒಂದು ವಾತಾವರಣವನ್ನು ಕಲ್ಪನೆ ಮಾಡತಕ್ಕಂಥದ್ದು ನಮಗೆಲ್ಲರಿಗೂ ಇರತಕ್ಕಂತಹ ಜವಾಬ್ದಾರಿ. ಈ ವೃತ್ತಿಯಲ್ಲಿ ತೊಡಗಿರತಕ್ಕಂತಹ ಜನ ನಮಗೆಲ್ಲರಿಗೂ ರಕ್ತ ಬಂಧುಗಳು, ಕೆಲವು ಸದಸ್ಯರುಗಳು ಹೇಳಿದರು, ಗ್ರಾಮಾಂತರದಿಂದ ಬಂದಂತಹ ಜನರಿಗೆ ಹೆಚ್ಚಿನ ಅವಕಾಶ ದೊರೆತಿಲ್ಲ, ಅವರು ಮೆಡಿಕಲ್ ಕಾಲೇಜನ್ನು ಸೇರಿ ಪದವೀಧರರಾಗಿ ಜನರಿಗೆ ಸೇವೆಸಲ್ಲಿಸತಕ್ಕ ಅವಕಾಶ ಕಡಿಮೆ ಇದೆ ಎಂದು, ಅದು ಸರಿಯಾದ ಭಾವನೆಯಲ್ಲವೆಂಬುದಕ್ಕೆ ನಮ್ಮ ವಿಕ್ಟೋರಿಯಾ ಆಸ್ಪತ್ರೆ, ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಹೋಗಿ ನೋಡಿದರೆ ಎಲ್ಲಾ ಗೊತ್ತಾಗುತ್ತದೆ. ಅಲ್ಲಿರತಕ್ಕವರಲ್ಲಿ 100ಕ್ಕೆ 90 ಜನ ಹಳ್ಳಿಗಳಿಂದ ಬಂದವರೇ ನಮಗೆ ಪರಿಚಯದವರಿದ್ದಾರೆ, ನಮಗೆ ಬಂಧುಗಳಿದ್ದಾರೆ. ಆದ್ದರಿಂದ

---

*(ವಿಧಾನ ಸಭಾ ಕಲಾಪ ದಿನಾಂಕ: 15-3-1968)

ಆಸ್ಪತ್ರೆಯಲ್ಲಿ ದೊರೆಯತಕ್ಕ ಚಿಕಿತ್ಸೆ ಅತ್ಯುತ್ತಮ ಮಟ್ಟದಲ್ಲಿದೆ, ತೃಪ್ತಿಕರವಾಗಿದೆ ಎಂದು ನಾನು ವಾದ ಮಾಡುತ್ತಾ ಇಲ್ಲ. ಅದನ್ನು ಉತ್ತಮಪಡಿಸುವುದಕ್ಕೆ ನಮ್ಮ ಜವಾಬ್ದಾರಿ ಇದೆ ಎಂದು ನಾನು ಒಪ್ಪಿಕೊಳ್ಳುತ್ತೇನೆ. ನಿನ್ನೆ ಆದಂತಹ ಚರ್ಚೆಗೆ ಎಲ್ಲದಕ್ಕೂ ಪ್ರತ್ಯೇಕ ಪ್ರತ್ಯೇಕವಾಗಿ ವಿವರವಾಗಿ ಉತ್ತರ ಕೊಡುವುದಕ್ಕೆ ಸಾಧ್ಯವಾಗಲಾರದು. ಕಾರಣ 6-7 ಗಂಟೆ ಚರ್ಚೆಯಾಗಿದ್ದಕ್ಕೆ ಕೇವಲ ಒಂದು ಒಂದೂವರೆ ಗಂಟೆಯ ಕಾಲದಲ್ಲಿ ಪ್ರತಿಯೊಂದಕ್ಕೂ ಉತ್ತರ ಕೊಡುವುದಕ್ಕೆ ಸಾಧ್ಯವಾಗಲಾರದು. ನಾನು ಎಲ್ಲವನ್ನೂ ಗುರುತುಹಾಕಿಕೊಂಡಿರುತ್ತೇನೆ. ಅದಲ್ಲದೆ ತಾವು ಹೇಳಿದ್ದು ಎಲ್ಲಾ ಈ ಸಭೆಯ ನಡೆವಳಿಕೆಯ ವರದಿಯಲ್ಲಿ ಪ್ರಯತ್ನ ಮಾಡುತ್ತೇನೆ. ಕೊನೆಯಲ್ಲಿ ಮಾತನಾಡಿದಂತಹ ಸದಸ್ಯರು, ಶ್ರೀ ಕಲಮಂಕರ್ ಪ್ರಸ್ತಾಪ ಮಾಡಿದ ವಿಚಾರವನ್ನು ಮೊದಲು ಪ್ರಸ್ತಾಪ ಮಾಡಲು ಬಯಸುತ್ತೇನೆ. ಕಾರಣವೇನೆಂದರೆ, ಈ ವಿಚಾರ ಬಹಳ ಮಟ್ಟಿಗೆ ಪ್ರಕಟಣೆಯ ಅವಕಾಶವನ್ನು ಪಡೆಯುತ್ತಿದೆ. ಇದು ಪ್ರಜಾವಾಣಿ ಪತ್ರಿಕೆಯಲ್ಲಿ 5-3-68ರಲ್ಲಿ ಬಂದಿತ್ತು. ಬಂದಕೂಡಲೇ "Please obtain a report from the District Surgeon immediately. This question may be raised in the Legislature. Information may be collected on phone", ಎಂದು ಬರೆದೆ. ಏಕೆಂದರೆ ಇದನ್ನು ಯಾವಾಗಲಾದರೂ ಈ ಸಭೆಯಲ್ಲಿ ಕೇಳಬಹುದು ಎಂಬ ಭಾವನೆಯಿಂದ ಪೂರ್ವಭಾವಿಯಾಗಿ ವಿಚಾರವನ್ನು ತಿಳಿದುಕೊಳ್ಳಬೇಕೆಂದು ಮಾಹಿತಿಯನ್ನು ತರಿಸಿದೆ. ಎಲ್ಲಾ ವಿವರಗಳು ಬಂದಿವೆ. ಅದು ಸುಮಾರು 3-4 ಪುಟಗಳಷ್ಟು ಇವೆ. ಅದೆಲ್ಲವನ್ನೂ ಸಭೆಯ ಮುಂದಿಟ್ಟು ತಮ್ಮ ಅಮೂಲ್ಯ ಕಾಲವನ್ನು ವ್ಯಯಮಾಡುವುದಕ್ಕೆ ನಾನು ಇಷ್ಟಪಡುವುದಿಲ್ಲ. ಸರಸ್ವತಿ ಎನ್ನತಕ್ಕಂತವರು 3-3-68ರಲ್ಲಿ ಮಧ್ಯರಾತ್ರಿ ಎರಡು ಗಂಟೆಯ ಹೊತ್ತಿನಲ್ಲಿ ಆಸ್ಪತ್ರೆಗೆ ದಾಖಲೆಯಾದರೆ ಆ ವೇಳೆಗೆ ಅವರು ಬೇರೊಂದು ಖಾಸಗೀ ಆಸ್ಪತ್ರೆಯಲ್ಲಿದ್ದು, ಇಲ್ಲಿಗೆ ಬಂದಿದ್ದವರು. ಅವರಿಗೆ ಚಿಕಿತ್ಸೆ ಎಷ್ಟು ಕೊಟ್ಟರೂ ಕೂಡ, ಆ ರಾತ್ರಿಯೇ ಅವರು ದೈವವಶರಾದರು. ಆ ವಾರ್ಡ್‌ನಲ್ಲಿದ್ದಂತಹ ವೇಳೆಯಲ್ಲಿ ಅವರ ಕಡೆಯ ಸಂಬಂಧಿ ಒಬ್ಬಳು ಅಲ್ಲೇ ಇದ್ದರು. ದೈವಾಧೀನರಾದ ಮೇಲೆ, ಶವವನ್ನು ತೆಗೆದುಕೊಂಡು ಹೋದ ಮೇಲೆ, ಬೆಳಿಗ್ಗೆ 11 ಗಂಟೆಗೆ ಬಂದು ಮಂಗಳ ಸೂತ್ರ ಹೋಗಿದೆ ಎಂದು ದೂರು ಕೊಟ್ಟರು. ಡಿಸ್ಟ್ರಿಕ್ಟ್ ಸರ್ಜನ್ ಅವರು ಸಂಬಂಧಪಟ್ಟವರನ್ನು ಕರೆದು ಕೇಳಿದರು. ಶ್ರೀಮತಿ ಸರಸ್ವತಿಯವರು ಆಸ್ಪತ್ರೆಯಲ್ಲಿದ್ದ ವೇಳೆಯಲ್ಲಿ ಅವರ ಕಡೆಯವರು ಒಬ್ಬರು ಇದ್ದರು ಎನ್ನುವ ವಿಚಾರವನ್ನು ಅವರಿಗೆ ತಿಳಿಸಿದರು. ಅವರು ಆ ವಿಚಾರದಲ್ಲಿ ಸಮಾಧಾನಪಟ್ಟುಕೊಂಡು ಹೋದರು. ಪೋಲೀಸ್‌ರಿಗೂ ದೂರು ಕೊಟ್ಟಿದೆ ಎಂದು ಹೇಳಿದರು. ನನಗೆ ಬಂದ ವರದಿ ಪ್ರಕಾರ ಪೋಲೀಸರಿಗೆ ಯಾವ ದೂರನ್ನು ಕೊಟ್ಟಿಲ್ಲ. ಆದ್ದರಿಂದ ಇದಕ್ಕೆ ಹೆಚ್ಚಿನ ಪ್ರಕಟಣೆ ಕೊಡತಕ್ಕದ್ದು ಸರಿಹೋಗುವುದಿಲ್ಲ ಎಂದು ನಾನು ಹೇಳುತ್ತೇನೆ. ಕೆಲವು ವಿಚಾರಗಳು ಹೆಚ್ಚಿನ ಪ್ರಕಟಣೆಯನ್ನು ಪಡೆಯುವುದು ಸ್ವಾಭಾವಿಕ. ವಿಧಾನಪರಿಷತ್ತಿನಲ್ಲಿ ಮಾನ್ಯ ಸದಸ್ಯರೊಬ್ಬರು ಒಂದು ವಿಚಾರವನ್ನು ಹೇಳಿದರು. ಅದನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ಯಾರೋ ಒಬ್ಬ ಡಾಕ್ಟರು ರಾಜೀನಾಮೆ ಕೊಟ್ಟದ್ದನ್ನು ವಾಪಸ್ಸು ಪಡೆಕೊಂಡು ಅವರಿಗೆ 61 ರಿಂದ 67 ರವರೆಗೆ ಒಟ್ಟು 35 ಸಾವಿರ ರೂಪಾಯಿಯನ್ನು ಕೊಟ್ಟುಬಿಟ್ಟಿದ್ದಾರೆ ಎಂದು ಹೇಳಿದರು. ಇದು ಪತ್ರಿಕೆಯಲ್ಲಿ ದೊಡ್ಡ ದೊಡ್ಡ ಅಕ್ಷರದಲ್ಲಿ ಬಂತು. ಆ ಮೇಲೆ ನಾನು ವಿಧಾನ ಪರಿಷತ್ತಿನಲ್ಲಿ ಒಂದು ಹೇಳಿಕೆಯನ್ನು ಕೊಟ್ಟೆ. ಸುಮಾರು 55 ಜನರಿಗೆ ಸಂಬಂಧಪಟ್ಟಂತೆ ರಾಜ್ಯ

ಪುನರ್ವಿಂಗಡಣೆಯಾದ ಮೇಲೆ ಸ್ಥಾನಮಾನಗಳ ವಿಚಾರದಲ್ಲಿ ಜಿಜ್ಞಾಸೆ ಇತ್ತು. ಅವರ ವಾದ ಕ್ಲಾಸ್ 3 ಅಸಿಸ್ಟೆಂಟ್ ಸರ್ಜನರಾಗಿ ಪರಿಗಣಿಸಿದ್ದಾರೆ, ಅವರನ್ನು ಕ್ಲಾಸ್ 2 ಆಗಿ ಪರಿಗಣಿಸಬೇಕೆಂದು. ಈ ವಿಚಾರದಲ್ಲಿ 56 ರಿಂದ ನಮ್ಮನ್ನು ಕ್ಲಾಸ್ 2 ಆಗಿ ಪರಿಗಣಿಸಬೇಕೆಂದು ಹೇಳಿ ಹೈಕೋರ್ಟ್‌ನಲ್ಲಿ ರಿಟ್ ಹಾಕಿದರು. ಹೈಕೋರ್ಟ್ 56 ರಿಂದ ಹಾಗೆ ಪರಿಗಣಿಸಬೇಕೆಂದು ತೀರ್ಮಾನ ಮಾಡಿತು. ಈ ಮಧ್ಯೆ ಒಬ್ಬರು ರಾಜಿನಾಮೆ ಕೊಟ್ಟರು. ರಾಜಿನಾಮೆ ಕೊಟ್ಟಿದ್ದವರು ರಾಜಿನಾಮೆ ವಾಪಸ್ಸು ತೆಗೆದುಕೊಳ್ಳುತ್ತೇನೆಂದು ಅರ್ಜಿ ಹಾಕಿದರು. ಆ ಕಾಲದಲ್ಲಿ ನಮ್ಮಲ್ಲಿ ವೈದ್ಯರ ಅಭಾವ ಇದ್ದ ಕಾರಣ ನಾವು ವಾಪಸ್ಸು ಅದನ್ನು ಪಡೆಯುವುದಕ್ಕೆ ಅವಕಾಶ ಕೊಡಬೇಕಾಯಿತು. ಯಾವ ಕಾಲದಲ್ಲಿ ಅವರು ಸರ್ವಿಸಿನಲ್ಲಿ ಇಲ್ಲವೋ, ಆ ಕಾಲದಲ್ಲಿ ಯಾವ ಸಂಭಾವನೆಯನ್ನೂ ಕೊಡುವುದಿಲ್ಲ. ಸರ್ಕಾರದ ಆರ್ಡರ್ ಸ್ಪಷ್ಟವಾಗಿದೆ. ಅವರಿಗೆ ಯಾವುದಾದರೂ ರಜ ಇದ್ದಿದ್ದರೆ, ಆ ರಜವನ್ನು ಮಾತ್ರ ಕೊಡತಕ್ಕದ್ದು. ರಜ ಇಲ್ಲದಿದ್ದರೆ, ಲೀವ್ ವಿಥೌಟ್ ಅಲೊವೆನ್ಸ್ ಎಂದು ಸ್ಪಷ್ಟವಾಗಿದೆ. ಮತ್ತು ಅವರಿಗೆ ಸರ್ವಿಸ್ ಪ್ರಕಾರ ಹಣ ಕೊಡಬೇಕಾಗಿದ್ದರೆ ಬಹುಶಃ 1956ನೇ ಇಸವಿಯಿಂದ 1961ರ ವರೆಗೆ ಅವರು ಸೇವೆ ಸಲ್ಲಿಸಿದ ಕಾಲದಲ್ಲಿ ಅವರಿಗೆಷ್ಟು ಬಾಕಿ ಬರಬೇಕೋ ಒಂದು ಸಾವಿರವೋ ಎರಡು ಅಥವಾ ಐದು ಸಾವಿರವೋ ಅದೇನಾಗುತ್ತೋ ಅದನ್ನು ಕೊಡಬೇಕಾಗುತ್ತದೆ, ಅವರು ನಮ್ಮ ಸರ್ವಿಸ್ಸಿಗೆ ಈಗ ಬಾರದೇ ಇದ್ದರೂ ಕೂಡ ಅವರಿಗೆ ಕೊಡಬೇಕಾಗುವ ಬಾಕಿ ಹಣವನ್ನು ಅವರಿಗೆ ಕೊಡಲೇಬೇಕಾಗುತ್ತದೆ ನಿಯಮಗಳ ಪ್ರಕಾರ. ಆದರೆ ಇದರ ಬಗ್ಗೆ ದೊಡ್ಡದಾಗಿ ಪತ್ರಿಕೆಗಳಲ್ಲಿ 35 ಸಾವಿರ ರೂಪಾಯಿಗಳಷ್ಟು ಹಣವನ್ನು ಹೆಲ್ತ್ ಇಲಾಖೆಯವರು ಕೊಟ್ಟಿದ್ದಾರೆ ಎಂದು ಬಂದಿರುವುದನ್ನು ಎಲ್ಲ ಜನರೂ ಈಗಾಗಲೇ ಓದಿರಬಹುದು.

ಶ್ರೀ ಎನ್.ಎಸ್. ಶೆಟ್ಟರ್:-

ಎಷ್ಟು ಕೊಡಬೇಕೋ ಅಷ್ಟನ್ನೂ ಕೊಡಲೇಬೇಕಾಗುತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ:-

1956ನೇ ಇಸವಿಯಿಂದ 1961ರ ವರೆಗೆ ಒಟ್ಟು ಎಷ್ಟು ಬರುತ್ತದೋ ಅದನ್ನು ಲೆಕ್ಕಾಚಾರ ಮಾಡಿ ಕೊಡಬೇಕಾಗುತ್ತದೆ. ಆದರೆ ಜಾಸ್ತಿ ಕೊಟ್ಟರೆ ಅಕೌಂಟೆಂಟ್ ಜನರಲ್‌ರವರು ಅದಕ್ಕೆ ಅವಕಾಶ ಕೊಡುವುದಿಲ್ಲ. ಇಷ್ಟು ದುಡ್ಡನ್ನು ಸರಕಾರ ಕೊಡುವಾಗ ಸುಲಭವಾಗಿ ಅಕೌಂಟೆಂಟ್ ಜನರಲ್‌ರೂ ಕೊಡುವುದಿಲ್ಲ. ಇದರ ಬಗ್ಗೆ ತಮಗೆ ಇಲ್ಲಿ ಏಕೆ ಹೇಳಲು ಇಷ್ಟಪಟ್ಟೆ ಎಂದರೆ, ಇಂತಹ ಒಂದು ವಿಶೇಷ ಕೇಸಿನ ವಿಷಯದಲ್ಲಿ ಸರಿಯಾದ ಒಂದು ಹೇಳಿಕೆಯನ್ನು ಈ ಸಭೆಯ ಮುಂದೆ ಪ್ರಸ್ತಾಪ ಮಾಡಿದರೆ ಮಾನ್ಯ ಸಭೆಯ ಸದಸ್ಯರುಗಳಿಗೆ ಹಾಗೂ ಇನ್ನಿತರ ಜನಕ್ಕೆ ಇದರ ವ್ಯವಹಾರ ಹೇಗಿದೆ ಎನ್ನುವುದು ಪತ್ರಿಕೆಗಳಲ್ಲಿ ಪ್ರಕಟವಾಗುತ್ತದೆ. ಆದಕ್ಕಾಗಿ ಅಸತ್ಯದ ಮಾತುಗಳು ಪತ್ರಿಕೆಗಳಲ್ಲಿ ಬರುವುದಕ್ಕೆ ಮೊದಲು ಸತ್ಯವಾದ ಮಾತುಗಳನ್ನು ಇಲ್ಲಿ ಹೇಳಿದರೆ ಅದನ್ನೂ ಎಲ್ಲರೂ ಓದಿಕೊಂಡು ಮುಂದೆ ತಪ್ಪು ಅಭಿಪ್ರಾಯ ಜನ ಪಡೆಯಲು ಅವಕಾಶ ಇಲ್ಲದಿರಲಿ ಎಂದು ಈ ಸಭೆಯಲ್ಲಿ ಪ್ರಸ್ತಾಪ ಮಾಡುವುದು ಯೋಗ್ಯ ಎಂದು ಮತ್ತು ಉಚಿತವೂ ಹೌದು ಎಂದು ಇಷ್ಟು ಹೇಳುತ್ತೇನೆ.

ಮತ್ತೆ ಇನ್ನೊಂದು ವಿಚಾರ ಮಾನ್ಯ ಸದಸ್ಯರಾದ ಶ್ರೀ ಕಲ್ಮಣ್‌ಕರವರು ಇಲ್ಲಿ ಹೇಳಿದರು. ಆನರರಿ ಸಿಸ್ಟಂನ್ನು ರದ್ದು ಮಾಡುತ್ತಾರೆ ಎಂದು. ನಾವು ಎಲ್ಲಾ ಆನರರಿ ಸಿಸ್ಟಂನ್ನು ರದ್ದು ಮಾಡುತ್ತೇವೆ ಎಂದು ಯಾರೂ ಹೇಳಿಲ್ಲ. ಆನರರಿ ಸಿಸ್ಟಂ ಇದೆ. ಅದರಲ್ಲೂ ಖಾಸಗಿ ಮೆಡಿಕಲ್ ಕಾಲೇಜುಗಳು ಇರುವ ಕಡೆ ಆನರರಿ ಸಿಸ್ಟಂ ಇರುವುದು ಅನಿವಾರ್ಯವಾಗಿದೆ. ಆನರರಿ ಸಿಸ್ಟಂ ರದ್ದುಮಾಡುವ ಪ್ರಶ್ನೆ ಸರಕಾರದ ಮುಂದಿಲ್ಲ. ಇದನ್ನು ಹೆಚ್ಚು ಮಾಡಿಕೊಂಡು ಹೋಗಬೇಕು ಎನ್ನುವುದೇ ಸರಕಾರದ ನೀತಿ. ಈಗ ಯಾವ ಪ್ರಮಾಣದಲ್ಲಿ ಇದು ನಡೆದುಕೊಂಡು ಹೋಗುತ್ತಿದೆ ಮತ್ತು ಇದರಲ್ಲಿ ಬರತಕ್ಕ ಜನರನ್ನು ತಿಳಿದುಕೊಂಡು ನೋಡಿಕೊಳ್ಳುವುದಕ್ಕೆ ಅವಕಾಶವಿದೆ. ಈಗ ಇಗರ ಬಗ್ಗೆ ಇನ್ನೂ ಹೇಳಬೇಕಾದ ಆವಶ್ಯಕತೆ ಇಲ್ಲ. ಆನರರಿ ಸಿಸ್ಟಂ ಕೆಲವು ಕಡೆ ಬಹಳ ಚೆನ್ನಾಗಿ ನಡೆಯುತ್ತಿದೆ ಮತ್ತು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ಎಲ್ಲೋ ಕೆಲವು ಕಡೆಗಳಲ್ಲಿ ಕೆಲಸಗಳು ನಡೆಯದೇ ಇರಬಹುದು. ಈಗ ಸಂಬಳ ಕೊಟ್ಟು ಇರುವ ಅಧಿಕಾರಿಗಳು ಮಾಡುವಾಗಲೂ ಕೆಲವು ಕಡೆಗಳಲ್ಲಿ ಕೆಲಸಗಳು ಚೆನ್ನಾಗಿ ಆಗುತ್ತವೆ, ಕೆಲವು ಕಡೆಗಳಲ್ಲಿ ಇಲ್ಲ. ಆನರರಿ ಪದ್ಧತಿಯನ್ನು ರದ್ದು ಮಾಡುವ ಅಭಿಪ್ರಾಯ ಸರ್ಕಾರದ ಮುಂದೆ ಇಲ್ಲ ಎನ್ನುವುದನ್ನು ಇಲ್ಲಿ ಸ್ಪಷ್ಟಪಡಿಸುವುದಕ್ಕೆ ಅಪೇಕ್ಷೆಪಡುತ್ತೇನೆ.

ಮತ್ತೆ ಈ ಸಭೆಯ ಸದಸ್ಯರು ಹಾಗೂ ತರುಣ ಸದಸ್ಯರು ಹಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ. ಆ ವಿಚಾರಗಳಿಗೆಲ್ಲಾ ವಿವರವಾಗಿ ಉತ್ತರ ಹೇಳುವುದು ಎಂದರೆ ಸ್ವಲ್ಪ ಕಷ್ಟವಾಗುತ್ತದೆ. ಸ್ವಲ್ಪಮಟ್ಟಿಗಾದರೂ ಕೆಲವು ವಿಚಾರಗಳ ಬಗ್ಗೆ ಇಲ್ಲಿ ಪ್ರಸ್ತಾಪಮಾಡುವುದು ಅಗತ್ಯ. ಮಾನ್ಯ ಸದಸ್ಯರಾದ ಶ್ರೀಮಾನ್ ಪುಟ್ಟದಾಸರವರು ಎಲ್ಲ ವಿಚಾರಗಳನ್ನೂ ಇಲ್ಲಿ ಹೇಳುತ್ತಾ ಸುಮಾರು ಒಂದು ಗಂಟೆಯು ಕಾಲ ಮಾತನಾಡಿದರು. ಅವರು ಸ್ವತಃ ಮೆಡಿಕಲ್ ಕಾಲೇಜು ವಿದ್ಯಾರ್ಥಿಯಾಗಿರುವುದರಿಂದ ಆಸ್ಪತ್ರೆಗಳಲ್ಲಿರತಕ್ಕ ಕ್ಲಿನಿಕಲ್ ಸೈಡ್‌ನಲ್ಲಿ ಕೊನೆಯ ವರ್ಷದ ತರಗತಿಯಲ್ಲಿ ಓದುತ್ತಿರುವುದರಿಂದ ದಿನವಹೀ ಆಸ್ಪತ್ರೆಗಳಲ್ಲಿರುವುದರಿಂದ ಅದರ ಅನುಭವವೂ ಅವರಿಗಿದೆ. ಆದರೆ ಇಲ್ಲಿ ತೀರ ಅಲ್ಲಗಳೆಯುವುದು ಬಹಳ ಕಷ್ಟ.

ಶ್ರೀ ಹೆಚ್. ಸಿದ್ದವೀರಪ್ಪ:-

ಒಂದು ಅಕ್ಷರದಷ್ಟೂ ತಪ್ಪು ಇಲ್ಲದೆ ಎಲ್ಲ ವಿಚಾರಗಳನ್ನೂ ಹೇಳಿದ್ದಾರೆ.

ಶ್ರೀ ಕೆ. ಪುಟ್ಟಸ್ವಾಮಿ:-

ಅವರು ಮಾತನಾಡಕೂಡದು ಎಂದು ಹೇಳುತ್ತಿಲ್ಲ. ನಾನು ಅವರಷ್ಟು ಮೇಧಾವಿಯಾಗಿಲ್ಲದೆ ಅವರಿಗೇನೋ ಉತ್ತರ ಕೊಡಬೇಕೆಂದು ಹೇಳುತ್ತಿಲ್ಲ. ಆದರೆ ಎಷ್ಟರ ಮಟ್ಟಿಗೆ ವಾಸ್ತವ ಸ್ಥಿತಿ ಇದೆ ಎನ್ನುವುದನ್ನು ನಾನು ತಿಳಿದುಕೊಳ್ಳಲು ಅಲ್ಲಿರುವ ಅಧಿಕಾರಿಗಳಿಂದ ಕೇಳಿ ತಿಳಿದುಕೊಳ್ಳುವುದಕ್ಕೆ ಒಂದು ಅವಕಾಶವಾಯಿತು. ನಿನ್ನೆ ಅವರು ಮಾತನಾಡಿದ್ದರಿಂದ ನನಗೆ ಸ್ವಲ್ಪ ಅನುಕೂಲವಾಯಿತು. ಇಂದು ಅವರು ಮಾತನಾಡಿದ್ದರೆ ನನಗೆ ವಿಚಾರಗಳು ತಿಳಿಯದೇ ಉತ್ತರ ಕೊಡುವುದು ಸ್ವಲ್ಪ ಕಷ್ಟವಾಗುತ್ತಿತ್ತು.

ಒಂದು ವಿಚಾರವನ್ನು ಅವರು ಇಲ್ಲಿ ಪ್ರಸ್ತಾಪ ಮಾಡುತ್ತಾ ಹೇಳಿದರು. ನನಗೆ ಫ್ಲೂ ಇತ್ತು ಆದಕ್ಕೆ ಕೊಡುವ ಪೇಂಟೆಡ್ ಸಲಫಾ ಎನ್ನುವುದನ್ನು ಆಸ್ಪತ್ರೆಗಳಿಗೆ ಸರಬರಾಜು ಮಾಡುತ್ತಿಲ್ಲ. ಫ್ಲೂ ಗುಣ ಮಾಡುವುದಕ್ಕೆ ಪೇಂಟೆಡ್ ಸಲಫಾ ಇಲ್ಲದೆ ಬೇರೆ ಎಷ್ಟೋ ಔಷಧಿಗಳೂ ಇವೆ.

ಶ್ರೀ ಎಚ್. ಪುಟ್ಟದಾಸ್:-

ಆಸ್ಪತ್ರೆಗಳಲ್ಲಿ ಸರಬರಾಜು ಇಲ್ಲ ಎಂದು ನನಗೆ ಬೇರೆ ಯಾವ ಸ್ಪೆಷಲ್ ಮೆಡಿಸನ್‌ನ್ನೂ ಕೊಡಲಿಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:-

ಸ್ಪೆಷಲ್ ಮೆಡಿಸನ್ ಬಗ್ಗೆ ಇಲ್ಲಿ ಪ್ರಸ್ತಾಪ ಮಾಡುತ್ತಿಲ್ಲ. ನಮ್ಮಲ್ಲಿ ಸಪ್ಲೈ ಇಲ್ಲ. ಅವರಿಗೆ ಬೇಕಾದರೆ ಬೇರೆ ಕಡೆ ಕೊಂಡುಕೊಂಡು ರೀ ಇಂಬರ್ಸ್‌ಮೆಂಟ್ ಮಾಡಿಕೊಳ್ಳಬಹುದು. ಈಗ ಇಲ್ಲಿ ಈ ಔಷಧಿ ಇಲ್ಲದಿದ್ದರೂ ಬೇರೆ ಔಷಧಿಗಳು ಈ ರೋಗಕ್ಕೆ ಗುಣವಾಗುವುದಕ್ಕೆ ಇವೆ. ಸಾಮಾನ್ಯವಾಗಿ ನಮ್ಮಲ್ಲಿ ಔಷಧಿಗಳು ಇಲ್ಲದಿದ್ದರೆ ನಮ್ಮ ಆಸ್ಪತ್ರೆಗಳಲ್ಲಿ ಔಷಧಿಗಳೇ ಇಲ್ಲ ಎನ್ನುವ ಒಂದು ಭಾವನೆ ಮಾಡಿಕೊಳ್ಳುವುದು ಸರಿಹೋಗುವುದಿಲ್ಲ. ಇನ್ನೊಂದು ಮುಖ್ಯ ವಿಚಾರವನ್ನು ಅವರು ಪ್ರಸ್ತಾಪ ಮಾಡಿದರು. ಅದೇನೆಂದರೆ, ನಮ್ಮ ದೇಶದಲ್ಲಿರುವ ಜನರೆಲ್ಲಾ ಹೆಚ್ಚಾಗಿ ಅನಿಮಿಕ್ ಪೇಷಂಟ್‌ಗಳೇ ಆಗಿದ್ದಾರೆ ಎಂದು. ಪೆಂಟೆಡ್ ಸಲಫಾ ನಮ್ಮ ಆಸ್ಪತ್ರೆಗಳಲ್ಲಿ ಇಲ್ಲದಿದ್ದರೆ ಇದನ್ನು ಗುಣ ಮಾಡತಕ್ಕ ಬೇರೆ ಔಷಧಿಗಳೂ ನಮ್ಮಲ್ಲಿ ಇವೆ.

ಶ್ರೀ ಎಚ್. ಪುಟ್ಟದಾಸ್:-

ಮಾನ್ಯ ಮಂತ್ರಿಗಳು ಪೆಂಟೆಡ್ ಸಲಫಾ ಎನ್ನುವುದರ ಕ್ರಿಯೆ ಏನು ಮತ್ತು ಅದರ ಪ್ರತಿಕ್ರಿಯೆ ಏನು ಎನ್ನುವುದನ್ನು ಹೇಳುತ್ತಾರೆಯೇ?

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಸದಸ್ಯರಿಗೆ ಇದನ್ನು ವಿಮರ್ಶೆಮಾಡಿ ಹೇಳಬೇಕು ಎಂದು ಹೇಳಲಿಲ್ಲ. ನಾನು ವಕೀಲನಾಗಿರುವುದರಿಂದ ಇಂತಹ ಪರಿಣಿತರನ್ನು ಅನುಭವ ಮಾಡಿಕೊಳ್ಳುವ ಒಂದು ಅವಕಾಶ ಇತ್ತು. ಅದೇನೆಂದರೆ, ಕೋರ್ಟುಗಳಲ್ಲಿ ಅನೇಕ ಸಾರಿ ಪರಿಣತರನ್ನು ಸಾಕ್ಷಿಗಳಾಗಿ ವಿಚಾರ ಮಾಡಬೇಕಾಗಿ ಬರುತ್ತಿತ್ತು. ಆಗ ವಕೀಲನಾಗಿ ಸಾಕ್ಷಿ ಪಡೆಯುವಾಗ ಪರಿಣತರ ಬಾಯಿಂದ ಯಾವ ರೀತಿಯಾದ ಮಾತುಗಳು ನಮಗೆ ಬೇಕೋ ಆ ರೀತಿಯಾಗಿ ಬರುವಂತೆ ಮಾಡತಕ್ಕ ಶಕ್ತಿ ನಮಗೆ ಇತ್ತು. ಆದುದರಿಂದ ಇದರ ಬಗ್ಗೆ ಕೂಡ ಕ್ರಿಯೆ ಏನು, ಪ್ರತಿಕ್ರಿಯೆ ಏನು ಎನ್ನುವುದನ್ನು ನಾನು ಬೇಕಾದರೆ ಇಲ್ಲಿ ಹೇಳುತ್ತೇನೆ.

ಶ್ರೀ ಅಜೀಜ್‌ಸೇಟ್:-

ಮಾನ್ಯ ಸದಸ್ಯರಾದ ಶ್ರೀ ಪುಟ್ಟದಾಸ್‌ರವರು ಸ್ವತಃ ಎಕ್ಸ್‌ಪೀರಿಯನ್ಸ್‌ನಿಂದ ಇಲ್ಲಿ ಹೇಳಿದರು ಮತ್ತು ಮೆಡಿಕಲ್ ಸ್ಟೂಡೆಂಟು ಆಗಿರುವುದರಿಂದ ಅವರು ಏನು ಹೇಳಬೇಕಾದರೂ ಸರಿಯಾಗಿ ಮೊದಲಿನಿಂದ ಕೊನೆಯವರೆಗೆ ಹೇಳುತ್ತಾರೆ. ಆದರೆ ತಾವು ಡಿಪಾರ್ಟ್‌ಮೆಂಟಿನವರು ಏನು ವಿವರಗಳನ್ನು ಕೊಡುತ್ತಾರೆ ಅದರ ಮೇಲೆ ಎ.ಬಿ.ಸಿ. ಎಂದು ಹೇಳಬಹುದು ಮುಂದಕ್ಕೆ ಏನೂ ತಮಗೆ ಹೇಳಲಿಕ್ಕೆ ಬರುವುದಿಲ್ಲ. ಇವರಾದರೆ ಎ ಟು ಜಡ್‌ವರೆಗೆ ಎಲ್ಲವನ್ನೂ ಹೇಳುವಷ್ಟು ಅನುಭವಪಡೆದಿದ್ದಾರೆ.

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಸದಸ್ಯರು ವಾಸ್ತವವಾದ ವಿಚಾರಗಳನ್ನೇ ಇಲ್ಲಿ ಹೇಳಿದರು. ಮಾನ್ಯ ಸದಸ್ಯರಾದ ಶ್ರೀ ಹುಚ್ಚಮಾಸ್ತಿಗೌಡರು ನಮ್ಮ ದೇಶದಲ್ಲಿ ಜನರು ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಆಗದೇ ಇರುವುದರ ದೆಸೆಯಿಂದ ಜನರು ಶಕ್ತಿ ಹೀನರಾಗುತ್ತಿದ್ದಾರೆ ಎಂದು ಹೇಳಿದರು. ಮಾನ್ಯ ಸದಸ್ಯರೆಲ್ಲರಿಗೂ ಗೊತ್ತು ಮತ್ತು ಸಾರ್ವಜನಿಕರಿಗೂ ಗೊತ್ತು. ನಮ್ಮ ದೇಶದಲ್ಲಿರತಕ್ಕ ಹಣದ ಅಭಾವದಿಂದ ಮಾಲ್‌ನ್ಯೂಟ್ರಿಷನ್‌ಗೆ ಇದೇ ಕಾರಣ ಎಂದು. ಬಡ್ಜೆಟ್ಟಿನಲ್ಲಿ ಸಾಕಷ್ಟು ಹಣ ಇದ್ದರೆ ಮಾಲ್‌ನ್ಯೂಟ್ರಿಷನ್ ಪ್ರಶ್ನೆಯೇ ಬಾರದೆ ಎಲ್ಲರಿಗೂ ಪುಷ್ಟಿಕರವಾದ ಆಹಾರ ಸಿಗುತ್ತಿತ್ತು. ಯಾರೂ ತೊಂದರೆಪಡುತ್ತಿರಲಿಲ್ಲ. ನಮ್ಮ ದೇಶದಲ್ಲಿ 1951 ರಿಂದ 1965ರ ವರೆಗೆ ಎಂದರೆ 15 ವರ್ಷಕ್ಕೆ ನಾವು ಇಂಡಿಯಾ ಸರಕಾರದವರು ಒದಗಿಸಿರುವ ಅಂಕಿ ಅಂಶಗಳ ಪ್ರಕಾರ ನೋಡಿದರೆ ಸುಮಾರು 17 ಮಿಲಿಯನ್ ಟನ್‌ಗಳಷ್ಟು ಹೆಚ್ಚು ಆಹಾರದ ಉತ್ಪನ್ನವನ್ನು ಮಾಡಿದ್ದೇವೆ ಎನ್ನುವುದು ತಿಳಿದುಬರುತ್ತದೆ. ಹೀಗಾದರೆ ಎಲ್ಲರಿಗೂ ಹೆಚ್ಚು ಆಹಾರ ಕೊಡುವಾಗ ಒಬ್ಬರಿಗೆ 12.8 ಔನ್ಸುಗಳಷ್ಟು ಕೊಡುತ್ತಿದ್ದುದನ್ನು ಇಂದು 12.4 ಔನ್ಸ್‌ಗಳಷ್ಟು ಮಾತ್ರ ಕೊಡುತ್ತಿದ್ದೇವೆ. ಕಾರಣವೇನು ಎಂದರೆ, ಇದಕ್ಕೆ ಸುಮಾರು 14 ಕೋಟಿಯಷ್ಟು ಪ್ರಜಾ ಸಂಖ್ಯೆ ಹೆಚ್ಚಾಗಿದೆ. 15 ವರ್ಷಗಳಲ್ಲಿ ಇಷ್ಟು ಪ್ರಜಾ ಸಂಖ್ಯೆ ಹೆಚ್ಚಾದರೂ ಕೂಡ ಆಗ ಮೊದಲಿಗೆ 12.8 ಔನ್ಸ್‌ಗಳಷ್ಟು ಆಹಾರ ಕೊಡುತ್ತಿರುವುದನ್ನು ಇಂದು 12.4 ಔನ್ಸುಗಳಿಗೆ ಮಾತ್ರ ಇಳಿಸಲಾಗಿದೆ. ಇದಕ್ಕೆ ಯಾರು ಹೊಣೆ ಎಂದು ಹೇಳುವುದು ಕಷ್ಟ. ಆದರೆ ದೇಶದ ಆಹಾರದ ಉತ್ಪನ್ನ ಇದುವರೆಗೆ ಹೆಚ್ಚು ಮಟ್ಟಕ್ಕೆ ಬರಲಿಲ್ಲ. ಕೇವಲ ಹದಿನೈದು ಸಾವಿರ ಟನ್ನುಗಳಷ್ಟು ಇದ್ದು ಇಂದು 17 ಸಾವಿರ ಟನ್ನುಗಳಷ್ಟು ಹೆಚ್ಚು ಆಹಾರ ಮಾತ್ರ ಉತ್ಪನ್ನವಾಗಿದೆ. ಎಂದರೆ ನಮಗೆ ದೊರೆಯುವ ಪೌಷ್ಟಿಕಾಂಶ ಆಹಾರ ಕಡಿಮೆಯಾಗಿದೆ ಎನ್ನುವ ಮಾತನ್ನು ಇಲ್ಲಿ ಒಪ್ಪಿಕೊಳ್ಳಬೇಕು. ಸರಕಾರ ತಪ್ಪುಮಾಡಿದೆ, ಆರೋಗ್ಯ ಇಲಾಖೆ ತಪ್ಪು ಮಾಡಿದೆ ಎಂದು ಹೇಳುವುದು ಸರಿಯಲ್ಲ. ನಮ್ಮ ದೇಶದ ಪ್ರಜಾ ಸಂಖ್ಯೆ 14 ಕೋಟಿ ಹೇಗೆ ಹೆಚ್ಚು ಆಯಿತು ಆರೋಗ್ಯ ಇಲಾಖೆ ಇದಕ್ಕೆ ಹೇಗೆ ಕಾರಣ? 15 ವರ್ಷಗಳ ಅವಧಿಯಲ್ಲಿ 14 ಕೋಟಿ ಪ್ರಜಾ ಸಂಖ್ಯೆ ಹೆಚ್ಚಾಗುವುದು ಇದಕ್ಕೆ ಆರೋಗ್ಯ ಇಲಾಖೆ ಕಾರಣ ಎಂದು ಹೇಳಬಹುದೊ?

**Sri H. SIDDAVEERAPPA:-**

It is a novel theory.

ಶ್ರೀ ಕೆ. ಪುಟ್ಟಸ್ವಾಮಿ:-

ನಾನು ಹೇಳಿದ ಮೇಲೆ ಅದು ಹೇಗೆ ನಾವೆಲ್ ಥಿಯರಿ ಎನ್ನುವುದು ಗೊತ್ತಾಗುತ್ತದೆ. ನಮ್ಮ ದೇಶದ ಪ್ರಜಾ ಸಂಖ್ಯೆಯಲ್ಲಿ ಹುಟ್ಟು ಮತ್ತು ಸಾವು ಯಾವ ಪ್ರಮಾಣದಲ್ಲಿವೆ ಎಂದು ಹೇಳುತ್ತೇನೆ. 1921ನೇ ಇಸವಿಯಲ್ಲಿ ನಮ್ಮಲ್ಲಿ ಬರ್ಥ್ ರೇಟ್ 49.2 ಹಾಗೂ ಡೆಥ್ ರೇಟ್ 48.6 ಇತ್ತು. 20 ವರ್ಷಗಳ ನಂತರ ಅಂದರೆ 1941ನೇ ಇಸವಿಯಲ್ಲಿ ಬರ್ಥ್ ರೇಟ್ 45.2 ಡೆಥ್ ರೇಟ್ 31.2.1961ನೇ ಇಸವಿಯಲ್ಲಿ ಬರ್ಥ್ ರೇಟ್ 41.7 ಡೆಥ್ ರೇಟ್ 22.8 ಇದೆ.

1966 ರಲ್ಲಿ ಬರ್ಥ್ ರೇಟ್ 41 ಇದ್ದರೆ ಡೆಥ್ ರೇಟ್ 16 ಇದೆ. ಈ ಜನನ ಮರಣ ಅಂಕಿ ಅಂಶಗಳ ಬದಲಾವಣೆಯಾಗಿರುವ ತಪ್ಪಿಗೆ ಜನಾರೋಗ್ಯ ಇಲಾಖೆ ಹೊಣೆಯಾಗಿದೆ ಎಂದು ನಾನು ಒಪ್ಪಿಕೊಳ್ಳುತ್ತೇನೆ.

ಶ್ರೀ ಎಚ್. ಸಿದ್ದವೀರಪ್ಪ:-

ಅದು ಹೇಗೆ?

ಶ್ರೀ ಕೆ. ಪುಟ್ಟಸ್ವಾಮಿ:-

ನಾನು ಅದನ್ನು ಹೇಳುತ್ತೇನೆ 1921ನೇ ಇಸವಿಯಲ್ಲಿ ಡೆಥ್ ರೇಟು 48 ಪರ್‌ಸೆಂಟು ಇದ್ದುದು 1966ನೇ ಇಸವಿಯಲ್ಲಿ ಅದು 16 ಪರ್ಸೆಂಟ್‌ಗೆ ಬಂದಿದೆ. ಜನಾರೋಗ್ಯ ಇಲಾಖೆಯು ಮಾಡಿದ ಕಾರ್ಯಕ್ರಮಗಳ ಪರಿಣಾಮವಾಗಿ ಜನರ ಆರೋಗ್ಯ ಸುಧಾರಣೆಯಾಗಿ ಸಾವಿನ ಸಂಖ್ಯೆ ಇಳಿಮುಖವಾಗಿದೆ. ಇದು ಇನ್ನೂ ಇಳಿಮುಖವಾಗುತ್ತದೆ ಇದಕ್ಕೆ ಖಾಸಗಿ ಡಾಕ್ಟರರುಗಳು ಸಹ ಕಾರಣರಾಗಿದ್ದಾರೆಂದು ವಾದ ಮಾಡಿದರೆ ಖಾಸಗಿ ಡಾಕ್ಟರರನ್ನು ಸಹ ನಾವೇ ತಯಾರ್ಮಾಡಿದ್ದೇವೆ. ಈ ಕಾರ್ಯವನ್ನು ಕೂಡ ನಾವೇ ತೆಗೆದುಕೊಳ್ಳುತ್ತಿದ್ದೇವೆಂದು ಭಾವನೆ ಮಾಡಿಕೊಳ್ಳಬೇಕು. ಪ್ರವೇಟ್ ಡಾಕ್ಟರರುಗಳು ಹೆಚ್ಚಾಗಿ ಕ್ಯುರೇಟಿವ್ ಸೈಡ್‌ನಲ್ಲಿ ಇದ್ದಾರೆ. ಜನಾರೋಗ್ಯ ಇಲಾಖೆ ಉಳಿದ ಎಲ್ಲಾ ಕ್ರಮಗಳನ್ನೂ ತೆಗೆದುಕೊಂಡಿದೆ.

ಶ್ರೀ ಎಚ್. ಸಿದ್ದವೀರಪ್ಪ:-

ಮಲೇರಿಯಾ ಇರಾಡಿಕೇಶನ್ ಆದುದು ಹೇಗೆ? ಪ್ಲೇಗ್ ಇಲ್ಲದಂತೆ ಮಾಡಿರುವುದು ಇದನ್ನು ನೀವು ಮಾಡಿಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:-

ಸರಕಾರ ಸಾಧಿಸಿದ್ದನ್ನು ಹೇಳುತ್ತೇನೆ, ನಾನು ಸಾಧಿಸಿದ್ದೇನೆಂದು ಹೇಳುವುದಿಲ್ಲ. 1921ನೇ ಇಸವಿಯಿಂದ ಇರತಕ್ಕ ಅಂಕಿ ಅಂಶಗಳನ್ನು ಕೊಡುತ್ತೇನೆ. ಅದಕ್ಕೆ ಕಾರಣ ನಾನು ಅಲ್ಲ ನೀವು ಅಲ್ಲ. ನಮಗಿಂತ ಹಿಂದೆ ಇದ್ದವರು ಮಾಡಿಕೊಂಡು ಬಂದಿದ್ದಾರೆ, ಜನಾರೋಗ್ಯ ಸರಿಯಾಗಿದೆ. ಸಾಂಕ್ರಾಮಿಕ ರೋಗ ಹೋದುವು, ಪ್ಲೇಗ್, ಕಾಲರ ಸಂಪೂರ್ಣವಾಗಿ ಹತೋಟಿಗೆ ಬಂದಿವೆ. ಮೊದಲು ಮಲೇರಿಯಾ ಎಷ್ಟು ಪ್ರಮಾಣದಲ್ಲಿ ಇತ್ತು ಎನ್ನುವುದು ನಮಗೆ ಜ್ಞಾಪಕವಿದೆ. ಮಲೇರಿಯಾದ ಮಾತು ಬೇರೆ. ಮೊನ್ನೆ ತಾನೆ ನಾನು ಮಂಡ್ಯ ಜಿಲ್ಲೆಯಲ್ಲಿ ಒಂದು ಗದ್ದೆ ನೋಡುವುದಕ್ಕೆ ಒಂದು ಸ್ಥಳಕ್ಕೆ ಹೋಗಿದ್ದೆ. ಅಲ್ಲಿ ಒಬ್ಬರು ಭೇಟಿಯಾದರು. ಅವರಿಗೆ ಸುಮಾರು 60 ವರ್ಷ ಇರಬಹುದು. 20 ವರ್ಷಗಳ ಹಿಂದಿನ ಪರಿಸ್ಥಿತಿ ಹೇಗೆ ಇತ್ತು ಎಂಬುದನ್ನು ಹೇಳಿದರು. ಅಲ್ಲಿ ಒಂದೇ ಮದುವೆ ಮಾಡಿಕೊಂಡವರು ಇಲ್ಲ. ಎರಡು ಮೂರು ಸಲ ಮದುವೆ ಮಾಡಿಕೊಂಡ ಸಂದರ್ಭ ಇತ್ತು. ಮಲೇರಿಯಾದಿಂದ ಜನ ಸಾಯುವುದು ಸರ್ವೇ ಸಾಮಾನ್ಯವಾಗಿತ್ತು ಇಂದು ಅವರು ಇಂಥ ಕಷ್ಟದಿಂದ ಪಾರಾಗಿದ್ದಾರೆ. ನಾನು ಮಂಡ್ಯ ಜಿಲ್ಲೆಯವನೇ ಆಗಿದ್ದೇನೆ. ಇದನ್ನು

ನೋಡಿ ಕಷ್ಟದಿಂದ ನಾನು ಸಂಕಟಪಟ್ಟಿದ್ದೇನೆ. ಸಾಮಾನ್ಯವಾಗಿ ಐದು ಹತ್ತು ಮೈಲು ಪ್ರದೇಶದಲ್ಲಿ ನೋಡಿದರೂ ಮಲೇರಿಯಾದಿಂದ ಜನರು ನರಳುತ್ತಿದ್ದರು. ಇದನ್ನು ನನ್ನ ಅನುಭವದಿಂದ ಹೇಳುತ್ತೇನೆ. ಆ ಚಿತ್ರ ನನ್ನ ಕಣ್ಣು ಮುಂದೆ ಕಟ್ಟಿದ ಹಾಗೆ ಇದೆ.

ಶ್ರೀ ಎನ್. ಹುಚ್ಚಮಾಸ್ತಿಗೌಡ:-

ಕಳೆದ 20 ವರ್ಷಗಳಲ್ಲಿ ವೈಜ್ಞಾನಿಕ ಬೆಳವಣಿಗೆಯಿಂದ ವೈದ್ಯಕೀಯ ಸಂಶೋಧನೆಯಿಂದ ಈ ಎಲ್ಲ ಪರಿಣಾಮವಾಗಿ ಮನುಷ್ಯನ ಆಯುಸ್ಸು ಮಿತಿ ಜಾಸ್ತಿಯಾಗಿದೆ. ಆರೋಗ್ಯ ಉತ್ತಮವಾಗಿದೆ, ಆದರೆ ಅದನ್ನು ಸರಕಾರ ಮಾಡಿದೆ ಎಂದು ಹೇಳಬೇಕಾಗಿಲ್ಲ. ಪ್ರತಿ ವರ್ಷ ಈ ಸಭೆಯಲ್ಲಿ ಬರತಕ್ಕಂಥ ಆಕ್ಷೇಪಣೆಗಳಿಗೆ ಅಷ್ಟೇ ತಮ್ಮ ಅಭಿಪ್ರಾಯ ಹೇಳಿದರೆ ಸಭೆಯ ಕಾಲ ಉಳಿಯುತ್ತದೆ.

ಶ್ರೀ ಹೆಚ್. ಸಿದ್ದವೀರಪ್ಪ:-

ಸರಕಾರ ಕೊಡುವ ಹಣಸರಿಯಾಗಿ ಖರ್ಚಾಗುತ್ತದೆಯೇ ಇಲ್ಲವೇ ಇದನ್ನು ಹೇಳಿ.

ಶ್ರೀ ಕೆ. ಪುಟ್ಟಸ್ವಾಮಿ:-

ವಿರೋಧಪಕ್ಷದ ವಿಪ್ ಅವರು ನಾನು ಓದುತ್ತಿದ್ದ ಕಾಲದಿಂದ ನನ್ನ ಜೊತೆಗೆ ಬಂದವರು 20 ವರ್ಷದಿಂದ ವಿಪ್ ಕೆಲಸ ಮಾಡಿ ಏನಾದರೂ ಕೂಡ ಸಭೆಯಲ್ಲಿ ಮಾತನಾಡತಕ್ಕಂಥವರಿಂದ ತಮ್ಮ ಪಾಯಿಂಟ್ ಗೇನ್ ಆಗುತ್ತಿದ್ದರೆ ಆತಂಕ ಮಾಡುವುದು ಚೆನ್ನಾಗಿ ಕಲಿತಿದ್ದಾರೆ. ನಾನು ಹೇಳತಕ್ಕಂಥಾದ್ದು ಅವರಿಗೆ ಮನದಟ್ಟಾಗಿದೆ ಎಂದು ನನಗೆ ಅನ್ನಿಸುತ್ತದೆ. ಯಾವುದಾದರೂ ಅಪ್ಯಾಯಮಾನವಾಗಿದ್ದರೆ ಮಧ್ಯೆ ಆತಂಕ ಮಾಡುತ್ತಾರೆ. ನಾನು ಓದುವಾಗ ನನ್ನ ಜೊತೆಗೆ ಕೆಲವು ಸ್ನೇಹಿತರು ಇದ್ದರು. ಅವರಿಗೆ ಊರಿಗೆ ಹೋಗುವುದಕ್ಕೆ ಭಯ. ಊರಿಗೆ ಹೋದರೆ ಎಲ್ಲಿ ಮಲೇರಿಯಾ ಬರುತ್ತದೋ ಎಂದು ಅವರಿಗೆ ಭಯ. ಆದರೆ ಇಂದು ಜನಾರೋಗ್ಯ ಸುಧಾರಿಸಿದೆ. ಇದು ಸಂತೋಷಕರ. ಇಂದು ದೇಶದಲ್ಲಿ ಸಾವಿನ ಪ್ರಮಾಣ 16 ಪರ್ಸೆಂಟಿಗೆ ಬಂದಿದೆ. ಅದು ಇನ್ನೂ ಕಡಿಮೆಯಾಗುತ್ತದೆ. ಆಯಸ್ಸು ಪ್ರಮಾಣ 52 ವರ್ಷ ಎಂದು ಲೆಕ್ಕ ಹಾಕಿದ್ದಾರೆ. ಬೇರೆ ದೇಶದಲ್ಲಿ ಈ ಪ್ರಮಾಣ 60 ವರ್ಷ 70 ವರ್ಷ ಇರುವಂತೆ ಇಲ್ಲಿಯೂ ಆಗಬಹುದು. ಆಗ್ಗೆ ವೃದ್ಧಾಪ್ಯದ ಸಮಸ್ಯೆ ಬರುತ್ತದೆ. ಒಟ್ಟಿನಲ್ಲಿ ಜನರ ಆರೋಗ್ಯ ಸುಧಾರಿಸಿದಂತೆ ಜನರಲ್ಲಿ ರೋಗ ನಿರೋಧಕ ಶಕ್ತಿ ಬೆಳೆದಿದೆ. ಇದರಿಂದ ಬೇರೆ ಸಮಸ್ಯೆ ಹುಟ್ಟಿದೆ. ಕಳೆದ 15 ವರ್ಷಗಳಲ್ಲಿ 14 ಕೋಟಿ ಜನಸಂಖ್ಯೆ ಹೆಚ್ಚಾಗಿದೆ. ಪ್ರಜಾ ಸಂಖ್ಯೆ ಬೆಳೆಯುತ್ತಾ ಇರುವುದು ಒಂದು ವರ್ಷದಲ್ಲಿ ಜನನ ಸಂಖ್ಯೆ 2 ಕೋಟಿ 10 ಲಕ್ಷ ಇದ್ದರೆ ಸಾವಿನ ಸಂಖ್ಯೆ 80 ಲಕ್ಷ ಮಾತ್ರ ಇದೆ. ಪ್ರತಿ ವರ್ಷ ಹೆಚ್ಚು ಪ್ರಜಾ ಸಂಖ್ಯೆಯಾಗುತ್ತಿದೆ. ಒಂದು ವರ್ಷಕ್ಕೆ 1 ಕೋಟಿ 30 ಲಕ್ಷ ಪ್ರಜಾ ಸಂಖ್ಯೆ ಜಾಸ್ತಿಯಾಗುತ್ತಿದೆ.

ಶ್ರೀ ಎಚ್. ಸಿದ್ಧವೀರಪ್ಪ:-

ರಷಿಯಾ ಚೈನಾ ದೇಶದಲ್ಲಿ ಹೆಚ್ಚು ಮಕ್ಕಳಾದರೆ ಇನ್‌ಸೆಂಟಿವ್ ಕೊಡುತ್ತಾರೆ. ಆದರೆ ಫಾಮಿಲಿ ಪ್ಲಾನಿಂಗ್ ಎಂದು ನೀವು ಈ ದರಿದ್ರ ಕೆಲಸಕ್ಕೆ ಇಳಿದಿದ್ದೀರಿ.

ಶ್ರೀ ಕೆ. ಪುಟ್ಟಸ್ವಾಮಿ:-

ನಿಮಗೆ ಈ ಬಿಸಿ ತಟ್ಟಿಲ್ಲ ಎಂದು ಕಾಣುತ್ತದೆ. ಹತ್ತು ಜನ ಮಕ್ಕಳಾಗಿ ಅದರಲ್ಲಿ 6-7 ಜನ ಹೆಣ್ಣು ಮಕ್ಕಳಾಗಿದ್ದರೆ ಅದು ಗೊತ್ತಾಗುತ್ತಿತ್ತು.

ಶ್ರೀ ನಾಗರತ್ನಮ್ಮ ಹಿರೇಮಠ:-

ಹೆಣ್ಣು ಮಕ್ಕಳು ಬಳೆ ತೊಟ್ಟಿದ್ದಾರೆಂದು ಈ ರೀತಿ ಮೀಸೆ ಹೊತ್ತ ಗಂಡಸರು ಅಗೌರವದಿಂದ ಮಾತನಾಡುವುದು ಸರಿಯಲ್ಲ. ಹೆಣ್ಣು ಮಕ್ಕಳಿಗೂ ಶಕ್ತಿ ಸಾಮರ್ಥ್ಯ ಇದೆ.

ಶ್ರೀ ಹೆಚ್. ಸಿದ್ಧವೀರಪ್ಪ:-

ನಿಮಗೆ ಅಗೌರವ ಮಾಡಬೇಕು ಬಳೆ ತೊಟ್ಟವರು ಎಂದು ಹೇಳಲಿಲ್ಲ. ಮಾತನ್ನು ಅವರ ಮಗನೇ ಕೇಳುವುದಿಲ್ಲ.

ಶ್ರೀ ಹೆಚ್. ಸಿದ್ಧವೀರಪ್ಪ:-

ಡಾಕ್ಟರ್ ಅಂಬೇಡ್ಕರ್ ಎಷ್ಟನೇ ಮಗ, ಸ್ವಾಮಿ ವಿವೇಕಾನಂದರು ಎಷ್ಟನೇ ಮಗ, ಸುಭಾಷ್ ಚಂದ್ರಬೋಸರು ಎಷ್ಟನೇ ಮಗ, ಶ್ರೀಕೃಷ್ಣ ಪರಮಾತ್ಮ ಎಷ್ಟನೇ ಮಗ?

ಶ್ರೀ ಕೆ. ಪುಟ್ಟಸ್ವಾಮಿ:-

ನಾನು ದೈವಿಕ ಶಕ್ತಿಯಲ್ಲಿ ನಂಬಿಕೆ ಇರುವವನು. ಮಾನ್ಯ ಸಿದ್ದವೀರಪ್ಪನವರಿಗೆ ಯಾವ ಸಂಶಯವೂ ಬೇಡ. ನಮ್ಮ ಶ್ರೀಕೃಷ್ಣ ಪರಮಾತ್ಮ ಎಂಟನೇ ಮಗ. ಆಗ ಈ ಕುಟುಂಬ ಯೋಜನೆ ಬಂದಿದ್ದರೆ ಅಷ್ಟಮ ಗರ್ಭದಲ್ಲಿ ಶ್ರೀಕೃಷ್ಣ ಹುಟ್ಟುತ್ತಿರಲಿಲ್ಲ ಎಂದು ಅವರ ಶಂಕೆ ಇರಬಹುದು. ಆ ಭಯ ಬೇಕಾಗಿಲ್ಲ. ದೈವಿಕ ಶಕ್ತಿಯಲ್ಲಿ ನಾನು ನಂಬಿಕೆ ಇರುವವನು. ಅಂಥ ಸಮಯದಲ್ಲಿ ಎಂಟನೇ ಶಿಶುವಾಗಿ ಅವತರಿಸುವಂಥ ಭಗವಂತ ಮೊದಲನೇ ಶಿಶುವಾಗಿ ಅವತರಿಸುತ್ತಿದ್ದ. ಆದುದರಿಂದ ಏನೂ ಹೆದರಬೇಕಾಗಿಲ್ಲ.

ಈ ನಮ್ಮ ದೇಶದಲ್ಲಿ ಪ್ರತಿ ಒಂದೂವರೆ ಸೆಕೆಂಡಿಗೆ ಒಂದು ಮಗು, ಒಂದು ದಿನಕ್ಕೆ 55 ಸಾವಿರ ಮಕ್ಕಳು ಹುಟ್ಟುತ್ತಿದ್ದಾರೆ. ಈ ತರಹ ಪ್ರಮಾಣದಲ್ಲಿ ದೇಶದಮೇಲೆ ಭಾರ ಎಷ್ಟರಮಟ್ಟಿಗೆ ಬೀಳುತ್ತಿದೆ ಎನ್ನುವುದನ್ನು ಯೋಚನೆ ಮಾಡಬೇಕು. ಎರಡು ವರ್ಷಕ್ಕೆ ಒಮ್ಮೆ ಒಂದು ಮೈಸೂರು ದೇಶ ನಿರ್ಮಾಣವಾಗುತ್ತಿದೆ. ಇಷ್ಟು ಪ್ರಜಾಸಂಖ್ಯೆ ಬೆಳೆಯುತ್ತಿದೆ. ಹೀಗೆ ಬೆಳೆಯುತ್ತಿರುವ ಪ್ರಜಾ ಸಂಖ್ಯೆಗೆ ಬೇಕಾಗಿರತಕ್ಕ ಎಲ್ಲ ಸೌಲಭ್ಯ, ಶಾಲೆ, ಕಾಲೇಜು, ಆಸ್ಪತ್ರೆ, ಅವರಿಗೆ ಬಟ್ಟೆ, ಆಹಾರ, ಎಲ್ಲವನ್ನೂ ಒದಗಿಸತಕ್ಕುದು ಸರ್ಕಾರದ ಜವಾಬ್ದಾರಿ ಇದೆ. ಆ ಕಾರಣದಿಂದಲೇ

ಇವೊತ್ತು ನಮ್ಮ ದೇಶದಲ್ಲಿ ರಾಷ್ಟ್ರ ಸಮಸ್ಯೆಗಳು ಯಾವುವು ಎನ್ನುವುದು ನಿರ್ಧಾರವಾಗಿದೆ. ಒಂದನೆಯದು ವ್ಯವಸಾಯ, ಎರಡನೆಯದು ಕುಟುಂಬ ಯೋಜನೆ. ಇವೆರಡೂ ರಾಷ್ಟ್ರೀಯ ಯೋಜನೆಗಳು.

ಶ್ರೀ ಕೆ. ತಮ್ಮಯ್ಯ:-

ಕುಟುಂಬ ಯೋಜನೆಯನ್ನು ಹೇಗೆ ಸಾಧಿಸಬೇಕು ಎನ್ನುವುದರಲ್ಲಿ ಲಾಭ ದೊರಕುವುದಕ್ಕೆ ಮದುವೆ ಆಗುವವರ ವಯಸ್ಸನ್ನು ಜಾಸ್ತಿ ಮಾಡಿದರೆ ಅನುಕೂಲವಾಗುವುದಿಲ್ಲವೆ?

ಶ್ರೀ ಕೆ. ಪುಟ್ಟಸ್ವಾಮಿ:-

ಕುಟುಂಬ ಯೋಜನೆಯನ್ನು ಹೇಗೆ ಸಾಧಿಸಬೇಕು ಎನ್ನುವುದರಲ್ಲಿ ಯಾವುದಾದರೂ ಒಂದೇ ಮಾರ್ಗ ಸರಿ ಎಂದು ನಾನು ಹೇಳುವುದಿಲ್ಲ. ಅದಕ್ಕೆ ನಾನಾ ವಿಧವಾದ ಉಪಾಯಗಳಿವೆ, ಆ ಉಪಾಯಗಳು ಎಂದರೆ, ಅವರವರ ತಿಳುವಳಿಕೆಗೆ ತಕ್ಕ ಹಾಗೆ, ಅವರವರ ಮನೋ ನಿರ್ಧಾರಕ್ಕೆ ತಕ್ಕ ಹಾಗೆ ಕುಟುಂಬ ಯೋಜನೆಯನ್ನು ಪಾಲಿಸಬಹುದು. ನಮ್ಮಲ್ಲಿ ಅನೇಕ ಗಂಡು ಮಕ್ಕಳು 25 ವರ್ಷವಾದರೂ ಮದುವೆ ಮಾಡಿಕೊಳ್ಳುತ್ತಿಲ್ಲ. ಅದಕ್ಕೆ ನಾನಾ ಕಾರಣಗಳಿವೆ. ಯಾರೂ ಕೂಡ ಚಿಕ್ಕವಯಸ್ಸಿನಲ್ಲಿ ಮದವೆ ಮಾಡಿಕೊಳ್ಳಲು ಆತುರಪಡುತ್ತಿಲ್ಲ. ನಮ್ಮ ಜವಾಬ್ದಾರಿಯನ್ನು ಅರಿತುಕೊಂಡು ನಾವು ಮದುವೆ ಮಾಡಿಕೊಳ್ಳಬೇಕೆಂಬ ತಿಳುವಳಿಕೆ ಬಂದಿರುವುದರಿಂದ ಮದುವೆ ಮಾಡಿಕೊಳ್ಳುವ ವಯಸ್ಸು ತನ್ನಷ್ಟಕ್ಕೆ ತಾನೇ ಜಾಸ್ತಿಯಾಗುತ್ತಿದೆ. ಮೊದಲನೆ ಮಗನಿಗೆ ಯಾವ ವಯಸ್ಸಿನಲ್ಲಿ ಮದುವೆಯಾಯಿತು, ಎರಡನೆ ಮಗನಿಗೆ ಯಾವ ವಯಸ್ಸಿನಲ್ಲಿ ಮದುವೆಯಾಯಿತು, ಕೊನೆ ಮಗನಿಗೆ ಯಾವ ವಯಸ್ಸಿನಲ್ಲಿ ಮದುವೆಯಾಯಿತು ಎನ್ನುವುದನ್ನು ನೋಡಿದರೆ ನಮಗೇ ಅರ್ಥವಾಗುತ್ತದೆ. ಪ್ರತಿ ಹತ್ತು ವರ್ಷಗಳಿಗೂ ಮನೋಭಿಪ್ರಾಯ ಬದಲಾಗುತ್ತಿದೆ. ಈಗ ಕುಟುಂಬ ಯೋಜನೆ ಉತ್ತಮವಾದುದು, ಯೋಗ್ಯವಾದುದು, ಎಲ್ಲರೂ ಪುರಸ್ಕರಿಸತಕ್ಕದು, ಮಾನ್ಯ ಮಾಡತಕ್ಕುದು, ಒಪ್ಪತಕ್ಕುದೂ ಆಗಿದೆ. ದೊಡ್ಡ ದೊಡ್ಡ ಮಹಾತ್ಮರು ಬೋಧಿಸಿದ್ದು ಸಂಯಮ. ಆದುದರಿಂದ ಯಾರಾದರೂ ನಮ್ಮ ಜನರ ಪೈಕಿ ಮಹನೀಯರು ಸಂಯಮದಿಂದಲೇ ಸಂತಾನ ನಿಯಂತ್ರಣಮಾಡುತ್ತೇವೆ ಎಂದರೆ ಯಾರೂ ಬೇಡ ಎಂದು ಹೇಳಿ ವ್ಯಾಸೆಕ್ಟಮಿ ಮಾಡಿಸಿಕೊಳ್ಳಿ ಎಂದು ಹೇಳುವುದಿಲ್ಲ. ವ್ಯಾಸೆಕ್ಟಮಿ ಮಾಡಿಸಿಕೊಳ್ಳಿ ಎಂದು ಹೇಳುವುದು ಸಂಯುಮದಿಂದ ಸಂತಾನ ನಿಯಂತ್ರಣ ಮಾಡುವುದಕ್ಕಾಗುವುದಿಲ್ಲ ಎನ್ನುವವರಿಗೆ ಮಾತ್ರ. ಆದುದರಿಂದ ಒಂದು ಸಂಯಮವನ್ನು ಅನುಸರಿಸಬೇಕು ಅಥವಾ ನಮಗೆ ವಿಜ್ಞಾನ ಒದಗಿಸಿರತಕ್ಕ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಬೇಕು.

ಶ್ರೀ ಹೆಚ್. ಸಿದ್ದವೀರಪ್ಪ:-

ಅದು ಜನರ ನೈತಿಕತೆಯ ಮೇಲೆ ಪರಿಣಾಮ ಉಂಟುಮಾಡುತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಈ ನೈತಿಕತೆ ವಿಚಾರ ಪುನಃ ವ್ಯಕ್ತಿಗೆ ಸಂಬಂಧಪಟ್ಟುದು. ಈ ಸಾಧನೆಗಳೆಲ್ಲ ಇಲ್ಲದೆ ಇದ್ದಾಗಲೂ ಮೊರೇಲ್ ಸರಿಯಾಗಿ ಇಟ್ಟುಕೊಂಡಿರುವವರೂ ಇದ್ದಾರೆ. ಇಟ್ಟುಕೊಳ್ಳದೆ ಇರುವವರೂ ಇದ್ದಾರೆ.

ಶ್ರೀ ಹೆಚ್. ಸಿದ್ದವೀರಪ್ಪ:-

ಕೆಲವು ಕಾಲೇಜುಗಳಲ್ಲಿ ಸ್ಟಾಟಿಸ್‌ಟಿಕ್ಸ್ ತೆಗೆದುಕೊಂಡು ಈ ಕುಟುಂಬ ಯೋಜನೆಯಿಂದ ಚಿಕ್ಕವಯಸ್ಸಿನವರ ಮೇಲೆ ಏನು ಪರಿಣಾಮವಾಗಿದೆ ಎನ್ನುವ ವಿಚಾರವಾಗಿ ಪತ್ರಿಕೆಗಳಲ್ಲಿ ಬಂದಿರುವುದನ್ನು ನಾವೆಲ್ಲ ನೋಡಿದ್ದೇವೆ.

ಶ್ರೀ ಕೆ. ಪುಟ್ಟಸ್ವಾಮಿ:-

ಕುಟುಂಬ ಯೋಜನೆಯ ಕಾರ್ಯ ಈ ಆರೇಳು ವರ್ಷಗಳಿಂದ ಮಾತ್ರ ನಡೆಯುತ್ತಿದೆ. ಆದರೆ ಮಾನ್ಯ ಸದಸ್ಯರಿಗೆ ತಿಳಿದಿರಬಹುದು, ಈ ಸಾಧನಗಳೆಲ್ಲ 25 ವರ್ಷದಿಂದಲೂ ಬಳಕೆಯಲ್ಲಿವೆ ಎಂದು. ಮತ್ತೆ ಇವೆಲ್ಲ ಅಂಗಡಿಗಳಲ್ಲಿ ಬೇಕಾದಷ್ಟು ದೊರೆಯುತ್ತಿತ್ತು. ಇವೊತ್ತು ಸರ್ಕಾರದವರು ಪುಕ್ಕಟೆ ಹಂಚುತ್ತಿರಬಹುದು. ಹಿಂದೆ ಅಂಗಡಿಗಳಲ್ಲಿ ದೊರೆಯುತ್ತಿದ್ದು ಬೇಕಾದವರು ಕೊಂಡುಕೊಳ್ಳುತ್ತಿದ್ದರು. ಈ ಸಾಧನಗಳು ಬಂದ ಮಾತ್ರಕ್ಕೆ ನಮ್ಮ ಮೊರೇಲ್ ಇಳಿಮುಖವಾಗುತ್ತಿದೆ ಎನ್ನುವುದನ್ನು ನಾನು ಒಪ್ಪುವುದಿಲ್ಲ.

ಶ್ರೀ ಬಿ. ರಾಮೇಗೌಡ (ದೊಡ್ಡಬಳ್ಳಾಪುರ):-

ಆಗ ಮನಸ್ಸಿನ ಹತೋಟಿ ಇತ್ತು, ಈಗ ಸಾಧನಗಳು ಬಂದವು.

ಶ್ರೀ ಕೆ. ಪುಟ್ಟಸ್ವಾಮಿ:-

ಹಿಂದೆ ನಡೆದಂಥ ವಿಚಾರಗಳೆಲ್ಲ ಗೊತ್ತಿರುವವರಿಗೆ ಮನಸ್ಸು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗುವ ಜನ ಎಷ್ಟು ಇದ್ದಾರೆ, ಆಗದೆ ಇರುವವರು ಎಷ್ಟು ಜನರಿದ್ದಾರೆ ಎಂದು ತಿಳಿದಿದೆ.

ಈಗ ಪ್ರಮುಖವಾದ ಸಮಸ್ಯೆ ಆಹಾರ ಉತ್ಪಾದನೆ, ಒಳ್ಳೆಯ ರೀತಿಯಲ್ಲಿ ವ್ಯವಸಾಯ ಮಾಡತಕ್ಕದ್ದು ಮತ್ತೆ ದೇಶದಲ್ಲಿ ಪ್ರಜಾಸಂಖ್ಯೆಯನ್ನು ಮಿತಿಗೊಳಿಸತಕ್ಕುದು. ಸಂತಾನವನ್ನು ಮಿತಿಗೊಳಿಸುವುದಕ್ಕೆ ಸಾಧನಗಳೆಲ್ಲ ಇವೆ. ಏನು ಕ್ರಮ ತೆಗೆದುಕೊಳ್ಳುತ್ತಿದ್ದೇವೆ ಅದನ್ನು ವಿವರವಾಗಿ ಹೇಳುವುದಕ್ಕೆ ಅಪೇಕ್ಷೆಪಡುವುದಿಲ್ಲ. ಬಹುಮಟ್ಟಿಗೆ ನಾವು ಯಶಸ್ಸನ್ನು ಸಾಧಿಸಿದ್ದೇವೆ ಎಂದು ಹೇಳುವುದಕ್ಕೆ ಸಂತೋಷಪಡುತ್ತೇನೆ...........

ಶ್ರೀ ಕೆ. ಪುಟ್ಟಸ್ವಾಮಿ:-

ನಮ್ಮಲ್ಲಿರತಕ್ಕ ಸೌಲಭ್ಯ ಬಹಳ ಕಡಿಮೆ ಇದೆ ಎಂದು ಆಗಲೇ ಹೇಳಿದೆ.

ಪೋಸ್ಟ್‌ಗ್ರಾಜ್ಯುಯೇಟ್ ರಿಸರ್ಚ್ ಇನ್‌ಸ್ಟಿಟ್ಯೂಟ್ ವಿಚಾರ ಹೇಳಿದರು, ನಾನು ಎರಡು ವರ್ಷದಿಂದ ನೋಡಿದ್ದೇನೆ, ಏನೂ ಆಗಿಲ್ಲ ಎಂದು ಹೇಳಿದರು. ಯಾವುದಾದರೂ ಒಂದು ಸಂಸ್ಥೆ ಸ್ಥಾಪನೆಯಾದರೆ, ಅದರಲ್ಲೂ ರಿಸರ್ಚ್ ಇನ್‌ಸ್ಟಿಟ್ಯೂಟ್ ಆದರೆ, ಅದು ಬಹಳ ವೇಗವಾಗಿ ಬರುವುದಿಲ್ಲ. ಆಳವಾಗಿ ರಿಸರ್ಚ್ ಮಾಡದಂತಹ ಪ್ರಯೋಗ ಹೊರಗೆ ಬರುವುದಿಲ್ಲ ಎಂಬುದನ್ನೂ ಅವರು ತಿಳಿದುಕೊಂಡಿದ್ದಾರೆ ಎಂದು ನಂಬಿದ್ದೇನೆ. ನಾವು ಪ್ರಯತ್ನ ಮಾಡುತ್ತಾ ಇದ್ದೇವೆ. ಆ ಇನ್‌ಸ್ಟಿಟ್ಯೂಟನ್ನು ಅಪ್‌ಗ್ರೇಡ್ ಮಾಡಿದ್ದೇವೆ. ಅಲ್ಲಿಗೆ ತಜ್ಞರಾದ ವೈದ್ಯರನ್ನು ಹಾಕಿದ್ದೇವೆ. ಲ್ಯಾಬೊರೇಟರಿಯನ್ನು ಉತ್ತಮಪಡಿಸುತ್ತಾ ಇದ್ದೇವೆ. ಅದನ್ನೆಲ್ಲಾ ಮಾಡಿ ಅದನ್ನು ಉತ್ತರೋತ್ತರ ಒಳ್ಳೆಯ ಪೋಸ್ಟ್ ಗ್ರಾಜ್ಯುಯೇಟ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಆಗಿ ಮಾಡಬೇಕೆಂದು ಸರ್ಕಾರದ ಸಂಕಲ್ಪ. ಅದಕ್ಕೆ ಕಾರ್ಯಕ್ರಮ ತೆಗೆದುಕೊಳ್ಳುತ್ತಾ ಇದ್ದೇವೆ. ಮತ್ತೆ ಈ ಒಂದು ಧಾಟಿಯಲ್ಲಿ ಎಲ್ಲವನ್ನೂ ವಿಚಾರಮಾಡಿ ಎಂದು ಹೇಳುವುದು ಒಂದು, ಒಂದು ನ್ಯಾಯಾಂಗ ಮಂಡಳಿಯನ್ನು ನೇಮಕ ಮಾಡಿ ವಿಚಾರಣೆ ಮಾಡಿಸಿ ಎನ್ನುವುದು ಇನ್ನೊಂದು, ಎಲ್ಲರಿಗೂ ಗೊತ್ತಿರತಕ್ಕ ವಿಚಾರಕ್ಕೆ ಏಕೆ ವಿಚಾರಣಾ ಕಮಿಟಿಗಳನ್ನು ಮಾಡಬೇಕು? ಆ ಪೋಸ್ಟ್‌ಗ್ರಾಜುಯೇಟ್ ಟ್ರೈನಿಂಗ್ ಕೋರ್ಸಿಗೆ ಅವಧಿ ಮೂರು ವರ್ಷ ಇರಬೇಕೆಂದು ಮಾಡಿದ್ದೇವೆ. ಅಲ್ಲಿ ಎಷ್ಟು ಜನ ರೋಗಿಗಳಿಗೆ ಚಿಕಿತ್ಸೆ ನಡೆಸಬಹುದು, ಅಲ್ಲಿಗೆ ರೋಗಿಗಳ ಸಂಖ್ಯೆ ಏನು ಎಂಬುದೆಲ್ಲಾ ಗೊತ್ತಿದೆ. ಹೀಗಿರುವಾಗ ಮುಂಗೈ ಹುಣ್ಣಿಗೆ ಕನ್ನಡಿಯೇಕೆ ಬೇಕು ಎನ್ನುವಂತೆ ಈ ಬಗ್ಗೆ ಯಾವ ನ್ಯಾಯ ವಿಚಾರಣೆಯನ್ನೂ ಮಾಡಬೇಕಾಗಿಲ್ಲ. ನಾವು ಇನ್ನು ಹತ್ತು ವರ್ಷಗಳ ಅವಧಿಯಲ್ಲಿ ಅದನ್ನು ಒಂದು ನಿಜವಾದ ರಿಸರ್ಚ್ ಇನ್‌ಸ್ಟಿಟ್ಯೂಟ್ ಎಂದು ಮಾಡಿದರೆ ಅಲ್ಲಿಗೂ ನಾವು ಒಂದು ಮಹತ್ಕಾರ್ಯವನ್ನು ಸಾಧಿಸಿದಂತೆಯೇ ಎಂದು ಹೇಳುತ್ತೇನೆ. ಆದುದರಿಂದ ನಮಗೆ ಯಾವುದನ್ನು ಮಾಡಬೇಕಾಗಿದ್ದರೂ ಸಾಕಷ್ಟು ಕಾಲಾವಕಾಶವನ್ನು ಕೊಟ್ಟು ಆನಂತರ ತಾವು ಅದನ್ನು ಮಾಡದಿದ್ದರೆ ಟೀಕೆ ಮಾಡಿ. ಆದುದರಿಂದ ಮುಂದಿನ ವರ್ಷದಲ್ಲಾದರೂ ಮತ್ತೆ ಇದೇ ಟೀಕೆಯನ್ನು ಮಾಡಿ ನೀವೇನು ಮಾಡಿದ್ದೀರಿ ಎಂದು ಕೇಳುವುದಕ್ಕೆ ಪ್ರಯತ್ನ ಮಾಡಬೇಡಿ. ಯಾವುದೇ ಒಂದು ವಿಷಯವಾಗಲಿ ಬೀಜ ನೆಟ್ಟು, ಅದು ಚಿಗುರಿ ಮರವಾಗಿ ಫಲ ಬಿಡುವುದಕ್ಕೆ ಕಾಲ ಬೇಕು. ಇನ್ನು ಅದೇ ಮಾನ್ಯ ಸದಸ್ಯರು ಲೈಫ್ ಡ್ರಗ್ಸ್ ಇರಲಿಲ್ಲ ಎಂದು ಹೇಳಿದರು. ಆದರೆ ಆ ಲೈಫ್ ಡ್ರಗ್ಗಿನಲ್ಲಿ ನೂರಾರು ಬಗೆಯ ಲೈಫ್ ಡ್ರಗ್ಸ್‌ಗಳು ಬಂದಿವೆ. ಆದರೆ ಅದು ಯಾವುದು ಎಂಬುದನ್ನು ಅವರು ಹೇಳಲಿಲ್ಲ, ಆದರೆ ಅವರು ಬಯಸಿದ್ದ ಲೈಫ್ ಡ್ರಗ್ಸ್ ಆ ಆಸ್ಪತ್ರೆಯಲ್ಲಿ ಆಗ ಇಲ್ಲದೆ ಇದ್ದರೂ ಇರಬಹುದು. ಆದರೆ ನಾನು ಇಷ್ಟು ಹೇಳುತ್ತೇನೆ - ನಮ್ಮ ಮಾನ್ಯ ಸದಸ್ಯರಾದ ಶ್ರೀ ಪುಟ್ಟದಾಸ್ ರವರು ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಯಾವುದೋ ಒಂದು ಭಾಗ ನೋಡಿ ಆ ಒಂದು ಕಡೆ ಕಂಡ ಚಿತ್ರವೇ ಎಲ್ಲ ಕಡೆಯಲ್ಲೂ ಇರುತ್ತದೆಂದು ಭಾವಿಸುವುದು ಸರಿಯಲ್ಲ. ಪೂರ್ಣ ಚಿತ್ರ ಹಾಗಿರುವುದಿಲ್ಲ. ನಾವು ಸಾಧ್ಯವಾದಮಟ್ಟಿಗೂ ಜನಸೇವೆಯನ್ನು ನಿಜವಾಗಿಯೂ ಸಲ್ಲಿಸುತ್ತಾ ಬಂದಿದ್ದೇವೆ. ಇನ್ನು ಅವರು ಸರ್ಕಾರದವರು ಈ ಆಸ್ಪತ್ರೆಗಳಿಗೆ ಕೊಡತಕ್ಕ ಹಣವೆಷ್ಟು ಎಂದು ಕೇಳಿದ್ದಾರೆ. ಬೆಂಗಳೂರಲ್ಲಿರತಕ್ಕ ವಿಕ್ಟೋರಿಯಾ ಆಸ್ಪತ್ರೆಗೆ 50 ಲಕ್ಷ ರೂಪಾಯಿಗಳು, ಮೈಸೂರಿನಲ್ಲಿರತಕ್ಕ ಆಸ್ಪತ್ರೆಗೆ 23 ಲಕ್ಷ ರೂಪಾಯಿಗಳು ಮತ್ತು ಮಂಗಳೂರಿನಲ್ಲಿರತಕ್ಕ ಆಸ್ಪತ್ರೆಗೆ 23 ಲಕ್ಷ ರೂಪಾಯಿಗಳನ್ನು ಖರ್ಚುಮಾಡಲಾಗುತ್ತಿದೆ. ಹಾಗೇ ಮಂಗಳೂರಿನಲ್ಲಿರತಕ್ಕ

ಕೆ.ಎಂ.ಸಿ.ಕಾಲೇಜಿಗೆ 22-23 ಲಕ್ಷ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದೇವೆ. ಹೀಗೆ ಜನರ ಆರೋಗ್ಯಕ್ಕಾಗಿ ಅವರ ಆರೋಗ್ಯದ ಸೌಲಭ್ಯಗಳ ಸಲುವಾಗಿ ಸರ್ಕಾರ ಹಣವನ್ನು ಹೆಚ್ಚಿನ ರೀತಿಯಲ್ಲಿ ಖರ್ಚುಮಾಡುತ್ತಿದೆ. ಈ ವಿಚಾರದಲ್ಲಿ ಎಲ್ಲ ಮಾನ್ಯ ಸದಸ್ಯರಿಗೂ ಜನಾರೋಗ್ಯದ ಬಗ್ಗೆ ಎಷ್ಟು ಅಭಿಮಾನ ಮತ್ತು ಜವಾಬ್ದಾರಿ ಇವೆಯೋ ನನಗೂ ಅಷ್ಟೇ ಅಭಿಮಾನ ಮತ್ತು ಜವಾಬ್ದಾರಿಗಳು ಇವೆ ಎಂದು ಹೇಳಿದರೆ ಸಾಕು.

ಇನ್ನು ಮಾನ್ಯ ಸದಸ್ಯರಾದ ಶ್ರೀ ವೀರಪ್ಪನವರು ಹಣವನ್ನೆಲ್ಲಾ ಬರೀ ದೊಡ್ಡ ಪಟ್ಟಣಗಳಲ್ಲೇ ಖರ್ಚುಮಾಡುತ್ತಿದ್ದಾರೆಂದೂ, ಮಂತ್ರಿಗಳು ಹಳ್ಳಿಯಲ್ಲೇ ಹುಟ್ಟಿದವರಾಗಿದ್ದರೂ ಅವರು ಪಟ್ಟಣಕ್ಕೆ ಬಂದಮೇಲೆ ಹಳ್ಳಿಗಳನ್ನು ಮರೆತಿದ್ದಾರೆಂದು ಅವರು ಹೇಳಿದರು. ಅದು ಸರಿಯಾದ ಮಾತಲ್ಲ. ಪ್ರತಿಯೊಂದು ಜಿಲ್ಲಾ ಮತ್ತು ತಾಲ್ಲೂಕ್ ಕಸಬಗಳಲ್ಲಿರತಕ್ಕ ಆಸ್ಪತ್ರೆಗಳು ಆಯಾ ಊರಿನ ಜನರ ಸ್ವತ್ತಲ್ಲ. ಅವು ಕೇವಲ ಅಲ್ಲಿರತಕ್ಕ ಜನರಿಗಾಗೇ ಮಾಡಿದವುಗಳಲ್ಲ. ಬೆಂಗಳೂರಿನ ಮೆದುಳು ಆಸ್ಪತ್ರೆಯಲ್ಲಿ ಹಾಲಿ ಇರತಕ್ಕ ರೋಗಿಗಳನ್ನು ನೋಡಿದರೆ ಅವರು ಯಾರೂ ಬೆಂಗಳೂರಿನವರೇ ಅಲ್ಲ ಎಂಬುದು ಕಾಣಬರುತ್ತದೆ. ಅಲ್ಲಿರತಕ್ಕ ರೋಗಿಗಳು ಇಡೀ ದೇಶದಿಂದ ಬಂದಿರತಕ್ಕವರಾಗಿದ್ದಾರೆ. ಆದುದರಿಂದ ಸಿಟಿಗಳಲ್ಲಿರತಕ್ಕ ಆಸ್ಪತ್ರೆಗಳು ಸಿಟಿಗಳಲ್ಲಿರತಕ್ಕ ಜನರಿಗೇ ಮೀಸಲಿಲ್ಲ. ಅಲ್ಲಿರತಕ್ಕ ರೋಗಿಗಳನ್ನು ನೋಡಿದರೆ ಅದರಲ್ಲಿ ನೂರಕ್ಕೆ 90 ಜನ ಗ್ರಾಮಾಂತರ ಪ್ರದೇಶದವರಾಗಿದ್ದಾರೆ. ಪಟ್ಟಣಗಳಲ್ಲಿರತಕ್ಕವರಿಗೆ ಅಲ್ಲಿಗಿಂತಲೂ ಉತ್ತಮ ಚಿಕಿತ್ಸೆ ದೊರೆಯತಕ್ಕ ನರ್ಸಿಂಗ್ ಹೋಮುಗಳು ಅನೇಕ ಇವೆ. ಅವರು ಅಲ್ಲಿ ಚಿಕಿತ್ಸೆ ಪಡೆಯುತ್ತಾರೆ. ಈ ರೋಗ ಉಲ್ಬಣ ಸ್ಥಿತಿಗೆ ಬರುವುದನ್ನು ತಡೆಗಟ್ಟಲು ಅವರಿಗೆ ನರ್ಸಿಂಗ್ ಹೋಮುಗಳ ಸೌಕರ್ಯ ಚೆನ್ನಾಗಿದೆ.

ಇನ್ನು ಶ್ರೀಮಾನ್ ನಂಜೇಗೌಡರು ಕ್ಷಯ ಚಿಕಿತ್ಸೆ ಆಸ್ಪತ್ರೆಯಲ್ಲಿ ಸರಿಯಾಗಿ ಡಿ.ಡಿ.ಟಿ.ಯನ್ನೂ ಕೂಡ ಸ್ಪ್ರೇ ಮಾಡುತ್ತಿಲ್ಲ ಎಂದು ಹೇಳಿದರು. ನಾವು ಎಲ್ಲ ಕಡೆಗೂ ಸಾಕಷ್ಟು ಸರಬರಾಯಿ ಮಾಡಿದ್ದೇವೆ. ಅದನ್ನು ಹಾಕುತ್ತಲೂ ಇದ್ದಾರೆ. ಹಾಗೇ ಪ್ರೈಮರಿ ಹೆಲ್ತ್ ಸೆಂಟರುಗಳಿಗೂ ಅದನ್ನು ಸಾಕಷ್ಟು ಸರಬರಾಯಿ ಮಾಡಿದ್ದೇವೆ. ಹಿಂದೆ ಕ್ಷಯರೋಗ ಬಂದರೆ ಜನರು ಬಹಳ ಹೆದರುತ್ತಿದ್ದರು. ಈ ದಿವಸ ಆ ಭಯವಿಲ್ಲ. ಅದಕ್ಕೆ ಒಳ್ಳೊಳ್ಳೆ ಔಷಧಿಗಳು ಬಂದಿವೆ. ಈ ರೋಗವನ್ನು ಬಹಳ ಸುಲಭವಾಗಿ ಮನೆಯಲ್ಲೇ ಇದ್ದುಕೊಂಡು ಚಿಕಿತ್ಸೆ ಪಡೆದು ವಾಸಿಮಾಡಿಕೊಳ್ಳಬಹುದು. ಅದಕ್ಕೆಲ್ಲಾ ಈ ದಿವಸ ಅವಕಾಶವಿದೆ. ಆದುದರಿಂದ ಕ್ಷಯದಾಸ್ಪತ್ರೆಗಳಲ್ಲಿ ಬೆಡ್ಡುಗಳನ್ನು ಹೆಚ್ಚಿಸತಕ್ಕ ಅಗತ್ಯವಿಲ್ಲ. ಈ ಆಸ್ಪತ್ರೆಗಳನ್ನೂ ಕೂಡ ಹೆಚ್ಚಿಸತಕ್ಕ ಅಗತ್ಯವಿಲ್ಲವೆಂದು ಹೇಳುತ್ತೇನೆ.

ಇನ್ನು ಶ್ರೀಮಾನ್ ಪುಟ್ಟದಾಸ್ ಅವರು ಜನನ ಕಾಲಕ್ಕೆ ಬೇಕಾಗುವ ಸ್ಪಿರಿಟ್ ಸಹಾ ಅನೇಕ ಆಸ್ಪತ್ರೆಗಳಲ್ಲಿ ಇರುವುದಿಲ್ಲ ಎಂದು ಹೇಳಿದರು. ಆದರೆ ಶ್ರೀಮಾನ್ ಪುಟ್ಟದಾಸ್ ಅವರು ಇನ್ನೂ ಆ ಗೈನೋಕಾಲಜಿಯಲ್ಲಿ ತೇರ್ಗಡೆ ಹೊಂದಿಲ್ಲವೆಂದು ಕಾಣುತ್ತದೆ. ಅವರು ಹೇಳುತ್ತಿರುವುದು ಬಹಳ ಓಬೀರಾಯಕಾಲದ ಪದ್ಧತಿಯನ್ನು ಈಗಲೂ ಹೇಳುತ್ತಿದ್ದಾರೆ. ಈ ದಿವಸ ಅದರಲ್ಲಿ

ಬಹಳ ಮಾಡರನ್ ಔಷಧಿಗಳು ಬಂದಿವೆ. ಈ ದಿವಸ ಡೆಟಾಲ್ ಅನ್ನುವುದರ ಹೆಸರು ಯಾರಿಗೆ ಗೊತ್ತಿಲ್ಲ? ಈ ದಿವಸ ಅನೇಕರು ತಮ್ಮ ತಮ್ಮ ಮನೆಗಳಲ್ಲಿ ಕೈಗಳನ್ನು ಶುದ್ಧವಾಗಿ ತೊಳೆಯಲು ಈ ಡೆಟಾಲನ್ನು ಉಪಯೋಗಿಸುತ್ತಿದ್ದಾರೆ. ಆದರೆ ಶ್ರೀಮಾನ್ ಪುಟ್ಟದಾಸ್‌ರವರು ಇದನ್ನು ಇನ್ನೂ ಹೆಚ್ಚು ಮಾಡಬೇಕೆಂದು ಹೇಳಿರುವುದರಿಂದ ಅವರು ಇದರ ಬಗ್ಗೆ ಚೆಲ್ಲಿರತಕ್ಕ ಬೆಳಕಿಗಾಗಿ ಅವರಿಗೆ ನನ್ನ ಶ್ಲಾಘನೆಯುಂಟು. ಅವರು ಮಾತನಾಡತಕ್ಕ ಕಾಲದಲ್ಲಿ ಅವರು ಒಂದು ಪ್ರಚಾರಕ್ಕಾಗಿ ಮಾತನಾಡದೆ ಅತ್ತಕಡೆ ಜನರ ಮತ್ತು ಸರ್ಕಾರದವರು ಗಮನವನ್ನು ಸೆಳೆಯುವುದಕ್ಕಾಗಿ ಮಾತನಾಡುತ್ತಿದ್ದೇನೆಂದು ಹೇಳಿದರು. ಆದರೆ ನಾನು ನಮ್ಮ ಇಲಾಖೆಯಲ್ಲಿ ಎಲ್ಲವೂ ಸಮರ್ಪಕವಾಗಿದೆ, ತೃಪ್ತಿಕರವಾಗಿದೆ ಎಂದು ಹೇಳಿ ನಾವು ಇಲ್ಲಿ ಕೈಕಟ್ಟಿ ಕುಳಿತುಕೊಳ್ಳುವುದಿಲ್ಲ. ಮಾನ್ಯ ಸದಸ್ಯರಲ್ಲಿ ಆ ಭಾವನೆಗೆ ಅವಕಾಶವಿಲ್ಲ. ಇವುಗಳ ಮಟ್ಟವನ್ನು ಇನ್ನೂ ಹೆಚ್ಚಿಸುವುದಕ್ಕೆ ಸಾಧ್ಯವಾದಷ್ಟೂ ಪ್ರಯತ್ನಮಾಡುವುದಾಗಿ ತಮಗೆಲ್ಲರಿಗೂ ಭರವಸೆಯನ್ನು ಕೊಡುತ್ತೇನೆ. ಹಾಗೇ ಇನ್ನು ಶ್ರೀ ನಂಜೇಗೌಡರಿಗೆ ಒಂದು ಮಾತನ್ನು ಹೇಳಬೇಕಾಗಿದೆ. ಈ ಸಭೆಯಲ್ಲಿ ಯಾವ ಒಬ್ಬ ಸದಸ್ಯರಿಗಾಗಲೀ ಅವರು ಇನ್ನೊಬ್ಬರಿಗೆ ಬೋಧೆ ಮಾಡತಕ್ಕ ಅವಕಾಶವಿಲ್ಲ, ಆ ಹಕ್ಕೂ ಇಲ್ಲ. ಅಂಥ ಒಂದು ತಪ್ಪು ಭಾವನೆ ಇಟ್ಟುಕೊಂಡು ಅವರು ಮಾತನಾಡಿದ್ದಾರೆ. ಸರ್ಕಾರ ಒಂದು ನ್ಯಾಯಾಂಗ ಸಮಿತಿಯನ್ನು ನೇಮಕ ಮಾಡಲಿ ನಾನು ಆ ಕೇಸನ್ನು ರುಜುವಾತು ಮಾಡುತ್ತೇನೆಂದು ಅವರು ಹೇಳಿದ್ದಾರೆ. ನಾನು ಈ ಮನೆಯ ಸದಸ್ಯನಾಗಿ ಇಲ್ಲಿ 16-17 ವರ್ಷಗಳಿಂದಲೂ ಕೆಲಸ ಮಾಡುತ್ತಾ ಬಂದಿದ್ದೇನೆ. ಎಂದೂ ಇವರು ಕೇಳತಕ್ಕ ರೀತಿಯಲ್ಲಿ ಯಾವತ್ತೂ ಇಲ್ಲಿ ಒಂದು ಜುಡಿಷಿಯಲ್ ಎನ್‌ಕ್ವೈರಿ ಆದುದನ್ನು ನಾನು ನೋಡಿಲ್ಲ.

ಶ್ರೀ ಹೆಚ್. ಸಿದ್ದವೀರಪ್ಪ:-

ಅದೇಕೆ ಇದೇ ವಿಧಾನಸಭಾ ಕಟ್ಟಡದ ಬಗ್ಗೆ ವಿಚಾರಣೆ ನಡೆಯಲಿಲ್ಲವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಹಿಂದೆ ಈ ಖಾತೆಯ ಜವಾಬ್ದಾರಿಯನ್ನು ವಹಿಸಿಕೊಂಡಿದ್ದ ಸನ್ಮಾನ್ಯರು ಲೆಕ್ಚರರೊಬ್ಬರನ್ನು ರೀಡರನ್ನಾಗಿ ಮಾಡಿ ಅವರಿಂದ 6 ಸಾವಿರ ರೂಪಾಯಿಗಳ ಲಂಚವನ್ನು ಪಡೆದುಕೊಂಡರೆಂದು ಹೇಳಿದ್ದಾರೆ. ಆದರೆ ನಾನು ಅವರಿಗೆ ಸವಿನಯವಾಗಿ ಹೇಳುವುದಿಷ್ಟೇ ಅದು ಸರಿಯಲ್ಲ, ಅವರು ಹೇಳಿದ್ದು ನಿಜವಲ್ಲ.

ಶ್ರೀ ಎಚ್.ಎನ್. ನಂಜೇಗೌಡ:-

ತಾವು ಅದನ್ನು ಯಾವ ಆಧಾರದ ಮೇಲೆ ನಿಜವಲ್ಲ ಎಂದು ಹೇಳುತ್ತೀರಿ?

ಶ್ರೀ ಕೆ. ಪುಟ್ಟಸ್ವಾಮಿ:-

ಯಾವುದಾದರೂ ಒಂದು ವಿಚಾರ ವಿಚಾರಣೆಗೆ ಒಳಗಾಗಬೇಕಾಗಿದ್ದರೆ ಶ್ರೀಮಾನ್ ಸಿದ್ದವೀರಪ್ಪನವರು ಹಿಂದೆ ಗೃಹಮಂತ್ರಿಗಳಾಗಿದ್ದವರು ಅವರಿಗೆ ಗೊತ್ತಿದೆ, ಅದರಲ್ಲಿ ಮೊದಲು

ಒಂದು ಪ್ರೈಮಾಫೇಸಿ ಕೇಸ್ ಎಸ್ಟಾಬ್ಲಿಷ್ ಆಗಬೇಕು. ಮೊದಲು ಅಂಥ ಒಂದು ಪ್ರೈಮಾಫೇಸಿ ಕೇಸ್ ಎಸ್ಟಾಬ್ಲಿಷ್ ಆಗಲಿ ಆನಂತರ ವಿಚಾರಣೆ ಮಾಡೋಣ. ಒಂದು ಮೆಡಿಕಲ್ ಎಗ್ಸಾಮಿನೇಷನ್.......

**Sri H.N. NANJE GOWDA:-**

For two years, the previous Health Minister did not implement the teaching cadre and recruitment rules. Don't you agree with it? What was the secret behind it?

ಶ್ರೀ ಕೆ. ಪುಟ್ಟಸ್ವಾಮಿ:-

ಶ್ರೀಮಾನ್ ನಂಜೇಗೌಡರು ಸ್ವಲ್ಪ ಸಾವಧಾನರಾಗಿ ಕುಳಿತುಕೊಳ್ಳಲಿ, ನಾನು ಹೇಳುವುದನ್ನು ಕೇಳಲಿ. ಆಗ ಆ ರೂಲ್ಸ್‌ನ್ನು ಜಾರಿಗೆ ತಾರದೆ ಇರುವುದಕ್ಕೆ ಬೇರೆ ಕೆಲವು ಕಾರಣಗಳಿದ್ದವು.........

ಇನ್ನೊಂದು ಪ್ರಾಮುಖ್ಯವಾದ ವಿಚಾರ. ಆಯುರ್ವೇದಕ್ಕೆ ಸಂಬಂಧಪಟ್ಟ ವಿಚಾರ. ಆಯುರ್ವೇದ ಶಿಕ್ಷಣಕ್ಕೆ ಸಂಬಂಧಪಟ್ಟ ವಿಚಾರವನ್ನು ಮಾತನಾಡುವಾಗ ಶ್ರೀಮಾನ್ ಎಸ್.ಎಸ್. ಶೆಟ್ಟರು ಹೇಳಿದರು. ಇಂಟಿಗ್ರೇಟೆಡ್ ಸಿಸ್ಟಂನಲ್ಲಿ ಬೇರೆ ಪದ್ಧತಿಯ ಶಿಕ್ಷಣವನ್ನು ಏತಕ್ಕೆ ಕೊಡಬಾರದು ಎಂದು. ಈ ವಿಚಾರದಲ್ಲಿ ನಾನು ಒಂದು ವಿಷಯವನ್ನು ಹೇಳುತ್ತೇನೆ. ಇಂಟಿಗ್ರೇಟೆಡ್ ಸಿಸ್ಟಂನಲ್ಲಿ 10 ವರ್ಷಗಳಿಂದ ಶಿಕ್ಷಣ ಕೊಟ್ಟು ಅದರ ಪರಿಣಾಮ ಏನಾಗಿದೆ ಎಂಬುದನ್ನು ನಾನು ಬಲ್ಲೆ. ಇಂಟಿಗ್ರೇಟೆಡ್ ಸಿಸ್ಟಂ ಬಂದಮೇಲೆ ಜನಗಳಿಗೆ ಲಾಭ ಅಥವಾ ನಷ್ಟವಾಗಿದೆ ಎನ್ನುವ ಮಾತಿಗೆ ನಾನು ಹೋಗುವುದಿಲ್ಲ. ಇಂಟಿಗ್ರೇಟೆಡ್ ಸಿಸ್ಟಂನಲ್ಲಿ ಪ್ರಾಕ್ಟೀಸ್ ಮಾಡುವುದಕ್ಕೆ ಅವಕಾಶ ಕೊಡಬೇಕು, ಆಂಟಿಬಯಾಟಿಕ್ಸ್ ಇಂಜಕ್ಷನ್‌ಗಳನ್ನು ನೀಡಲು ನಮಗೆ ಅವಕಾಶಬೇಕು ಎಂದು ಈಗ ಆಯುರ್ವೇದ ವಿದ್ಯಾರ್ಥಿಗಳು ಹೇಳುತ್ತಾರೆ. ಅದನ್ನು ಕೊಡಬಾರದು ಎಂದು ನಾನು ಹೇಳುವುದಿಲ್ಲ. ಆದರೆ ಸಾಕಷ್ಟು ಶಿಕ್ಷಣ ಇಲ್ಲದೆ, ಮಾಹಿತಿ ಇಲ್ಲದೆ ಮನುಷ್ಯನ ಮೇಲೆ ಆ ವೈದ್ಯ ಪದ್ಧತಿಯಲ್ಲಿ ಪ್ರಯೋಗ ಮಾಡಬಾರದು. ಈ ಒಂದು ಆಂಟಿಬಯಾಟಿಕ್ಸ್ ಇಂಜಕ್ಷನ್ ಅನ್ನು ಸರಿಯಾದ ಪ್ರಮಾಣದಲ್ಲಿ, ಯೋಗ್ಯತೆ ಅರಿತು ಅದನ್ನು ಕೊಡದೇ ಹೋದರೆ ಅದು ಪ್ರಾಣಕ್ಕೇ ಕಂಟಕವಾಗುತ್ತದೆ ಎಂಬುದು ಗೊತ್ತಿದೆ. ಯಾವ ವಿಚಾರವನ್ನು ತಿಳಿಯದೆ, ಪ್ರಯೋಗವನ್ನು ಮಾತ್ರ ತಿಳಿದುಕೊಂಡು ಔಷಧಿಯನ್ನು ಕೊಡುವುದು ಬಹಳ ತೊಂದರೆಯಾಗುತ್ತದೆ. ಇತ್ತ ಆಯುರ್ವೇದವನ್ನೂ ಕಲಿಯದೆ, ಅಲೋಪಥಿಯನ್ನೂ ಕಲಿಯದೆ, ಅರ್ಧಮರ್ಧ ವೈದ್ಯವನ್ನು ಕಲಿತು ಪ್ರಯೋಗಕ್ಕೆ ಅವಕಾಶವನ್ನು ಕೊಡಿ ಎಂದರೆ ಅದಕ್ಕೆ ಅವಕಾಶವನ್ನು ನೀಡುವುದು ನಮ್ಮ ಉದ್ದೇಶವಲ್ಲ.

ಶ್ರೀ ಎಸ್.ಎಸ್. ಶೆಟ್ಟರ್:-

ಅಲೋಪಥಿಯಾಗಲೀ, ಹೋಮಿಯೋಪಥಿಯಾಗಲೀ ಅಥವಾ ಆಯುರ್ವೇದವಾಗಲೀ ರೋಗಗಳನ್ನು ಕಂಡುಹಿಡಿಯತಕ್ಕ ಸಾಧನೆ ಅಥವಾ ಸಿದ್ಧಾಂತ ಒಂದೇ. ಎಲ್ಲಾ ಪ್ರಯೋಗಗಳನ್ನೂ

ತಿಳಿದುಕೊಂಡು ಯಾವುದೇ ಪ್ರಯೋಗವನ್ನು ಮಾಡಿದರೂ ಕೂಡ ಡಾಕ್ಟರು ಖಾಯಿಲೆಯನ್ನು ಡಯಾಗನೈಜ್ ಮಾಡಿ, ಅಲೋಪಥಿಯಾಗಲೀ ಆಯುರ್ವೇದವಾಗಲೀ ಯಾವುದೇ ಪದ್ಧತಿಯಿಂದಾಗಲೀ ಖಾಯಿಲೆಯನ್ನು ಗುಣಪಡಿಸಬಹುದು.

**ಶ್ರೀ ಕೆ. ಪುಟ್ಟಸ್ವಾಮಿ:-**

ನಿಜ ಖಾಯಿಲೆಯನ್ನು ಡಯಾಗನೈಜ್ ಮಾಡಬಹುದು. ಸರ್ಕಾರದವರು ನಾಲ್ಕು ಮೆಡಿಕಲ್ ಕಾಲೇಜುಗಳನ್ನು ಸ್ಥಾಪನೆ ಮಾಡಿದ್ದಾರೆ. ಸಾರ್ವಜನಿಕರು 5 ಮೆಡಿಕಲ್ ಕಾಲೇಜುಗಳನ್ನು ಸ್ಥಾಪನೆ ಮಾಡಿದ್ದಾರೆ. ಆದ್ದರಿಂದ ವೈದ್ಯರಾಗಬೇಕೆಂದು ಬಯಸುವವರು ಕಾಲೇಜಿಗೆ ಸೇರಲಿ ವಿದ್ಯಾಭ್ಯಾಸವನ್ನು ಪಡೆದುಕೊಂಡು ಬಂದು ವೈದ್ಯವೃತ್ತಿಯನ್ನು ನಡೆಸಲಿ. ಶುದ್ಧ ಆಯುರ್ವೇದ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡಬೇಕೆಂಬುದೇ ಸರ್ಕಾರದ ಉದ್ದೇಶ ಮತ್ತು ನೀತಿಯಾಗಿದೆ. ಆಯುರ್ವೇದದಲ್ಲಿ ನಾನೇನು ತಜ್ಞನೂ ಅಲ್ಲ, ಅದರ ಬಗ್ಗೆ ವ್ಯಾಖ್ಯಾನ ಮಾಡುವ ಶಕ್ತಿ ನನಗೆ ಇಲ್ಲ. ಆದರೆ ನಾನು ತಿಳಿದುಕೊಂಡಿರುವ ಹಾಗೆ ಆಯುರ್ವೇದ ಪದ್ಧತಿಯ ಚಿಕಿತ್ಸೆಯನ್ನು ಕೊಡುವ ಡಾಕ್ಟರ ಹತ್ತಿರ ಹೋದರೆ ಅವರು ಖಾಯಿಲೆಗೆ ಮೂಲಿಕೆಗಳನ್ನು ಕೊಡುತ್ತಾರೆ, ಕಷಾಯ ಕೊಡುತ್ತಾರೆ, ಭಸ್ಮ ಕೊಡುತ್ತಾರೆ. ಅನೇಕರಿಗೆ ಅನುಭವ ಇರಬಹುದು. ಕೆಲವು ಆಯುರ್ವೇದ ಡಾಕ್ಟರ ಹತ್ತಿರ ಹೋದರೆ ಜ್ವರ ಬಂದಿದೆ ಎಂದು ಹೇಳಿದರೆ ಆಹಾರವನ್ನು ತೆಗೆದುಕೊಳ್ಳಬಹುದು ಎಂದು ಹೇಳುತ್ತಾರೆ. ಅನ್ನ ತಿನ್ನಿ ಎಂದು ಹೇಳುತ್ತಾರೆ. ಆಯುರ್ವೇದ ವೈದ್ಯಕ್ಕೆ ಮೊದಲನೆಯದು ಪಥ್ಯ ಇರಬೇಕು. ಈ ರೀತಿಯಾಗಿ ಆಯುರ್ವೇದ ಡಾಕ್ಟರರಲ್ಲಿ ಈಗ ನಾನಾ ತರಹ ಚಿಕಿತ್ಸೆಯನ್ನು ಕೊಡುವ ಪದ್ಧತಿ ಇದೆ. ಮೂಲಂಗಿಯನ್ನು ಉಪಯೋಗಿಸುವುದರಿಂದ ಕಾಮಾಲೆ ರೋಗ ಹೋಗುತ್ತದೆ ಎಂದು ಹೇಳುತ್ತಾರೆ. ಅದೇ ಅಲೋಪಥಿ ವೈದ್ಯಕ್ಕೆ ಎಷ್ಟೋ ಹಣವನ್ನು ಖರ್ಚುಮಾಡಬೇಕಾಗುತ್ತದೆ ಇಂಥಾದ್ದು ವೈದ್ಯವಿಧಾನ ಇದರಲ್ಲಿ ಇದೆ. ಈ ದೃಷ್ಟಿಯಿಂದ ಆಯುರ್ವೇದ ವೈದ್ಯಕೀಯ ಪದ್ಧತಿಯನ್ನು ಬಳಕೆಗೆ ತರಬೇಕು, ಆದರಿಂದ ಜನಗಳಿಗೆ ಉಪಯೋಗವಾಗಬೇಕು ಎನ್ನುವ ದೃಷ್ಟಿಯಿಂದ ಆಯುರ್ವೇದ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕೆಂಬುದೇ ಸರ್ಕಾರದ ಸಂಕಲ್ಪ. ಆದರಲ್ಲಿಯೂ ಶುದ್ಧ ಆಯುರ್ವೇದಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡಬೇಕೆಂಬ ದೃಷ್ಟಿಯಿಂದ ಸರ್ಕಾರದವರು 1964ರಲ್ಲಿ ಶುದ್ಧ ಆಯುರ್ವೇದ ಡಿಪ್ಲೋಮಾ ಕೋರ್ಸ್ ಮತ್ತು ಆಯುರ್ವೇದ ಕಾಲೇಜನ್ನು ತೆರೆದರು. ಇಂಟಿಗ್ರೇಟೆಡ್ ಸಿಸ್ಟಂ ಆಯುರ್ವೇದವನ್ನು ಕಲಿತಿರುವವರಿಗೆ ಶುದ್ಧ ಆಯುರ್ವೇದ ಎಂದರೆ ಕೋಪ. ಅವರು ಆಯುರ್ವೇದ ಎಂದು ಹೇಳಿಕೊಳ್ಳುವ ಸ್ಥಿತಿಯಲ್ಲಿಲ್ಲ. ಇಂಡಿಯನ್ ಮೆಡಿಕಲ್ ಕೌನ್ಸಿಲ್‌ನವರು ಈ ಆಯುರ್ವೇದ ಡಿಗ್ರಿ ಕೋರ್ಸ್‌ನ್ನು ಬಿ.ಎಸ್.ಬಿ.ಐ.ಎಂ. ಎಂದು ಹೇಳುತ್ತಾರೆ. ನಾವು ಬಿ.ಎಸ್.ಎ.ಎಂ. ಎಂದು ಹೇಳುತ್ತೇವೆ. ಯೂನಿವರ್ಸಿಟಿಯವರು ಏನು ಹೇಳುತ್ತಾರೆ ಅದನ್ನು ಕೇಳುತ್ತೇವೆ ಎಂದು ಹೇಳಿದ್ದೇವೆ. ನಮ್ಮಲ್ಲಿ ಶುದ್ಧ ಆಯುರ್ವೇದ ಕಲಿಸುವುದನ್ನು ಬದಲಾಯಿಸುವುದಕ್ಕಾಗುವುದಿಲ್ಲ. ಈಗ ನಾಲ್ಕು ವರ್ಗಗಳಿಂದ ಶುದ್ಧ ಆಯುರ್ವೇದವನ್ನು ಕಲಿಸಬೇಕು ಎನ್ನುವ ನೀತಿಯನ್ನು ಸರ್ಕಾರ ಹಾಕಿಕೊಂಡಿದೆ. ಆದ್ದರಿಂದ ಶುದ್ಧ ಆಯುರ್ವೇದ ವಿನಾ ಬೇರೆ ವಿಧಾನವನ್ನು ಈ ಕೋರ್ಸಿನಲ್ಲಿ ಕಲಿಸುವುದಕ್ಕೆ ಹೋಗುವುದಿಲ್ಲ. ಶುದ್ಧ

ಆಯುರ್ವೇದವನ್ನು ಕಲಿಯುತ್ತೇವೆಂದು ಒಂದು ಅಸಂತರ ತಕರಾರು ಮಾಡುವುದು ಸರಿಯಲ್ಲ. ಆಯುರ್ವೇದ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕೆಂದು ಈ ಬಗ್ಗೆ ಯೋಗ್ಯ ಶಿಕ್ಷಣ ದೊರಕಿಸಲು ಎಲ್ಲಾ ಕ್ರಮಗಳನ್ನು ಕೈಗೊಳ್ಳಲಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದವರು ಆಯುರ್ವೇದ ಕಾಲೇಜನ್ನು ತೆರೆಯಲು ಒಪ್ಪಿಕೊಂಡಿದ್ದಾರೆ. ಮತ್ತು ಈ ಬಗ್ಗೆ ಒಂದು ಅಧ್ಯಯನ ಮಂಡಲಿಯನ್ನು ಸಹ ರಚಿಸಿದೆ. ಯಾರು ಡಿಪ್ಲೊಮಾ ಓದುವುದಕ್ಕೆ 1964 ರಿಂದ 1967ರ ವರೆಗೆ ಸೇರಿದ್ದಾರೆಯೋ ಅವರಿಗೆ ಸಂಕ್ಷಿಪ್ತ ಪದವಿ ಶಿಕ್ಷಣ ಪಡೆಯುವುದಕ್ಕೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಅರ್ಜಿ ಹಾಕಿದ್ದಾರೆ. ಅವರು ಅವುಗಳನ್ನು ಪರಿಶೀಲನೆ ಮಾಡುತ್ತಿದ್ದಾರೆ. ಒಂದು ವಿಚಾರವನ್ನು ಮರೆಯಬಾರದು. ಈ ರೀತಿಯ ಶಿಕ್ಷಣವನ್ನು ಕೊಡಬೇಕೆಂಬ ಒಂದು ಉತ್ಸಾಹದಲ್ಲಿ ನಮಗಿರತಕ್ಕಂಥ ಲಿಮಿಟೇಷನ್ ಮರೆಯಬಾರದು. ನಮ್ಮಲ್ಲಿ ಪಾಠ ಹೇಳತಕ್ಕಂಥ ತಜ್ಞರು ಮತ್ತು ಅನುಭವಶಾಲಿಗಳು ಬಹಳ ಮಟ್ಟಿಗೆ ಕಡಿಮೆಯಿದ್ದಾರೆ. ಮೈಸೂರು ರಾಜ್ಯದಲ್ಲಿ 1908 ರಿಂದಲೂ ಆಯುರ್ವೇದದ ವೈದ್ಯಕೀಯಕ್ಕೆ ಪ್ರೋತ್ಸಾಹ ಕೊಟ್ಟು ಕಾಲೇಜನ್ನು ನಡೆಸಿಕೊಂಡು ಬಂದಿದ್ದಾರೆ. ಈಗ ಮೈಸೂರಿನಲ್ಲಿ ಒಂದು ಕಾಲೇಜು ಮತ್ತು ಬೆಂಗಳೂರಿನಲ್ಲಿ ಒಂದು ಕಾಲೇಜು ಆಯುರ್ವೇದಕ್ಕೆ ಸಂಬಂಧಪಟ್ಟಂತೆ ಇವೆ. ಈ ಎರಡು ಕಾಲೇಜುಗಳಿಗೆ ತಜ್ಞರಾದಂಥ ಉಪಾಧ್ಯಾಯರನ್ನು ಒದಗಿಸಿಕೊಡುವುದು ಕಷ್ಟವಾಗಿದೆ. ಯೂನಿವರ್ಸಿಟಿಯ ಒಪ್ಪಿಗೆ ಪಡೆದು ನಮ್ಮ ಸರ್ಕಾರದವರು ಇಂಟಿಗ್ರೇಟೆಡ್ ಕೋರ್ಸ್ ನಡೆಸುವುದಾದರೆ ಪೋಸ್ಟ್ ಗ್ರಾಜುಯೇಟ್ ಇನ್ಸ್‌ಟ್ಯೂಷನ್ ಕೊಡುತ್ತೇವೆಂದು ಕೇಂದ್ರ ಸರ್ಕಾರದವರು ಹೇಳಿದ್ದಾರೆ. ಬೆಂಗಳೂರಿನಲ್ಲಿ ಎಷ್ಟು ಕಾಲೇಜುಗಳನ್ನು ನಡೆಸುವುದಕ್ಕೆ ಅವಕಾಶವಿದೆಯೆಂಬುದು ತಮಗೆಲ್ಲಾ ಗೊತ್ತಿದೆ. ಈಗ ಬೆಂಗಳೂರಿನಲ್ಲಿ ಒಂದು ಆಯುರ್ವೇದದ ಕಾಲೇಜನ್ನು ಪ್ರಾರಂಭ ಮಾಡಿದ್ದೇವೆ. 250 ಬೆಡ್‌ಗಳು ಇರುವಂಥ ಒಂದು ಸುಸಜ್ಜಿತವಾದಂಥ ಆಸ್ಪತ್ರೆಯಿದೆ. ವಿದ್ಯಾರ್ಥಿಗಳಿರುವುದಕ್ಕೆ ಹಾಸ್ಟಲ್ ಇದೆ. 6-8 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಕಟ್ಟಿಸಿರುವಂಥ ಒಂದು ಸೆಂಟ್ರಲ್ ಫಾರ್ಮಸಿಯಿದೆ. ಹರ್ಬಲ್ ಗಾರ್ಡನ್ ಇದೆ. ಬೆಂಗಳೂರು ರಾಜಧಾನಿಯ ಕೇಂದ್ರವಾಗಿದೆ. ಮುಂದೆ ಪೋಸ್ಟ್ ಗ್ರಾಜುಯೇಟ್ ಇನ್ಸ್ಟಿಟ್ಯೂಷನ್ ನಡೆಸುವುದಕ್ಕೆ ಬೆಂಗಳೂರು ಯೋಗ್ಯವಾದ ಸ್ಥಳವಾಗಿರುವುದರಿಂದ ಸದ್ಯಕ್ಕೆ ಒಂದು ಆಯುರ್ವೇದದ ಕಾಲೇಜನ್ನು ಪ್ರಾರಂಭ ಮಾಡಿದ್ದೇವೆ. ಇಷ್ಟೆಲ್ಲಾ ಅನುಕೂಲಗಳಿದ್ದರೆ ಒಂದು ಕಾಲೇಜನ್ನು ಪ್ರಾರಂಭ ಮಾಡಬಹುದೇ ಹೊರತು, ಕೇವಲ ಬೆಂಚ್ ಮತ್ತು ಕುರ್ಚಿಗಳಿದ್ದರೆ ಪ್ರಾರಂಭಮಾಡುವುದಕ್ಕಾಗುವುದಿಲ್ಲ. ಉತ್ತರ ಕರ್ನಾಟಕದಲ್ಲಿ ಏನು ಮಾಡಿದ್ದೀರಿ ಎಂದು ಮಾನ್ಯ ಸದಸ್ಯರಾದ ಶ್ರೀಮಾನ್ ಶೆಟ್ಟರ್ ಅವರು ಕೇಳಿದರು. ಕರ್ನಾಟಕ ಯೂನಿವರ್ಸಿಟಿಯ ಸರಹದ್ದಿನಲ್ಲಿರತಕ್ಕಂಥ ಕಾಲೇಜುಗಳೆಲ್ಲಾ ಖಾಸಗಿಯವು. ಅಲ್ಲಿ ಸರ್ಕಾರದವರು ನಡೆಸುವ ಕಾಲೇಜುಗಳು ಹೆಚ್ಚು ಇಲ್ಲ. ಅಲ್ಲಿರತಕ್ಕಂಥ ಸಂಸ್ಥೆಗಳಲ್ಲಿ ಬಹುಶಃ ಕೆಲವು ಸಲಕರಣೆಗಳನ್ನು, ಸೌಲಭ್ಯಗಳನ್ನು ಮತ್ತು ಹೆಚ್ಚಿನ ಹಾಸಿಗೆಗಳನ್ನು ಮಾಡಿಕೊಂಡರೆ, ಒಳ್ಳೆಯ ಉಪಾಧ್ಯಾಯರನ್ನು ನೇಮಕಮಾಡುವುದಾದರೆ ಒಂದು ಕಾಲೇಜನ್ನು ಪ್ರಾರಂಭಮಾಡುವುದಕ್ಕೆ ಯೋಗ್ಯವಾದ ಸ್ಥಳವಾಗುತ್ತದೆ. ಅದಕ್ಕಾಗಿ ನಾವು ಕರ್ನಾಟಕ ಯೂನಿವರ್ಸಿಟಿಗೆ ಒಂದು ಕಾಗದ ಬರೆದಿದ್ದೇವೆ. ಯಾವ ಸಂಸ್ಥೆಯವರಿಗೆ ಕಾಲೇಜನ್ನು ನಡೆಸಬೇಕೆಂದು ಆಸೆಯಿದೆಯೋ ಅಂಥವರು

ಅಫಿಲಿಯೇಷನ್‌ಗೆ ಅರ್ಜಿ ಹಾಕಿಕೊಂಡರೆ ಪರಿಶೀಲನೆ ಮಾಡುತ್ತಾರೆ. ಬೇರೆಯವರ ಸಹಕಾರವಿಲ್ಲದೆ ಈ ಕಾಲೇಜನ್ನು ಪ್ರಾರಂಭ ಮಾಡುವುದಕ್ಕಾಗುವುದಿಲ್ಲ. ಕರ್ನಾಟಕ ಯೂನಿವರ್ಸಿಟಿಯ ಅಧೀನದಲ್ಲಿರತಕ್ಕಂಥ ಪ್ರಿನ್ಸಿಪಾಲರುಗಳಿಗೂ ಈ ಕಾಲೇಜನ್ನು ಪ್ರಾರಂಭ ಮಾಡುವ ಬಗ್ಗೆ ಸರ್ಕಾರದ ನೀತಿ ಏನಿದೆ ಎಂಬುದನ್ನು ಸ್ಪಷ್ಟಪಡಿಸಿದ್ದೇನೆ. ಆದ್ದರಿಂದ ಅವರು ಬೇಕಾದರೆ ಅರ್ಜಿಗಳನ್ನು ಹಾಕಿಕೊಳ್ಳಬಹುದು. ಸರ್ಕಾರದವರೇ ಪ್ರಾರಂಭ ಮಾಡುವುದಕ್ಕೆ ಇರುವ ಆತಂಕವೆಂದರೆ ನುರಿತ ಉಪಾಧ್ಯಾಯರುಗಳು ಸಿಗುವುದಿಲ್ಲ. ನಮ್ಮಲ್ಲಿ ಪೋಸ್ಟ್ ಗ್ರಾಜುಯೇಟ್ ಇನ್‌ಸ್ಟಿಟ್ಯೂಷನ್ ಮಾಡಿದ ಮೇಲೆ ಸಾಕಷ್ಟು ಉಪಾಧ್ಯಾಯರುಗಳು ಸಿಗಬಹುದು. ಆ ಕಾಲಕ್ಕೆ ಆಯುರ್ವೇದದ ಕಾಲೇಜುಗಳ ಆವಶ್ಯಕತೆ ಇದ್ದರೆ ಪ್ರಾರಂಭ ಮಾಡುವುದಕ್ಕೆ ಅನುಕೂಲವಾಗುತ್ತದೆ.

ಇನ್ನು ಅಲ್ಲಂ ಕರಿಬಸಪ್ಪನವರು ಬಳ್ಳಾರಿಯ ತಾರಾನಾಥ್ ಆಯುರ್ವೇದ ಪೀಠಕ್ಕೆ ಧನ ಸಹಾಯ ಮಾಡಬೇಕೆಂದು ಕೇಳಿದ್ದಾರೆ. ಈ ಒಂದು ಸಂಸ್ಥೆ ಬಹಳ ಕಾಲದಿಂದ ನಡೆದುಕೊಂಡು ಬಂದಿದೆ. ಈಗ ಮಾನ್ಯ ಸದಸ್ಯರು ಕೊಟ್ಟಿರುವ ಸಲಹೆಯನ್ನು ಪರಿಶೀಲನೆ ಮಾಡಬಹುದು. ಹಣದ ಸಹಾಯುವನ್ನು ಸರ್ಕಾರ ಪರಿಶೀಲನೆ ಮಾಡುತ್ತದೆಂದು ಹೇಳುವುದಕ್ಕೆ ಅಪೇಕ್ಷಿಪಡುತ್ತೇನೆ.

ಇನ್ನು ಒಂದು ವಿಚಾರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಮಾನ್ಯ ಸದಸ್ಯರಲ್ಲಿ ಮೊದಲೇ ಅರಿಕೆ ಮಾಡಿಕೊಂಡಿದ್ದೇನೆ. ಏನೆಂದರೆ, ಪ್ರತಿಯೊಬ್ಬ ಮಾನ್ಯ ಸದಸ್ಯರುಗಳು ಸಹ ಅನೇಕ ವಿಷಯಗಳ ಬಗ್ಗೆ ಹೇಳಿದ್ದಾರೆ ಮತ್ತು ಸಲಹೆಗಳನ್ನು ಕೊಟ್ಟಿದ್ದಾರೆ, ಅದನ್ನೆಲ್ಲಾ ಈಗ ಮತ್ತೆ ಪ್ರಸ್ತಾಪ ಮಾಡುವುದಕ್ಕಾಗುವುದಿಲ್ಲ. ಏಕೆಂದರೆ ಕಾಲಾವಕಾಶವಿಲ್ಲ. ಆಸ್ಪತ್ರೆಗಳಲ್ಲಿರತಕ್ಕಂಥ ದೋಷಗಳನ್ನು, ನ್ಯೂನತೆಗಳನ್ನು ಹೇಳಿದ್ದಾರೆ. ಈ ವಿಚಾರಗಳನ್ನು ಅಗತ್ಯವಾಗಿ ಗಮನಕೊಟ್ಟು ನಿವಾರಣೆ ಮಾಡುವುದು ಸರ್ಕಾರದ ಕರ್ತವ್ಯವೆಂದು ಈಗಾಗಲೇ ಹೇಳಿದ್ದೇನೆ. ಆದ್ದರಿಂದ ಈ ವಿಚಾರದಲ್ಲಿ ಮಾನ್ಯ ಸದಸ್ಯರುಗಳು ಅನ್ಯಥಾ ಭಾವನೆ ಮಾಡುವುದಿಲ್ಲವೆಂದು ತಿಳಿದುಕೊಂಡಿದ್ದೇನೆ.

ಇನ್ನು ಲೇಡಿ ಡಾಕ್ಟರ್ ವಿಚಾರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ನನಗೆ ಪರಿಚಯವಿರುವಂಥ ಒಬ್ಬ ಸದಸ್ಯರು ನನ್ನಲ್ಲಿಗೆ ಬಂದು ಪ್ರಸ್ತಾಪ ಮಾಡಿದರು, ಏನೆಂದರೆ ಒಬ್ಬ ಲೇಡಿ ಡಾಕ್ಟರನ್ನು ಬೆಂಗಳೂರಿನಿಂದ 30 ಮೈಲಿ ದೂರದಲ್ಲಿರುವ ಊರಿಗೆ ಹಾಕಿದ್ದಾರೆ ಏನು ಮಾಡುವುದು ಎಂದು ಅದಕ್ಕೆ ನಾನು ಹೇಳಿದೆ, " there is a conflict between my simpathy and duty " ನಿಜ, ನನ್ನ ಮಗಳೇ ಅಥವಾ ನನ್ನ ತಂಗಿಯೇ ಆಗಿದ್ದರೂ ಸಹ ಇದೇ ರೀತಿ ಹೇಳುತ್ತಿದ್ದೆ. ಮದುವೆಯಾಗದ ಹುಡುಗಿಯರಾದರೆ ಏನೋ ಅನುಕಂಪನ ತೋರಿಸಬಹುದು, ಏಕೆಂದರೆ ಒಬ್ಬರೇ ದೂರದ ಊರುಗಳಿಗೆ ಹೋಗಿ ಇರುವುದು ಕಷ್ಟವಾಗುತ್ತದೆ, ಜನರ ಪರಿಚಯವಿರುವುದಿಲ್ಲ ಎಂದು ಮದುವೆಯಾದವರು ಏತಕ್ಕೆ ಹೋಗಬಾರದು ?

ಶ್ರೀ ಹೆಚ್. ಸಿದ್ದವೀರಪ್ಪ:-

ಪೋಸ್ಟಿಂಗ್ ಮಾಡುವಾಗ, ವರ್ಗಾವರ್ಗಿ ಮಾಡುವಾಗ ಎಲ್ಲರಿಗೂ ಒಂದೇ ಕಾನೂನನ್ನು ಅನುಸರಿಸಬೇಕು.

ಶ್ರೀ ಕೆ. ಪುಟ್ಟಸ್ವಾಮಿ:-

ನಾವು ಮಾಡುವುದನ್ನು ಮಾಡುತ್ತೇವೆ. ಕೆಲವು ಸಲ ಕೂಡ ತಪ್ಪು ಮಾಡುತ್ತೇನೆ, ಮಾಡದೇ ಇರುವುದಕ್ಕಾಗುವುದಿಲ್ಲ. ಕೆಲವರು ಬಂದು ಕೇಳಿಕೊಂಡಾಗ ನಿರಾಕರಿಸುವುದು ಕಷ್ಟವಾಗುತ್ತದೆ. ಆದಷ್ಟು ಕಾನೂನು ಪ್ರಕಾರವೇ ನಡೆಯುತ್ತಿರುವುದು. ಕೆಲವು ಉದಾಹರಣೆಗಳನ್ನು ಕೊಡುವುದಾದರೆ, ಮೆಜಿಷಿಯನ್ ಮತ್ತೊಬ್ಬರ ಮೇಲೆ ಕೈಯಾಡಿಸಿದರೆ ಪ್ರಜ್ಞೆ ಹೋಗುತ್ತದಂತೆ, ನಾವು ಕೋರ್ಟಿನಲ್ಲಿ ಕೇಸ್‌ಗಳನ್ನು ನಡೆಸುತ್ತಿದ್ದಾಗ ಇಂತಹ ತಾರೀಖನ್ನು ನಮಗೆ ಹಾಕಿಕೊಡಿ ಎಂದು ಕೇಳಿದರೆ ತಕರಾರು ಮಾಡುತ್ತಿದ್ದರು. ಅದೇ ಬುದ್ಧಿವಂತರು ಯಾವ ತಾರೀಖನ್ನು ಕೇಳಿದರೂ ಸಹ ಕೊಡುತ್ತಿದ್ದರು. ಆದ್ದರಿಂದ ಲೇಡಿ ಡಾಕ್ಟರ್ ಬಗ್ಗೆ ಕೆಲವು ಸಾರಿ ಸಹಾನುಭೂತಿ ತೋರಿಸಬೇಕಾಗುತ್ತದೆ. ಏಕೆಂದರೆ ಇವರು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲ. ನಮ್ಮ ರಾಜ್ಯಕ್ಕೆ ಪ್ರಕೃತದಲ್ಲಿ 71 ಜನ ಲೇಡಿ ಡಾಕ್ಟರ್‌ಗಳು ಬೇಕಾಗಿದ್ದಾರೆ. ಕೆಲವರು ಕೆಲಸಕ್ಕೆ ಬಂದು ಸೇರಿಕೊಳ್ಳುತ್ತಾರೆ. ಏನಾದರು ದೂರದ ಊರಿಗೆ ವರ್ಗ ಮಾಡಿದರೆ, ಬೆಂಗಳೂರು ಅಥವಾ ಮೈಸೂರಿನಲ್ಲಿ ಒಂದು ವರ್ಷ ಇರುವುದಕ್ಕೆ ಅವಕಾಶ ಕೊಡಿ, ಆ ನಂತರ ದೂರದ ಊರಿಗೆ ಹೋಗುತ್ತೇವೆಂದು ಹೇಳುತ್ತಾರೆ. ಕೆಲವು ಸಾರಿ ಒಪ್ಪಿಕೊಂಡಿದ್ದೇವೆ. ಕೆಲವು ಸಾರಿ...........

ಶ್ರೀ ಹೆಚ್. ಸಿದ್ದವೀರಪ್ಪ:-

ಕೆಲವು ಸಾರಿ ಒಬ್ಬ ಡಾಕ್ಟರನ್ನು ವರ್ಷದಲ್ಲಿ ನಾಲ್ಕು ಸಾರಿ ವರ್ಗ ಮಾಡಿದ್ದೀರಿ.

ಶ್ರೀ ಕೆ. ಪುಟ್ಟಸ್ವಾಮಿ:-

ಈ ಲೇಡಿ ಡಾಕ್ಟರ್‌ಗಳನ್ನು ಕೇವಲ ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಇಟ್ಟುಕೊಂಡರೆ ಅವರು ಪ್ರತಿ ತಿಂಗಳು 400-500 ರೂಪಾಯಿ ಸಂಬಳ ತೆಗೆದುಕೊಂಡು ಅನಂತರ ಬೇರೆ ಊರಿಗೆ ಹೋಗುವುದಕ್ಕೆ ಇಷ್ಟಪಡುವುದಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಆಗುತ್ತಿರುವ ಸಾವು ನೋವುಗಳನ್ನು ನೋಡಿದರೆ, ಕಡ್ಡಾಯವಾಗಿ ಈ ಲೇಡಿ ಡಾಕ್ಟರ್‌ಗಳನ್ನು ಆ ಜಾಗಗಳಿಗೆ ಕಳಿಸಲೇಬೇಕೆಂದುಕೊಂಡರೂ ಸಹ ಸಾಕಷ್ಟು ಸಂಖ್ಯೆಯಲ್ಲಿ ಇವರು ಇಲ್ಲದಿರುವುದರಿಂದ, ಕೆಲವು ಸಾರಿ ಇವರು ಹೇಳಿದಂತೆ ಕೇಳಬೇಕಾಗುತ್ತದೆ. ನಾನು ಮೊದಲು ಹೇಳಿದಂತೆ ಒಬ್ಬ ಸದಸ್ಯರು ಬಂದು ನನ್ನ ಮಗಳನ್ನು ಬೆಂಗಳೂರಿನಿಂದ 30 ಮೈಲಿ ದೂರದ ಊರಿಗೆ ಹಾಕಿದ್ದಾರೆ, ಅಲ್ಲಿ ಎಲ್ಲಾ ರೀತಿಯ ಅನುಕೂಲಗಳಿದ್ದರೂ ಸಹ ಒಬ್ಬಳನ್ನೇ ಹೇಗೆ ಕಳಿಸುವುದು ಎಂದು ಚಿಂತೆಯಾಗಿದೆಯೆಂದು ಹೇಳಿದರು. ಸ್ವಲ್ಪ ಸಮಯದ ನಂತರ ಹೇಳಿದರು: ಇನ್ನು 4-5 ತಿಂಗಳವರೆಗೆ ಬೆಂಗಳೂರಿನಲ್ಲಿಯೇ ಕೆಲಸ ಕೊಡಿಸಿ, ಅವಳು ಫುಲ್ ಬ್ರೈಟ್ ಸ್ಕಾಲರ್‌ಷಿಪ್‌ಗೆ ಅರ್ಜಿ ಹಾಕಿಕೊಂಡಿದ್ದಾಳೆ, ಅದು ಮಂಜೂರಾದ ತಕ್ಷಣ ಯು.ಎಸ್.ಎ.ಗೆ ಹೋಗುತ್ತಾಳೆ

ಎಂದು. 30 ಮೈಲಿ ದೂರದ ಊರಿಗೆ ತಮ್ಮ ಮಗಳನ್ನು ಕಳಿಸುವುದಕ್ಕೆ ಯೋಚನೆ ಮಾಡುವ ಇವರು 6,000 ಮೈಲಿಗಳ ದೂರದಲ್ಲಿರುವ ಊರಿಗೆ ಕಳಿಸುವುದಕ್ಕೆ ಅದೂ ಒಬ್ಬಳನ್ನೇ ಕಳಿಸುವುದಕ್ಕೆ ಸಂತೋಷ. ನಮ್ಮ ಜನರ ಮನೋಭಾವನೆ ಈ ರೀತಿ ಇದೆ. ನಾನಾದರೂ ತೀರ್ಮಾನ ಮಾಡಿದ್ದೇನೆ. ಪ್ರತಿಯೊಂದು ತಾಲ್ಲೂಕಿಗೂ ಒಬ್ಬೊಬ್ಬ ಲೇಡಿ ಡಾಕ್ಟರನ್ನು ನೇಮಕ ಮಾಡಬೇಕೆಂದು. ಈ ರೀತಿ ಮಾಡುವುದೇನೂ ಕಷ್ಟವಿಲ್ಲ. ಒಂದು ವಿಧವಾದಂಥ ಭರದಲ್ಲಿ ಇವರು ಹೇಳುತ್ತಿದ್ದಾರೆ, ಇವರಿಗೆ ಹಣ ಎಲ್ಲಿದೆ ಎಂದು ಮಾನ್ಯ ಸದಸ್ಯರುಗಳು ಹೇಳಬಹುದು, ಈ ಬಗ್ಗೆ ಕೇಂದ್ರ ಸರ್ಕಾರದವರು ನಮ್ಮ ರಾಜ್ಯದಲ್ಲಿರತಕ್ಕಂಥ 265 ಪ್ರೈಮರಿ ಹೆಲ್ತ್ ಸೆಂಟರ್‌ಗಳಿಗೂ 265 ಜನ ಮಹಿಳಾ ಡಾಕ್ಟರ್‌ಗಳನ್ನು ನೇಮಕ ಮಾಡುವುದಕ್ಕೆ ಒಪ್ಪಿಕೊಂಡಿದ್ದಾರೆ.

ಶ್ರೀಮತಿ ನಾಗರತ್ನಮ್ಮ ಹಿರೇಮಠ:-

ಎಲ್ಲಾ ಕಡೆಗೂ ಲೇಡಿ ಡಾಕ್ಟರ್‌ಗಳನ್ನು ನೇಮಕ ಮಾಡುತ್ತೇವೆಂದು ಹೇಳಿದಿರಿ, ಈಗ ಪ್ರತಿ ವರ್ಷ ಎಷ್ಟು ಸೀಟುಗಳನ್ನು ಹುಡುಗಿಯರಿಗೆ ಕೊಡುತ್ತಿದ್ದೀರಿ ಮತ್ತು ಪ್ರತಿ ತಾಲ್ಲೂಕ್‌ಗೂ ಒಬ್ಬೊಬ್ಬ ಲೇಡಿ ಡಾಕ್ಟರ್ ನೇಮಕ ಮಾಡಬೇಕೆಂದಿರುವ ನಿಮ್ಮ ಆಶೆಯನ್ನು ಎಷ್ಟು ವರ್ಷಗಳಲ್ಲಿ ಪೂರೈಸಬಹುದು?

ಶ್ರೀ ಕೆ. ಪುಟ್ಟಸ್ವಾಮಿ:-

ಈ ಹೆಣ್ಣುಮಕ್ಕಳ ವಿಚಾರದಲ್ಲಿ ನಾವು ಏನೂ ಕೊಡಬೇಕಾಗಿಲ್ಲ. ತಮ್ಮ ಮೆರಿಟ್ಟಿನಿಂದ ಬೇಕಾದಷ್ಟು ಸಂಖ್ಯೆಯಲ್ಲಿ ಬರುತ್ತಾರೆ. ಆದರೆ ಶಿಕ್ಷಣ ಪಡೆದ ಮೇಲೆ ಕೆಲಸಕ್ಕೆ ಹೋಗುವುದಕ್ಕೆ ಹಿಂಜರಿಯುತ್ತಾರೆ. ಇವತ್ತು 256 ಪ್ರೈಮರಿ ಹೆಲ್ತ್ ಸೆಂಟರಿಗೆ ಫ್ಯಾಮಿಲಿ ಪ್ಲಾನಿಂಗ್ ಸ್ಕೀಂನಲ್ಲಿ ನೇಮಕವಾಗಬೇಕು. 90 ಪರ್‌ಸೆಂಟ್ ಇಂಡಿಯಾ ಸರ್ಕಾರದವರು ಕೊಡುತ್ತಾರೆ, ಕೇವಲ 10 ಪರ್‌ಸೆಂಟ್ ಮಾತ್ರ ನಾವು ಕೊಡುತ್ತಿರುವುದು. ಆದರೆ ನಮ್ಮ ದುರಾದೃಷ್ಟದಿಂದ ಸಾಕಷ್ಟು ಸಂಖ್ಯೆಯಲ್ಲಿ ಮಹಿಳಾ ಡಾಕ್ಟರುಗಳು ಬರುತ್ತಾ ಇಲ್ಲ. ಪ್ರತಿಯೊಂದು ತಾಲ್ಲೂಕು ಕೇಂದ್ರದಲ್ಲಿಯೂ ನಮ್ಮ ಪ್ರೈಮರಿ ಹೆಲ್ತ್ ಸೆಂಟರ್‌ನಲ್ಲಿ ನಮ್ಮ ವೈದ್ಯರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಬೇಕಾದಷ್ಟು ಮನೆಗಳನ್ನು ಕೊಡುವುದು ನಮ್ಮ ಕರ್ತವ್ಯವಾಗಿದೆ. ಬಹಳ ಮಟ್ಟಿಗೆ ಮಾಡಿದ್ದೇವೆ. ಇನ್ನೂ ಬೇಕಾದಂತಹ ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ಸರ್ಕಾರದ ಇಚ್ಛೆಯಾಗಿದೆ. ಒಂದು ಮಾತು ಕೊನೆಗೆ ಹೇಳುತ್ತೇನೆ. ನಮ್ಮ ಈ ಅವಧಿಯಲ್ಲಿ ದೇಶದಲ್ಲಿರತಕ್ಕಂತಹ ಪ್ರತಿಯೊಂದು ತಾಲ್ಲೂಕಿಗೂ ಒಬ್ಬ ಮಹಿಳಾ ವೈದ್ಯರನ್ನಾದರೂ ಒದಗಿಸುವ ಶಕ್ತಿ ನಮಗೆ ಬಂದರೆ, ನಾವು ಕೃತಕೃತ್ಯರಾಗುತ್ತೇವೆ. ಇಷ್ಟು ಮಾತ್ರ ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

# 6. ವೈದ್ಯಕೀಯ ಕಾಲೇಜುಗಳಲ್ಲಿ ಬೋಧಕ ವರ್ಗದ ನೇಮಕ ಕುರಿತು-1968.*

ಶ್ರೀ ಕೆ.ಎಚ್. ರಂಗನಾಥ್:-

ಪೋಸ್ಟ್ ಗ್ರಾಜುಯೇಟ್ ಇನ್‌ಸ್ಟಿಟ್ಯೂಟ್‌ನಲ್ಲಿ ಯಾವ ಯಾವ ಸಬ್ಜೆಕ್ಟ್‌ಗಳ ಬಗ್ಗೆ ಪೋಸ್ಟ್ ಗ್ರಾಜುಯೇಟ್ ಕೋರ್ಸ್‌ನ್ನು ಜಾರಿಗೆ ತಂದಿದ್ದೀರಿ?

ಶ್ರೀ ಕೆ. ಪುಟ್ಟಸ್ವಾಮಿ:-

ಇನ್ನೂ ಯಾವ ಸಬ್ಜೆಕ್ಟ್‌ನ್ನೂ ಇಂಟ್ರೊಡ್ಯೂಸ್ ಮಾಡಿಲ್ಲ.

ಶ್ರೀ ಕೆ.ಎಚ್. ರಂಗನಾಥ್:-

ಬೌರಿಂಗ್ ಇನ್‌ಸ್ಟಿಟ್ಯೂಟನ್ನು ಯಾವಾಗ ಪೋಸ್ಟ್ ಗ್ರಾಜುಯೇಟ್ ಇನ್‌ಸ್ಟಿಟ್ಯೂಟಾಗಿ ಮಾಡಲಾಯ್ತು?

ಶ್ರೀ ಕೆ. ಪುಟ್ಟಸ್ವಾಮಿ:-

ಎರಡು ವರ್ಷಗಳ ಹಿಂದೆ.

ಶ್ರೀ ಕೆ.ಹೆಚ್. ರಂಗನಾಥ್:-

35 ಪ್ರೊಫೆಸರುಗಳು, 78 ಅಸೋಸಿಯೇಟ್ ಪ್ರೊಫೆಸರುಗಳು, 17 ರೀಡರುಗಳು, 27 ಅಸಿಸ್ಟೆಂಟ್ ಪ್ರೊಫೆಸರುಗಳು, 79 ಅಸಿಸ್ಟೆಂಟ್ ಅಸೋಸಿಯೇಟ್ ಪ್ರೊಫೆಸರುಗಳು ಇದ್ದಾರೆಂದು (ಬಿ) ಪ್ರಶ್ನೆಗೆ ಉತ್ತರದಲ್ಲಿ ತಿಳಿಸಿದೆ. ಇವರನ್ನು ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸ್ ಮಾಡಿದ ಮೇಲೆ ನೇಮಕ ಮಾಡಲಾಗಿದೆಯೇ ಅಥವಾ ಅದಕ್ಕೆ ಮುಂದೆ ಮಾಡಿದೆಯೆ?

ಶ್ರೀ ಕೆ. ಪುಟ್ಟಸ್ವಾಮಿ:-

ಹೊಸದಾಗಿ ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸ್ ಪ್ರಕಾರ ನೇಮಕ ಮಾಡಿಲ್ಲ. ನಮ್ಮಲ್ಲಿ ಕೆಲಸ ಮಾಡುತ್ತಿದ್ದವರಿಗೆ ಕ್ರಮಬದ್ಧವಾಗಿ ಪ್ರಮೋಷನ್ ಕೊಟ್ಟು ಅವರನ್ನು ಖಾಯಂ ಮಾಡುತ್ತಿದ್ದೇವೆ.

ಶ್ರೀ ಎಸ್. ಶಿವಪ್ಪ:-

ಬೌರಿಂಗ್ ಆಸ್ಪತ್ರೆಯಲ್ಲಿ ಪೋಸ್ಟ್‌ಗ್ರಾಜುಯೇಟ್ ಕೋರ್ಸ್‌ನ್ನು ಓಪನ್ ಮಾಡಲು ಮಂಜೂರಾತಿ ಮಾಡಿ ಎರಡು ವರ್ಷವಾದರೂ ಪ್ರೊಫೆಸರು ಮುಂತಾದವರನ್ನು ನೇಮಕ ಮಾಡಿದ್ದರೂ ಇನ್ನೂ ಪ್ರಾರಂಭಿಸದಿರುವುದಕ್ಕೆ ಕಾರಣವೇನು?

---

*(ವಿಧಾನ ಸಭಾ ಕಲಾಪ ದಿನಾಂಕ: 22-3-1968)

ಶ್ರೀ ಕೆ. ಪುಟ್ಟಸ್ವಾಮಿ:-

ಆದಕ್ಕೆ ಅನೇಕ ಉಪಕರಣಗಳು ಮತ್ತು ಸಲಕರಣೆ ಬೇಕು. ಲ್ಯಾಬೋರೇಟರಿ ಮುಂತಾದವನ್ನು ಸಿದ್ಧಗೊಳಿಸಬೇಕಾಗಿದೆ. ಆ ಕಾರಣದಿಂದ ನಿಧಾನವಾಗಿದೆ.

ಶ್ರೀ ಎಚ್. ಪುಟ್ಟದಾಸ್:-

ಎರಡು ವರ್ಷಗಳಿಂದ ಯಾವ ಉಪಕರಣವನ್ನೂ ಒದಗಿಸಿಲ್ಲ. ರಿಸರ್ಚ್ ಇನ್‌ಸ್ಟಿಟ್ಯೂಟನ್ನು ಪ್ರಾರಂಭಿಸುವುದಕ್ಕೆ ಏನು ಕ್ರಮ ಕೈಕೊಳ್ಳಲಾಗಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಹೆಚ್ಚಿನ ವಿವರ ಕೇಳುತ್ತಿದ್ದಾರೆ. ಬಹುಶಃ ಕೆಲವು ಕಾಲದೊಳಗಾಗಿ ಮೆಡಿಸಿನ್, ಸರ್ಜರಿ ಮತ್ತು ಪೆಥಾಲಜಿ ಈ ಮೂರರ ಬಗ್ಗೆ ಕೋರ್ಸ್ ಪ್ರಾರಂಭಿಸಲು ಸಾಧ್ಯವಾಗಬಹುದು. ಈ ನಿರೀಕ್ಷಣೆ ಇದೆ.

**Sri J.P. SARWESH:-**

In answer to (d) it is stated that information is not readily available. Does this not show negligence on the part of officers in not collecting information regarding the Scheduled Castes and Scheduled Tribes and is not most disgraceful and violation of the constitutional provisions?

**Sri. K. PUTTASWAMY:-**

The Hon'ble member is rather using strong words. Every medical graduate is eligible to enter educational cadre as lecturer. The Scheduled Castes and Scheduled tribes medical graduates are entiled to enter service. Therefore there is no negligence. There are thousands of medical graduates in the country and among them several hundreds belong to Scheduled Castes and Tribes and they are all eligible.

ಶ್ರೀ ಎಸ್. ಬಂಗಾರಪ್ಪ:-

ಮೆಡಿಕಲ್ ಕಾಲೇಜಿನಲ್ಲಿರತಕ್ಕ ಲೆಕ್ಚರರ್ಸ್, ಅಸಿಸ್ಟೆಂಟ್ ಪ್ರೊಫೆಸರ್ಸ್, ಪ್ರೊಫೆಸರ್ಸ್, ಅಸೋಸಿಯೇಟ್ ಪ್ರೊಫೆಸರ್ಸ್ ಈ ಹುದ್ದೆಗಳಿಗೆ ಬಡ್ತಿ ಕೊಡತಕ್ಕ ವಿಷಯದಲ್ಲಿ ಹಿಂದಿನ ಆರೋಗ್ಯಮಂತ್ರಿಗಳಾಗಿದ್ದ ಶ್ರೀಮಾನ್ ಹೆಗ್ಗಡೆಯವರ ಕಾಲದಲ್ಲಿ ಬಹಳ ಅನ್ಯಾಯವಾಗಿದೆ.

ಅಸಿಸ್ಟೆಂಟ್ ಅಸೋಸಿಯೇಟ್ ಪ್ರೊಫೆಸರ್ ಆಗಿದ್ದ ನಮಗೆ ಪ್ರಮೋಷನ್ ಕೊಡಬೇಕಾಗಿತ್ತು, ನಮಗಿಂತ ಜೂನಿಯರ್ ಆಗಿದ್ದವರಿಗೆ ಪ್ರಮೋಷನ್ ಕೊಟ್ಟಿದ್ದೀರಿ, ಸೀನಿಯರ್ ಆಗಿದ್ದವರನ್ನು ಬಿಟ್ಟಿದ್ದೀರಿ ಎಂದು ಹೇಳಿ ದೂರು ಕೊಟ್ಟಿದ್ದಾರೆಯೇ? ಅದರ ಬಗ್ಗೆ ಪರಿಶೀಲನೆ ನಡೆಸಿದ್ದೀರಾ?

**Sri K. PUTTASWAMY:-**

Time and again I have refuted such allegations. Ad hoc appointments were made temporarily and now rules are being framed. Under the rules all the appointees who had requisite qualifications are being absorbed in the educational cadre.

ಶ್ರೀ ಕೆ.ಎಚ್. ರಂಗನಾಥ್:-

ನನ್ನ ಪ್ರಶ್ನೆ (ಸಿ)ಗೆ ಉತ್ತರವಾಗಿ ತಾವು ನೇಮಕ ಮಾಡಿರತಕ್ಕವರ ಸಂಖ್ಯೆಯನ್ನು ಕೊಟ್ಟಿದ್ದೀರಿ. ಇದು 16 ಪರ್ಸೆಂಟ್ ಷೆಡ್ಯೂಲ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ಗೆ ಸಂಬಂಧಪಟ್ಟವರಲ್ಲಿ ಕ್ವಾಲಿಫಿಕೇಷನ್ ಇದ್ದರೆ ಕೊಡಬೇಕೆಂಬ ನೀತಿಗೆ ಅನುಗುಣವಾಗಿದೆಯೋ? ಇಲ್ಲದೆ ಹೋದರೆ ಆ ಒಂದು ಪರ್ಸೆಂಟೇಜ್ ತರಲಿಕ್ಕೆ ಸರ್ಕಾರದವರು ಏನು ಪ್ರಯತ್ನ ಮಾಡುತ್ತೀರಿ?

**Sri K. PUTTASWAMY:-**

I do concede that they are not adequately represented. The step that Government have taken to secure adequate representation is through direct recruitment and I wish to refer to the Gazette notification wherein we have called for applications for about 100 posts of Assistant Professors, Assistant Associate Professors and Lecturers.

ಶ್ರೀ ಕೆ.ಎಚ್. ರಂಗನಾಥ್:-

ಮೊನ್ನೆತಾನೆ ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸ್ ಫೈನಲೈಸ್ ಆಗಿದೆ. ಫೈನಲೈಸ್ ಮಾಡಿ ಸ್ಕ್ರೀನಿಂಗ್ ಕಮಿಟಿ ನೇಮಕ ಮಾಡಿದರಲ್ಲಾ ಆಗ ಎಷ್ಟು ಜನ ಷೆಡ್ಯೂಲ್ ಕ್ಯಾಸ್ಟ್ ಮತ್ತು ಷೆಡ್ಯೂಲ್ ಟ್ರೈಬ್ಸ್‌ನವರು ಪೋಸ್ಟ್ ಗ್ರಾಜ್ಯುಯೇಟ್ ಕ್ವಾಲಿಫಿಕೇಷನ್ ಇದ್ದವರು ಆ ಕಮಿಟಿ ಮುಂದೆ ಬಂದರು? ಅವರ ಪೈಕಿ ಎಷ್ಟು ಜನರನ್ನು ನೇಮಕ ಮಾಡಿಕೊಂಡಿರಿ? ಮಾಡಿಕೊಳ್ಳದೇ ಬಿಟ್ಟವರು ಎಷ್ಟು ಜನ?

**Sri K. PUTTASWAMY:-**

It is not possible to supply that information now because several committees have been screening candidates and it is not

now possible to say how many have gone before them, how many have been absorbed and how many have been rejected?

**ಶ್ರೀಮತಿ ನಾಗರತ್ನಮ್ಮ ಹಿರೇಮಠ:-**

ಪೋಸ್ಟ್‌ಗ್ರಾಜ್ಯುಯೇಟ್ ಇನ್‌ಸ್ಟಿಟ್ಯೂಷನ್‌ಗೆ ಸರ್ಕಾರದವರು ಏನಾದರೂ ಹಣವನ್ನು ಖರ್ಚು ಮಾಡಿದ್ದೀರಾ? ಎಷ್ಟು ಮತ್ತು ಏಕೆ ಖರ್ಚು ಮಾಡಿದ್ದೀರಿ?

**ಶ್ರೀ ಕೆ. ಪುಟ್ಟಸ್ವಾಮಿ:-**

ನೋಟೀಸ್. ಸಾಕಾದಷ್ಟು ಹಣ ಖರ್ಚು ಮಾಡಿದ್ದೇವೆ.

**ಶ್ರೀ ಎಸ್. ಗೋಪಾಲಗೌಡ:-**

ರಾಜ್ಯಾಂಗ ಜಾರಿಗೆ ಬಂದ ಮೇಲೆ ನೀವೇನು ನೇಮಕ ಮಾಡಿದ್ದೀರಿ ಮತ್ತು ಪ್ರಮೋಷನ್ ಮೂಲಕ ಈ ಸ್ಥಾನವನ್ನು ಭರ್ತಿ ಮಾಡಿದ್ದೀರಿ. ಅದನ್ನು ಮಾಡುವಾಗ ಸರ್ಕಾರದವರು ಈ 16 ಪರ್ಸೆಂಟ್ ಬಗ್ಗೆ ಗಮನ ಕೊಟ್ಟಿದ್ದೀರಾ? ಅಥವಾ ಕ್ವಾಲಿಫಿಕೇಷನ್ ಇರತಕ್ಕವರು ಇರಲಿಲ್ಲ ಎಂದು ಇನ್‌ಅಡಿಕ್ವೇಟ್ ರೆಪ್ರಸೆಂಟೇಷನ್ ಆಗಿದೆಯೇ?

**Sri K. PUTTASWAMY:-**

For higher appointments in the educational cadre the length of teaching experience after one acquired the prescribed qualification is the requisite qualification, according to Indian Medical Council. Therefore, whoever fulfils that qualification will be absorbed.

**Sri H. SIDDAVEERAPPA:-**

Are there not sufficient number of qualified Professors from the Scheduled Castes who are eligible to be appointed to those courses and if so, why are they not appointed?

**Sri K. PUTTASWAMY:-**

According to the Cadre and Recruitment Rules, if there are candidates fulfilling minimum qualifications they will be considered by the committee and on their recommendations they will be appointed.

**Sri H. SIDDAVEERAPPA:-**

May I know why the Screening Committee did not exercise their discretion especially when there were suitable applications and when there were qualified people and see they were appointed in preference to others?

**Sri K. PUTTASWAMY:-**

The work of the Screening Committee is to recommed the names for promotion. In case of promotion there wont be any reservation for Scheduled Castes and Scheduled Tribes. The reservation can only be made in connection with the direct recruitment. Therefore this Screening Committee cannot give any direction to reserve any posts for Scheduled Castes or Scheduled Tribes or Backward Classes.

**Sri H. SIDDAVEERAPPA:-**

I remember there was a Government order in which there was a provision even in the case of promotion in case of Scheduled Castes and Scheduled Tribes? Is it not so?

**Sri K. PUTTASWAMY:-**

I do not think that is a valid condition.

ಶ್ರೀ ಎಂ.ಎಚ್. ಜಯಪ್ರಕಾಶ್ ನಾರಾಯಣ್:-

ಯಾವತ್ತಿಗೂ ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸ್ ಪ್ರಕಾರ ಮಾಡುತ್ತೇವೆಂದು ಹೇಳುತ್ತೀರಿ. 1964ನೇ ಇಸವಿಯಲ್ಲಿ ಜಾರಿಗೆ ಬಂದಂಥ ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ರೂಲ್ಸನ್ನು ಬಿಟ್ಟು ಕೆಲವರನ್ನು ಡೈರೆಕ್ಟ್ ರಿಕ್ರೂಟ್‌ಮೆಂಟ್‌ನಲ್ಲಿ ತೆಗೆದುಕೊಂಡಿದ್ದೀರಿ. ಈಗ 93 ಜನರನ್ನು ಅಸೋಸಿಯೇಟ್ ಪ್ರೊಫೆಸರನ್ನಾಗಿ ಕೆಲವು ಹುದ್ದೆಗಳನ್ನು ಭರ್ತಿ ಮಾಡುತ್ತಿದ್ದೀರಿ. ಕೇವಲ 7 ಜನ ಅದರಲ್ಲಿ ಷೆಡ್ಯೂಲ್ಡ್ ಕ್ಯಾಸ್ಟಿನವರು ಇದ್ದಾರೆ. ಈ ಮನೆಯಲ್ಲಿ 20 ಜನ ಅಸೆಂಬ್ಲಿ ಸದಸ್ಯರು ಆ ಕ್ಯಾಸ್ಟಿನವರು ಇದ್ದಾರೆ. ಮಾನ್ಯ ಮುಖ್ಯ ಮಂತ್ರಿಗಳು ಮೈಸೂರು ಸಂಸ್ಥಾನದಲ್ಲಿ ಇದರ ಬಗ್ಗೆ ಸ್ವಲ್ಪ ಅನ್ಯಾಯವಾಗಿದೆ, ಎಂಬುದಾಗಿ ಹೇಳುವುದರಿಂದ ಇಬ್ಬರನ್ನಾದರೂ ಅಸಿಸ್ಟೆಂಟ್ ಪ್ರೊಫೆಸರನ್ನಾಗಿ ಮಾಡಿ ಎಂಬುದಾಗಿ ಕೊಟ್ಟಿರುವ ಮನವಿಗೆ ಪುರಸ್ಕಾರ ಕೊಡುತ್ತೀರಾ?

**Sri K. PUTTASWAMY:-**

The Committee have gone into the suitability of the persons and made recommedations and those recommendations will be considered by the Government.

**Sri K.H. RANGANATH:-**

The Hon'ble Minister said the Screening Committee went into the selection of candidates and this was for promotion only. What he said is not correct. All those people who went before the Screening Committee have been appointed but it is not through promotion. There is reservation for promotion at the time of appointing these Scheduled Castes and Scheduled Tribes people, What the Hon'ble Minister says is not correct.

**Sri K. PUTTASWAMY:-**

This is a question for which it is difficult to answer. There are two kinds of promotions. Promotion from general cadre and promotion from the teaching cadre. The Cadre and Recruitment Committee recommends the names of persons who are suitable for being absorbed in the teaching cadre as well as general cadre. The Hon'ble Member is asking for information about the promotion, and the recommendations of the Screening Committee. That report is before the Government and it is being considered.

**Sri K.H. RANGANATH:-**

I asked for the total number of doctors belonging to Scheduled Castes and Scheduled Tribes working outside the medical Institutions in the State but possessing qualifications required for being appointed in Medical Institutions. You have answered that the information is not readily available. I have sent this question on 6th February 1968 and you furnished the information i.e., the information is not readily available on 19th March 1968. Will the Minister kindly furnish the information to this August House as early as possible?

**Sri K. PUTTASWAMY:-**

I have already submitted to the House that every medical graduate is entiled to....

**Sri K.H. RANGANATH:-**

He is deliberately evading to furnish the required information. I am very specific about that.

**ಶ್ರೀ ಎಸ್. ಗೋಪಾಲಗೌಡ:-**

ಹೊಸದಾಗಿ ಇವರನ್ನು ರಿಕ್ರೂಟ್ ಮಾಡುವಾಗ ಆ ಶೇ. 16 ರಿಜರ್ವೇಷನ್ ಕೊಡಬೇಕು ಅನ್ನುವ ಕಲಮನ್ನು ಅನುಸರಿಸಿ ಅವರನ್ನು ರಿಕ್ರೂಟ್ ಮಾಡಲಾಗಿದೆಯೇ ಇಲ್ಲವೇ ಎಂಬುದನ್ನು ಹೇಳುವುದಕ್ಕೆ ಇವರಿಗೇನು ಕಷ್ಟವಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಹೊಸದಾಗಿ ರಿಕ್ರೂಟ್ ಮಾಡತಕ್ಕ ಕಾಲದಲ್ಲಿ ಪಿ.ಎಸ್.ಸಿ. ಅವರು ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬಿನವರಿಗೆ ರಾಜ್ಯಾಂಗದ ಪ್ರಕಾರ 18 ಪರ್ಸೆಂಟ್ ಮತ್ತು 20 ಪರ್ಸೆಂಟ್‌ನ್ನು ನೋಟಿಫೈ ಮಾಡಿ ಅಡ್ವರ್‌ಟೈಜ್ ಮಾಡುತ್ತಾರೆ. ಆದರೆ ಈಗ ಇಲ್ಲಿ ಮಾಡಿರತಕ್ಕದ್ದು ಪ್ರಮೋಷನ್ ಡೈರೆಕ್ಟ್ ರಿಕ್ರೂಟ್‌ಮೆಂಟ್ ಅಲ್ಲ, ಪ್ರಮೋಷನ್ ಮಾಡತಕ್ಕ ಬಗ್ಗೆ ಒಂದು ಕಮಿಟಿ ಇದೆ. ಅವರು ಸ್ಕ್ರೂಟನಿ ಮಾಡಿ ಮಾಡುತ್ತಾರೆ. 10 ಇಲಾಖೆಗಳ ಬಗ್ಗೆ ಆರ್ಡರನ್ನು ಪಾಸ್ ಮಾಡಿದೆ. ಇನ್ನೂ 2-3 ಸರ್ಕಾರದವರ ಮುಂದೆ ರಿವ್ಯೂನಲ್ಲಿವೆ. ರಾಜ್ಯದಲ್ಲಿ ಎಲ್ಲೆಲ್ಲಿ ಕೆಲಸ ಮಾಡುತ್ತಿದ್ದಾರೋ ಅಂಥವರಲ್ಲಿ 40 ವರ್ಷಕ್ಕೆ ಮೀರದವರೆಲ್ಲಾ ಈ ಪ್ರಮೋಷನ್‌ಗೆ ಒಳಪಡುತ್ತಾರೆ. ಆದರೆ ರಾಜ್ಯದಲ್ಲಿ ಎಲ್ಲೆಲ್ಲಿ ಈ 40 ವರ್ಷ ವಯಸ್ಸಿನೊಳಗಿರತಕ್ಕ ಜನ ಇದ್ದಾರೋ ಅವರೆಷ್ಟು ಮಂದಿ ಇದ್ದಾರೆ ಎಂಬ ವಿವರಗಳು ಇಲ್ಲ.

## 7. ಭಾಷಾ ಆಯೋಗದಲ್ಲಿ ಸೇವೆಸಲ್ಲಿಸಲು ಮೈಸೂರು ರಾಜ್ಯದಿಂದ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವುದು.-1969.*

ಶ್ರೀ ಎ. ಹೆಚ್. ಶಿವಾನಂದ ಸ್ವಾಮಿ:-

ಕಾನೂನು, ಕಾರ್ಮಿಕ ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಈ ಕೆಳಕಂಡ ವಿಷಯಗಳ ಬಗ್ಗೆ ಹೇಳಿಕೆ ನೀಡುವರೇ:-

ಅ) ಭಾರತೀಯ ಭಾಷೆಗಳಿಗೆ ಕಾನೂನು ಗ್ರಂಥಗಳನ್ನು ಅನುವಾದ ಮಾಡಲು ಕೇಂದ್ರ ಸರ್ಕಾರವು ರಚಿಸಿರುವ ಭಾಷಾ ಆಯೋಗಕ್ಕೆ ಮೈಸೂರು ರಾಜ್ಯದ ಒಬ್ಬ ಪ್ರತಿನಿಧಿಯನ್ನು ಸರ್ಕಾರವು ನೇಮಕ ಮಾಡಿದೆಯೆ:

ಆ) ಅಂತಹ ಪ್ರತಿನಿಧಿಯನ್ನು ಆಯ್ಕೆ ಮಾಡಲು ನಿಗದಿಗೊಳಿಸಿರುವ ವಿದ್ಯಾರ್ಹತೆ:

ಇ) ಈ ಹುದ್ದೆ ಕಳೆದ ಆರುತಿಂಗಳಿಂದ ಖಾಲಿ ಇದೆಯೆ: ಹಾಗಿದ್ದಲ್ಲಿ ಅದಕ್ಕೆ ಕಾರಣಗಳು:

ಈ) ಸರ್ಕಾರವು ಈ ಹುದ್ದೆಗೆ ಅರ್ಹ ವ್ಯಕ್ತಿಗಳನ್ನು ದೊರಕಿಸಿಕೊಳ್ಳಲು ಪ್ರಯತ್ನ ಮಾಡಿದೆಯೆ, ಹಾಗಿದ್ದಲ್ಲಿ ಅದರ ವಿವರಗಳು?

ಶ್ರೀ ಕೆ. ಪುಟ್ಟಸ್ವಾಮಿ:- (ಕಾನೂನು, ಕಾರ್ಮಿಕ ಮತ್ತು ಸಂಸದೀಯ ವ್ಯವಹಾರಗಳ ಮಂತ್ರಿಗಳು):-

ಅ) ಕೇಂದ್ರ ಸರ್ಕಾರವು ನೇಮಕ ಮಾಡಲು ರಾಜ್ಯ ಸರ್ಕಾರವು ಒಬ್ಬರನ್ನು ನಾಮ ನಿರ್ದೇಶನ ಮಾಡಿದೆ: ಆದರೆ ಇದುವರೆಗೂ ಅದು ನೇಮಕ ಮಾಡಿಲ್ಲ,

ಆ) ಅಂತಹ ಪ್ರತಿನಿಧಿಯು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ಸ್ಥಾನದಲ್ಲಿದ್ದು ಇತ್ತೀಚಿಗೆ ನಿವೃತ್ತರಾದ ಅಥವಾ ಸದ್ಯದಲ್ಲಿಯೇ ನಿವೃತ್ತಿ ಪಡೆಯಲಿರುವ ವ್ಯಕ್ತಿಯಾಗಿರಬೇಕು ಅಥವಾ ಅದಕ್ಕೆ ಸಮನಾದ ಹುದ್ದೆಯಲ್ಲಿದ್ದ ಅಧಿಕಾರಿಯಾಗಿದ್ದು ರಾಜ್ಯ ಭಾಷಾ ಆಯೋಗ ಅಥವಾ ಅಂತಹ ಸಂಸ್ಥೆಯೊಂದಿಗೆ ಕಾರ್ಯ ನಿರತವಾಗಿರಬೇಕು: ಅಥವಾ ಕಾನೂನು ವೃತ್ತಿಯಲ್ಲಿ ಸಮರ್ಥ ವ್ಯಕ್ತಿಯಾಗಿದ್ದು ಆ ಹುದ್ದೆಗೆ ನೇಮಕ ಮಾಡಲು ಸೂಕ್ತವೆಂದು ಪರಿಗಣಿತವಾಗಿರಬೇಕು. ಅಂತಹವನು ಕನ್ನಡ ಭಾಷೆಯಲ್ಲಿ ಸಾಕಷ್ಟು ಪರಿಣತಿ ಪಡೆದಿರಬೇಕು.

ಇ) ಹೌದು, ಅಂತಹ ಸೂಕ್ತ ವ್ಯಕ್ತಿ ಕಂಡುಬರಲಿಲ್ಲ.

ಈ) ಹೌದು, ಶ್ರೀ ಬಿ.ಕೆ. ರಾಮಚಂದ್ರರಾವ್, ವಕೀಲರು, ಬೆಂಗಳೂರು, ಇವರನ್ನು ಭಾರತ ಸರ್ಕಾರಕ್ಕೆ ಭಾರತ ಸರ್ಕಾರದ ಕಾನೂನು ಖಾತೆ ಅಡಿ ಬರುವ ರಾಜ ಭಾಷಾ (ಶಾಸಕಾಂಗ) ಆಯೋಗದ ಪೂರ್ಣಾವಧಿ ಸದಸ್ಯರಾಗಿ (ಕನ್ನಡ) ನೇಮಿಸಲು ಸಲಹೆ

---

* ವಿಧಾನ ಪರಿಷತ್ತಿ ಕಲಾಪ ದಿನಾಂಕ: 26-3-1969

ಮಾಡಲಾಗಿದೆ. ತರುವಾಯ ಅವರು 1968 ರ ಏಪ್ರಿಲ್ 1ನೇ ದಿನಾಂಕದಿಂದ ಈ ನೇಮಕದ ಅವಧಿ ಕೇವಲ ಎರಡು ವರ್ಷಗಳು ಮಾತ್ರವಾಗಿರುವ ಕಾರಣದ ಮೇರೆಗೆ ಈ ನೇಮಕವನ್ನು ಒಪ್ಪಿಕೊಳ್ಳಲು ನಿರಾಕರಿಸಿದರು.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ಇಂತಹ ಮಹತ್ತರವಾದ ಕಾರ್ಯಕ್ಕಾಗಿ ಇಷ್ಟು ನಿಧಾನವಾಗಿ ನೇಮಕ ಮಾಡತಕ್ಕಂಥದ್ದನ್ನು ಕರ್ತವ್ಯಚ್ಯುತಿ ಎಂದು ಭಾವಿಸಬಹುದೇ?

ಶ್ರೀ ಕೆ. ಪುಟ್ಟಸ್ವಾಮಿ:-

ಇದು ಕರ್ತವ್ಯಚ್ಯುತಿ ಅಲ್ಲ. ನೇಮಕಮಾಡಿಕೊಳ್ಳಬೇಕಾಗಿರುವವರು ಕೇಂದ್ರ ಸರ್ಕಾರದವರು. ಅವರು ನಮಗೆ ಪೇನಲ್ ಕಳಿಸಿಕೊಡಿ ಎಂದು ಕೇಳಿದ್ದಾರೆ. ನಮಗೆ ಸೂಕ್ತವಾದಂಥ ಜನ ಇನ್ನೂ ಸಿಕ್ಕಿಲ್ಲ. ದೊರಕಿದ ಕೂಡಲೇ ಕಳಿಸಿಕೊಡುತ್ತೇವೆ.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ಮೈಸೂರು ಯೂನಿವರ್ಸಿಟಿಯಲ್ಲಿ ಹಿಂದಿ ಡಿಪಾರ್ಟ್‌ಮೆಂಟ್‌ನಲ್ಲಿ ಶ್ರೀ ಎಂ. ರಾಜೇಶ್ವರಯ್ಯ ಎನ್ನುವವರು ಇದ್ದಾರೆ. ಕೇಂದ್ರ ಸರ್ಕಾರದವರು ಕೇಳಿರತಕ್ಕಂಥ ಎಲ್ಲಾ ನಿಯಮಗಳಿಗೂ ಅವರು ಬದ್ಧರಾಗಿದ್ದು ಅರ್ಹತೆ ಪಡೆದಿರುತ್ತಾರೆ. ಆದ್ದರಿಂದ ಅವರ ಹೆಸರನ್ನು ಕೇಂದ್ರ ಸರ್ಕಾರಕ್ಕೆ ಕಳಿಸಿಕೊಟ್ಟಿದ್ದೀರಾ?

**Sri K. PUTTASWAMY:-**

I am sorry that this has been almost a daily feature in the legislature. The officials begin to act through the members. The person named by the hon. member had approached me and I told him that he is not qualified in view of the fact that the requirements laid down by the Government of India Language Commission, are quite different. For the information of the hon. Members. I would like to read the direction:

> "He should be a person who has recently retired or is due for retirement soon as District and Sessions Judge or an officer of equivalent rank preferably associated with the State Language Commission or a Corresponding agency or an eminent person from the legal profession who is otherwise considered suitable for a appointment to the post".

ಶ್ರೀ ಕೆ. ಸೂರ್ಯನಾರಾಯಣ ಅಡಿಗ:-

ಕೇಂದ್ರ ಸರ್ಕಾರದವರು ನಿಗದಿ ಮಾಡಿದಂಥ ಯಾವುದೇ ಅರ್ಹತೆ ಇಲ್ಲದಿದ್ದರೂ ಕೂಡ ಈ ಮಹಾಶಯರೊಬ್ಬರು ಮಾನ್ಯ ಮಂತ್ರಿಗಳ ಹತ್ತಿರ ಬಂದಾಗ್ಗೆ ಕೇಂದ್ರ ಸರ್ಕಾರ ನಿಗದಿ ಮಾಡಿದ ಅರ್ಹತೆ ಇಲ್ಲದೆ ಇದ್ದರೆ ಯಾವ ಅರ್ಹತೆ ಆಧಾರದ ಮೇಲೆ ಅವರನ್ನು ಶಿಫಾರಸ್ಸು ಮಾಡಬೇಕೆಂದು ಹೇಳಿದರು ಎಂಬುದನ್ನು ದಯಮಾಡಿ ಮಾನ್ಯ ಮಂತ್ರಿಗಳು ಹೇಳಬಹುದೇ?

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಸದಸ್ಯರು ನನ್ನ ಜೊತೆಯಲ್ಲಿ ಏನು ಹೇಳಿದರು ಎನ್ನುವುದನ್ನು ನಾನು ಹೇಳುವುದಿಲ್ಲ, ಕೇಂದ್ರ ಸರ್ಕಾರದವರು ಏನು ಅರ್ಹತೆ ಬೇಕು ಎಂದು ಕೇಳಿದ್ದಾರೋ ಅದನ್ನು ಅವರಿಗೆ ಹೇಳಿದ್ದೇನೆ. ಅರ್ಹತೆ ಇರುವಂತಹವರು ನಮಗೆ ದೊರಕಿದರೆ ಅಂತಹವರನ್ನು ನಾವು ಅತ್ಯಂತ ಸಂತೋಷದಿಂದ ಕಳಿಸಿಕೊಡುತ್ತೇವೆ.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ಮಾನ್ಯ ಮಂತ್ರಿಗಳು ತಮ್ಮ ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಈ ರೀತಿ ಹೇಳತಕ್ಕದ್ದು ಸರಿಯಾದುದು ಅಲ್ಲ. ಅವರು ಹೇಳುವುದು Casting aspersions against the member ಎಂದು ಆಗುತ್ತದೆ. ಕಾನೂನು ಪುಸ್ತಕಗಳನ್ನು ತರ್ಜುಮೆ ಮಾಡುವುದಕ್ಕೆ ಸರ್ಕಾರಕ್ಕೆ ಯೋಗ್ಯತೆ ಇಲ್ಲವೇ? ಕನ್ನಡ ದೇಶದಲ್ಲಿ ಅಂತಹವರು ಯಾರೂ ಸಿಕ್ಕಲಿಲ್ಲವೇ? ಕನ್ನಡ ರಾಜ್ಯದಲ್ಲಿ ಅಂತಹ ಯೋಗ್ಯತೆ ಇರುವವರು ಯಾರೂ ಇಲ್ಲವೇ? ಇವರನ್ನು ಕೇಂದ್ರ ಸರ್ಕಾರದವರು ನೇಮಕ ಮಾಡಬೇಕೆಂದು ಹೇಳಿದಿರಿ, ಯಾರನ್ನಾದರೂ ನೇಮಕಮಾಡಿ ಎಂದು ನಾನು ಹೇಳುವುದಿಲ್ಲ. ನಾನು ಹೇಳಿದಂಥವರಿಗೆ ಅರ್ಹತೆ ಇಲ್ಲ ಎಂದು ಬೇಕಾದರೆ ಹೇಳಲಿ, ಅವರು ಕಾನೂನು ತಜ್ಞರಿದ್ದಾರೆ. ಅವರಿಗೆ ಎಲ್. ಎಲ್. ಬಿ. ಆಗಿದೆ. ಇತರೇ ಅರ್ಹತೆಗಳು ಇವೆ. ಅವರು ಮೈಸೂರು ರಾಜ್ಯದವರಾಗಿದ್ದಾರೆ. ಅದಕ್ಕೋಸ್ಕರ ನಾನು ಅವರ ಹೆಸರನ್ನು ಹೇಳಿದೆ. ಅಂಥವರು ಕನ್ನಡ ರಾಜ್ಯದಲ್ಲಿ ಯಾರೂ ಇಲ್ಲವೇ? ಅದು ಮುಖ್ಯವಾಗಿ ಆಗತಕ್ಕಂಥ 'ಕೆಲಸ' ಅದನ್ನು ಮಾಡಬೇಕೆಂದು ಮಾನ್ಯ ಮಂತ್ರಿಗಳು ಯೋಚನೆ ಮಾಡಿದ್ದೀರಾ:

**Sri K. PUTTASWAMY:-**

I appreciate the feelings of the hon. Member, I have already pointed out that the qualifications required of the Person to be sponsored are that he should have been engaged in interpreting law or should have practised before a court of law and assisted the courts in interpreting law. It is a question of fixing Kannada equivalents to English terms. The hon. Member seems to be under a wrong impression that it is a question of

translation. If only translators are required the Government of India will go to the open market, advertise and appoint persons as translators, but it is an additional member of the Language Commission who will sit in Judgement over the translation and fix up whether the proposed word in Kannada is equivalent to the English word and gives the same meaning. Therefore, the hon. member seems to be under a wrong impression that it is a question of helping the Government of India to get suitable translators. The Government of India can get suitable translators in the open market, but it is a question of sponsoring a person to be a member of the Language Commission.

**Mr. CHAIRMAN:-**

How long it will take ?

**Sri K. PUTTASWAMY:-**

I cannot say just at present what time it will take because we have not been able to come across persons who are willing to go to Delhi.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ಅಂಥಾ ಎಕ್ಸ್‌ಪರ್ಟ್ ಯಾರೇ ಆಗಲಿ, ಯೋಗ್ಯತೆ ಇರತಕ್ಕವರು ಕನ್ನಡ ನಾಡಿನಲ್ಲಿ ಯಾರೂ ಇಲ್ಲವೇ? ಅದನ್ನು ಕಂಡುಹಿಡಿದು ಒಂದು ತಿಂಗಳೊಳಗಾಗಿ ಅವರನ್ನು ನೇಮಿಸುತ್ತೀರಾ?

**Sri K. PUTTASWAMY:-**

Again the hon. Member is making a mistake. It is not my responsibility or the responsibility of this Government to appoint persons, but the Government of India have requested us to sponsor a panel. Even if we do not sponsor a penal it is the responsibility of the Government of India to appoint persons. For a responsibility which has to be discharged by the Government of India I should not be taken to task here.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ನಮ್ಮ ರಾಜ್ಯ ಸರ್ಕಾರಕ್ಕೆ ಅವರನ್ನು ಕಳುಹಿಸುವ ಯೋಗ್ಯತೆ ಇಲ್ಲವೇ? ಇಲ್ಲದಿದ್ದರೆ ಹೇಳಿ. ನಾವು ಕೇಂದ್ರ ಸರ್ಕಾರಕ್ಕೆ ಅಂಥವರನ್ನು ಕಳುಹಿಸಿಕೊಡುತ್ತೇವೆ. ಈ ಬಗ್ಗೆ ಮಾನ್ಯ ಮಂತ್ರಿಗಳು ಏನು ಹೇಳುತ್ತೀರಾ?

**Sri K. PUTTASWAMY:-**

That is a different mater altogether. I am not going beyond what I have said. Government will make all-out efforts to find out persons who would satisfy according to the requirements of the Government of India and who are willing to go to Delhi.

**Smt. M.R. LAKSHAMMA:-**

May I know from the Minister whether they have a panel before them, and if so which are the names?

**Sri. K. PUTTASWAMY:-**

I HAVE ALREADY SAID THAT THE name of one advocate Sri B. K. Ramachandra Rao was suggested to the Government of India. But he is unwilling to go to Delhi as the term is only for 2 years and he cannot afford to give up his practice here and to there.

**Smt. M. R. LAKSHAMMA:-**

If any suggestions are forthcoming from members, will the Ministers consider them?

**Sri K. PUTTASWAMY:-**

I would like to give some more information on this question. I have had discussion on this question with the present Chairman of the Language Commission here. He seems to feel that in his opinion it would be more advantageous to request the Government of India to nominate the Chairman of the Language Commission here or any other member as additional member on the Central Language Commission so that they may be able to get at the same words. All these questions are being discussed and I may say that it is very necessary that the representative of the Government of Mysore discuss this matter with the Law Minister and then come to a decision on this point.

**Smt. M.R. LAKSHAMMA:-**

My question was different. If any member of this House or the other house were to give names. Will the Minister consider them?

**Sri K. PUTTASWAMY:-**

I shall be very happy to consider those names.

ಶ್ರೀ ಎಸ್. ಪಿ. ರಾಜಣ್ಣ:-

ಶ್ರೀ ಬಿ. ಕೆ. ರಾಮಚಂದ್ರರಾವ್ ಅವರನ್ನು ನೇಮಕ ಮಾಡಬೇಕೆಂದು ಭಾರತ ಸರ್ಕಾರದವರಿಗೆ ಸೂಂಚಿಸಲಾಗಿದ್ದಿತು ಎಂದು ಹೇಳಿದ್ದೀರಿ? ಇವರು ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ್ದರೇ, ಅಡ್ವೋಕೇಟ್, ಆಗಿದ್ದರೇ ಮತ್ತು ಲಾ ಗ್ರಾಜುಯೇಟ್ ಆಗಿದ್ದರೇ?

**Sri K. PUTTASWAMY:-**

As far as I know he is a Law Graduate and Hindi Lecturer in Mysore University.

ಶ್ರೀ ಎ. ಎಚ್. ಶಿವಾನಂದಸ್ವಾಮಿ:-

ಈ ವಿಚಾರದಲ್ಲಿ ಕೇಂದ್ರ ಸರ್ಕಾರಕ್ಕೆ ಯೋಗ್ಯರಾದವರ ಹೆಸರುಗಳನ್ನು ಕಳಿಸುತ್ತೀರಾ ಇಲ್ಲವೆ ಕನ್ನಡ ನಾಡಿನಲ್ಲಿ ಯೋಗ್ಯರಾದವರು ಯಾರೂ ಇಲ್ಲವೆಂದು ಕೇಂದ್ರ ಸರ್ಕಾರಕ್ಕೆ ತಿಳಿಸುತ್ತೀರಾ ಎಂದು ಮಾನ್ಯ ಮಂತ್ರಿಗಳನ್ನು ಅಧ್ಯಕ್ಷರ ಮೂಲಕ ಕೇಳಿಕೊಳ್ಳುತ್ತೇನೆ.

ಶ್ರೀ ಕೆ. ಪುಟ್ಟಸ್ವಾಮಿ:-

ಈಗ ತಾನೇ ಹೇಳಿದೆ, ಈ ಬಗ್ಗೆ ಭಾರತ ಸರ್ಕಾರದ ಕಾನೂನು ಮಂತ್ರಿಗಳ ಹತ್ತಿರ ಚರ್ಚೆ ಮಾಡುವ ಆವಶ್ಯಕತೆ ಇದೆ ಎಂದು. ನಮ್ಮ ಮೈಸೂರು ರಾಜ್ಯದ ಲಾಂಗ್‌ವೇಜ್ ಕಮಿಷನ್‌ನ ಅಧ್ಯಕ್ಷರಾಗಲೀ ಅಥವಾ ಸದಸ್ಯರಾಗಲೀ ಸೆಂಟ್ರಲ್ ಲಾಂಗ್‌ವೇಜ್ ಕಮೀಷನ್ ಸದಸ್ಯರಾಗಿದ್ದರೆ ಪದಗಳನ್ನು ನಿಶ್ಚಯ ಮಾಡುವ ಸಮಯದಲ್ಲಿ ಸ್ಥಳೀಯ ಸರ್ಕಾರದ ಕಾನೂನು ಆಗಲಿ, ಕೇಂದ್ರ ಸರ್ಕಾರದ ಕಾನೂನು ಆಗಲಿ ಆ ಬಗ್ಗೆ ಒಂದೇ ಪದ ಉಪಯೋಗಿಸುವುದಕ್ಕೆ ಅನುಕೂಲವಾಗುತ್ತದೆಂದು ಅಭಿಪ್ರಾಯಪಟ್ಟಿದ್ದೇವೆ. ಈ ವಿಚಾರದಲ್ಲಿ ಕೇಂದ್ರದ ಕಾನೂನು ಮಂತ್ರಿಗಳ ಹತ್ತಿರ ಚರ್ಚೆಮಾಡಿ ನಂತರ ತೀರ್ಮಾನ ಮಾಡುವುದು ಒಳ್ಳೆಯದೆಂದು ನಾನು ತಿಳಿದುಕೊಂಡಿದ್ದೇನೆ.

**ಸಭಾಪತಿಯವರು:-**

ಪ್ರಶ್ನೋತ್ತರ ಕಾಲ ಮುಗಿಯಿತು.

## 8. ರಾಜ್ಯ ಆಯವ್ಯಯ ಪತ್ರ ಕುರಿತ ಚರ್ಚೆ:- 1973-74.*

ಶ್ರೀ ಕೆ. ಪುಟ್ಟಸ್ವಾಮಿ (ಚಾಮುಂಡೇಶ್ವರಿ):-

ಮಾನ್ಯ ಅಧ್ಯಕ್ಷರೇ, 1973-74ನೇ ಸಾಲಿನ ಆಯವ್ಯಯ ಅಂದಾಜನ್ನು ನಾನು ಪುಷ್ಟೀಕರಿಸುತ್ತ ಕೆಲವು ವಿಚಾರಗಳನ್ನು ಹೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ಕಾಲಮಿತಿ ಇರುವುದರಿಂದ ನಾನು ಹೆಚ್ಚಿನ ವಿಚಾರಗಳನ್ನು ಪ್ರಸ್ತಾಪ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಈ ಸಂದರ್ಭದಲ್ಲಿ ನಮ್ಮ ದೇಶದ ರಾಜಕೀಯ ಪರಿಸ್ಥಿತಿಯ ವಿಚಾರವಾಗಿ ಕೆಲವು ಮಾತನ್ನು ಆಡುವುದು ಆವಶ್ಯಕ ಎಂದು ನನಗಾದರೂ ಭಾಸವಾಗುತ್ತದೆ.

ಮಾನ್ಯ ಅಧ್ಯಕ್ಷರೇ, 1967ನೇ ಇಸವಿಯಲ್ಲಿ ಸಾರ್ವತ್ರಿಕ ಚುನಾವಣೆಯಾದ ಮೇಲೆ ನಮ್ಮ ದೇಶದ ಹಲವು ರಾಜ್ಯಗಳಲ್ಲಿ ಸ್ಥಿರವಾದ ಸರ್ಕಾರಗಳು ಬರುವುದಕ್ಕೆ ಸಾಧ್ಯವಾಗದೆ ಅಲ್ಲಿನ ಜನರಿಗೆ ಬಹಳ ತೊಂದರೆಯಾದದ್ದು ನಮಗೆಲ್ಲರಿಗೂ ಜ್ಞಾಪಕವಿದೆ. ಸುದೈವದಿಂದ ನಮ್ಮ ರಾಜ್ಯದಲ್ಲಿ ಆ ಪರಿಸ್ಥಿತಿ ಒದಗಿರಲಿಲ್ಲ. ಬಹುಶ: ಅದೇ ರಾಜಕೀಯ ಪರಿಸ್ಥಿತಿ ಮುಂದುವರಿದಿದ್ದರೆ 1972ನೇ ಇಸವಿಯಲ್ಲಿ ಚುನಾವಣೆಯಾದಾಗ ಮೈಸೂರು ರಾಜ್ಯದಲ್ಲಿ ಅದೇ ಪರಿಸ್ಥಿತಿ ಬರಬಹುದಾಗಿತ್ತು ಅಥವಾ ಇನ್ನೂ ಎಲ್ಲೆಲ್ಲಿ ಸ್ಥಿರವಾದ ರಾಜಕೀಯ ಪರಿಸ್ಥಿತಿ ಇತ್ತೋ ಅಲ್ಲೂ ಕೂಡ ಅಸ್ಥಿರವಾದ ರಾಜಕೀಯ ಪರಿಸ್ಥಿತಿ ಬರುವ ಸಂಭವವಿತ್ತು. ಈ ಮಧ್ಯೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನಲ್ಲಿ ಒಡಕು ಬಂದು ಶ್ರೀಮತಿ ಇಂದಿರಾಗಾಂಧಿಯವರ ದಿಟ್ಟ ರಾಜಕೀಯ ನಿಲುವಿನ ದೆಸೆಯಿಂದ ನಮ್ಮ ದೇಶದ ರಾಜಕೀಯ ಪರಿಸ್ಥಿತಿ ಬಹಳವಾಗಿ ಬದಲಾವಣೆ ಯಾಯಿತು. ಅವರು ದೇಶದ ಜನರ ಮುಂದೆ ಇಟ್ಟ ಧ್ಯೇಯ ಧೋರಣೆಗಳ ದೆಸೆಯಿಂದ ನಮ್ಮ ದೇಶದಾದ್ಯಂತ ಎಲ್ಲ ರಾಜ್ಯಗಳಲ್ಲಿಯೂ ಕೂಡ ಭದ್ರವಾದ ಸರ್ಕಾರ ಬರುವುದಕ್ಕೆ ಸಾಧ್ಯವಾಯಿತು. ಅದೆಲ್ಲಕ್ಕಿಂತಲೂ ಹೆಚ್ಚಾಗಿ ಕೇಂದ್ರದಲ್ಲಿ ಸಂಸತ್ತಿನಲ್ಲಿ ಮೂರನೇ ಎರಡು ಭಾಗಕ್ಕಿಂತಲೂ ಹೆಚ್ಚು ಇಂದಿರಾಗಾಂಧಿಯವರಿಗೆ ಬೆಂಬಲ ಸಿಕ್ಕಿದ ಕಾರಣದಿಂದ ರಾಜ್ಯಾಂಗದಲ್ಲಿ ಬದಲಾವಣೆ ಯಾಗುವುದಕ್ಕೂ, ಬದಲಾವಣೆಗಳನ್ನು ಮಾಡುವುದಕ್ಕೂ ಸಾಧ್ಯವಾಯಿತು. ರಾಜ್ಯಾಂಗದಲ್ಲಿ ಬದಲಾವಣೆಗಳಾಗುವುದರ ದೆಸೆಯಿಂದ ಇಂದಿರಾಗಾಂಧಿಯವರು ದೇಶದಲ್ಲಿ ಯಾವ ಒಂದು ಆರ್ಥಿಕ ಧೋರಣೆಯನ್ನು ತಾಳಿದರೋ ಆ ಆರ್ಥಿಕ ಧೋರಣೆ ಅನುಷ್ಠಾನಕ್ಕೆ ಬರುವುದಕ್ಕೆ ಬೇಕಾದಂಥ ರಾಜ್ಯಾಂಗ ತಿದ್ದುಪಡಿಗಳನ್ನು ಕೂಡ ಮಾಡುವುದಕ್ಕೆ ಅನುಕೂಲವಾಯಿತು. ಬಹುಶ: ಇಂದಿರಾಗಾಂಧಿಯವರು ರಾಜಕೀಯದಲ್ಲಿ ಆ ದಿಟ್ಟ ನಿಲುವು ತಾಳದೆ ಇದ್ದಿದ್ದರೆ, ಆರ್ಥಿಕ ಧೋರಣೆಯನ್ನು ತಾಳದೆ ಇದ್ದಿದ್ದರೆ, ನಮ್ಮ ದೇಶದ ಬಹು ರಾಜ್ಯಗಳಲ್ಲಿ ಸ್ಥಿರವಾದ ಸರ್ಕಾರ ಬರುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. 1967 ರಿಂದ 1972ರವರೆಗೆ ಪಶ್ಚಿಮ ಬಂಗಾಳದಲ್ಲಿ ಎಂಥ ಪ್ರಕ್ಷುಬ್ಧ ಪರಿಸ್ಥಿತಿ ಇತ್ತು ಎನ್ನುವುದು ನಮಗೆಲ್ಲ ಜ್ಞಾಪಕವಿದೆ. ಆ ಪರಿಸ್ಥಿತಿ ಎಲ್ಲ ನಿವಾರಣೆಯಾಗಿ, ದೇಶಾದ್ಯಂತ ಕೇಂದ್ರದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ಕೂಡ ಭದ್ರವಾದ ಸರ್ಕಾರಗಳು ಬಂದು ಇಂದಿರಾಗಾಂಧಿಯವರು ಯಾವ ಆರ್ಥಿಕ ನಿಲುವನ್ನು ತಾಳಿದರೋ ಆ ಆರ್ಥಿಕ ನಿಲುವನ್ನು

---

* ವಿಧಾನ ಸಭಾ ರೂಪ ದಿನಾಂಕ: 19-3-1973

2157-7

ಅನುಷ್ಠಾನಕ್ಕೆ ತರುವುದಕ್ಕೆ ಒಳ್ಳೆಯ ವಾತಾವರಣ ಕಲ್ಪನೆಯಾದದ್ದು ಶ್ರೀಮತಿ ಇಂದಿರಾಗಾಂಧಿಯವರ ಧೈರ್ಯ ಮತ್ತು ಸಾಹಸಪೂರ್ಣವಾದ ರಾಜಕೀಯ ಹೆಜ್ಜೆಯಿಂದ ಎನ್ನುವುದನ್ನು ಈ ಸಮಯದಲ್ಲಿ ನಾವೆಲ್ಲರೂ ಸ್ಮರಿಸಿಕೊಳ್ಳಬೇಕು. 1971ರಿಂದೀಚೆಗೆ ಪರಿಸ್ಥಿತಿ ಬದಲಾವಣೆಯಾಗಿದೆ. ರಾಜ್ಯಾಂಗ ಶಾಸನದಲ್ಲಿ ಬೇಕಾದಂಥ ತಿದ್ದುಪಡಿಗಳೆಲ್ಲ ಆಗಿ ದೇಶಾದ್ಯಂತ ಎಲ್ಲ ಸರ್ಕಾರಗಳೂ ಕೂಡ ಆರ್ಥಿಕ ಪರಿಸ್ಥಿತಿಯ ಬದಲಾವಣೆಗೆ ಬೇಕಾದಂಥ ಕಾನೂನುಗಳನ್ನು ಮಾಡುವುದಕ್ಕೆ ಹಾಗೂ ಆಡಳಿತ ದೃಷ್ಟಿಯಿಂದ ಮಾಡಬೇಕಾದ ಬದಲಾವಣೆಗಳನ್ನು ಮಾಡುವುದಕ್ಕೆ ಪ್ರಯತ್ನ ಮಾಡುತ್ತಿವೆ. ಇದಕ್ಕೆ ನಮ್ಮ ದೇಶದಲ್ಲಿರತಕ್ಕ ಎಲ್ಲ ತಿಳಿದ ಜನರ ಬೆಂಬಲವೂ ಕೂಡ ಅತ್ಯವಶ್ಯಕ. ನಮ್ಮ ದೇಶದಲ್ಲಿ, ಮೈಸೂರು ರಾಜ್ಯದಲ್ಲಿಯೂ ಕೂಡ ಇಂಥ ದಿಟ್ಟವಾದ ಆರ್ಥಿಕ ಕ್ರಮಗಳಿಗೆ ಎಲ್ಲ ಪಕ್ಷಗಳು ಎಲ್ಲ ಪಂಗಡಗಳ ಬೆಂಬಲ ಇರುವುದನ್ನು ನೋಡಿ ನಾನು ಬಹಳ ಮೆಚ್ಚಿದ್ದೇನೆ. ಮತ್ತು ಇಂಥ ಪರಿಸ್ಥಿತಿಗೆ ದೇಶದಲ್ಲಿ ನಾವು ಏನು ನಿರೀಕ್ಷೆ ಮಾಡಿದ್ದೆವೋ ಆ ಮಟ್ಟದ ಪ್ರಗತಿ ಆಗದೆ ಇರುವುದಕ್ಕೆ ಪ್ರಕೃತಿಯ ವಿಕೋಪವೇ ಅಡ್ಡಿಯಾಗಿದೆ. ಈ ವರ್ಷದಲ್ಲಿ ಅನೇಕ ರಾಜ್ಯಗಳಲ್ಲಿ ಕ್ಷಾಮ ಪರಿಸ್ಥಿತಿ ತಲೆದೋರಿತು. ನಮ್ಮ ರಾಜ್ಯದಲ್ಲಿಯೂ ಕೂಡ ಪರಿಸ್ಥಿತಿ ಕೆಲವು ಜಿಲ್ಲೆಗಳಲ್ಲಿ ತೀರ ಹದಗೆಟ್ಟಿದೆ. ಮೂರನೇ ಒಂದು ಭಾಗದ ಜನ ವಾಸಮಾಡುವ ಪ್ರದೇಶ ಬರಗಾಲ ಪರಿಸ್ಥಿತಿಗೆ ಒಳಗಾಗಿದೆ. ಇಂಥ ಭೀಕರ ಬರಗಾಲ ಪರಿಸ್ಥಿತಿಯನ್ನು ನಮ್ಮ ಸರ್ಕಾರ ಬಹಳ ಧೈರ್ಯದಿಂದ ಆ ಸಮಸ್ಯೆಯನ್ನು ಬಿಡಿಸುವುದಕ್ಕೆ ಪ್ರಯತ್ನ ಮಾಡುತ್ತಿದೆ. ಆ ಪ್ರಯತ್ನಕ್ಕೆ ಕೂಡ ಸಾಕಷ್ಟು ಬೆಂಬಲ ನಮ್ಮ ದೇಶದಲ್ಲಿ ದೊರೆತಿದೆ ಎಂದು ಹೇಳುವುದಕ್ಕೆ ನನಗೆ ಸಂತೋಷ. ಆದರೂ ಅಲ್ಲಿ ಇಲ್ಲಿ ಒಡಕು ಶಬ್ದವಿದೆ. ನಾವು ಎಷ್ಟು ಮಟ್ಟದ ಸಹಕಾರವನ್ನು ಕೆಲವು ಪಕ್ಷಗಳಿಂದ ನಿರೀಕ್ಷೆ ಮಾಡುತ್ತಿದ್ದೇವೊ ಆ ಮಟ್ಟದ ಸಹಕಾರ ನಮಗೆ ದೊರೆತಿಲ್ಲ. ಇದು ಬಹಳ ವಿಷಾದಕರವಾದ ಸಂಗತಿ. ಆದರೂ ಕೂಡ ಸರ್ಕಾರ ತನ್ನ ನೀತಿಯನ್ನು ಮುಂದುವರಿಸುವುದಕ್ಕೆ, ತನ್ನ ಕಾರ್ಯ ಕ್ರಮಗಳನ್ನು ಮುಂದುವರಿಸುವುದಕ್ಕೆ ಬಹುಶ: ಈಗ ಇರತಕ್ಕ ಒಂದು ಒಡಕು ಧ್ವನಿ ಅಡ್ಡಿ ಬರಲಾರದು. ಅಡ್ಡಿ ಬಂದರೂ ಕೂಡ ಅದನ್ನು ನಿವಾರಣೆ ಮಾಡಿಕೊಂಡು ಸರ್ಕಾರ ತನ್ನ ಗುರಿಯನ್ನು ಸಾಧಿಸುವುದಕ್ಕೆ ಒಳ್ಳೆಯ ವಾತಾವರಣ ನಮ್ಮ ರಾಜ್ಯದಲ್ಲಿ ಇದೆ ಎಂದು ನನಗಾದರೂ ಭಾಸವಾಗಿದೆ. ನಮ್ಮ ದೇಶದಲ್ಲಿ ಮಧ್ಯಂತರ ಚುನಾವಣೆಗಳಾದ ಮೇಲೆ ಅನೇಕ ಆತಂಕಗಳು ಬಂದವು. ಬಹುಶ: ಬಾಂಗ್ಲಾದೇಶದ ಯುದ್ಧ ಬಾರದೆ ಇದ್ದಿದ್ದರೆ ಇಂಡಿಯಾ ಸರ್ಕಾರ ಇನ್ನೂ ಹೆಚ್ಚಿನ ತ್ವರಿತವಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುತ್ತಿತ್ತು ಮತ್ತು ಎಷ್ಟೋ ಪ್ರಮಾಣದಲ್ಲಿ ಅವರ ಕಷ್ಟಗಳನ್ನು ಕಡಿಮೆ ಮಾಡುವುದಕ್ಕೆ ಅನುಕೂಲವಾಗುತ್ತಿತ್ತು ಎಂದು ನನಗಾದರೂ ಅನ್ನಿಸುತ್ತದೆ.

ಆದರೆ ನಮ್ಮ ದುರದೃಷ್ಟದಿಂದ ಚುನಾವಣೆಯಾದ ಕೂಡಲೇ ಬಂಗ್ಲಾ ದೇಶದ ಪರಿಸ್ಥಿತಿ ಬಂತು, ಪೂರ್ವ ಬಂಗಾಲದ ಕಡೆಯಿಂದ ಕೋಟಿಗಟ್ಟಲೆ ಜನ ನಮ್ಮ ದೇಶಕ್ಕೆ ವಲಸೆ ಬಂದರು. ಇದರಿಂದ ರೆಫ್ಯೂಜಿ ಪ್ರಾಬ್ಲಂ ಎನ್ನುವುದು ಒಂದು ಈ ಸಮಸ್ಯೆ ಪರಿಹಾರಕ್ಕಾಗಿ ಇದಕ್ಕೆ ಬೇರೆ ಹಣ ಖರ್ಚುಮಾಡಬೇಕಾಯಿತು. ಅನಂತರದಲ್ಲಿ ಯುದ್ಧ ಪರಿಸ್ಥಿತಿ ಬಂದಿದೆ. ಯುದ್ಧ ಪರಿಸ್ಥಿತಿ ಮುಗಿದ ಮೇಲೆ ಯುದ್ಧಾನಂತರದ ಪರಿಸ್ಥಿತಿ ಬಂತು. ಇದರಿಂದಾಗಿ ಸಾಮಾನ್ಯವಾಗಿ ದೇಶದಲ್ಲಿ ಆರ್ಥಿಕ ಪ್ರಗತಿ ಸಾಧಿಸುವುದಕ್ಕೆ ಎಡೆಗೊಡದ ಪರಿಸ್ಥಿತಿ ಅಲ್ಲದಿದ್ದರೂ ಪೂರ್ವ ಬಂಗಾಳದಲ್ಲಿ

ಆದ ಆಂದೋಳನದ ದೆಸೆಯಿಂದಾಗಿ ನಮ್ಮ ಆರ್ಥಿಕ ಪರಿಸ್ಥಿತಿಯ ಮೇಲೆ ಆದ ಪರಿಣಾಮದ ಜೊತೆಗೆ ಈ ವರ್ಷದಿಂದ ಬಂದಿರುವ ಕ್ಷಾಮ ಪರಿಸ್ಥಿತಿಯಿಂದಾಗುವ ಪರಿಣಾಮವೂ ಆಗಿದೆ. ಎರಡು ವರ್ಷದಿಂದ ಇಂತಹ ಪರಿಸ್ಥಿತಿಗಳು ಬಂದು ಒದಗಿರುವುದರಿಂದಾಗಿ ಇಂಡಿಯಾ ಸರಕಾರದವರು ಯಾವ ಪ್ರಮಾಣದಲ್ಲಿ ಕ್ರಮ ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗಿತ್ತೋ ಆ ಪ್ರಮಾಣದಲ್ಲಿ ತಕ್ಕ ಕಾರ್ಯಕ್ರಮವನ್ನು ತೆಗೆದುಕೊಳ್ಳುವುದಕ್ಕಾಗಲಿಲ್ಲ. ಹಾಗಾದರೂ ಕೂಡ ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯ ಮೇಲೆ ಸಾಕಷ್ಟು ಹಿಡಿತಇಟ್ಟು ಇದರ ಬೆಳವಣಿ ಸಾಕಷ್ಟು ಗಮನವನ್ನು ಕೊಡುತ್ತಿರುವುದರಿಂದ ಇದು ನಾವೆಲ್ಲ ಮೆಚ್ಚತಕ್ಕ ವಿಚಾರವೇ ಆಗಿದೆ. ಇದು ದೇಶದಲ್ಲಿ ಈಗಿರುವ ಪರಿಸ್ಥಿತಿ. ಇದರ ಬಗ್ಗೆ ಇರುವ ಪರಿಸ್ಥಿತಿಗಳನ್ನು ವಿಚಾರ ಮಾಡಲು ನಮ್ಮ ರಾಜ್ಯದ ಕೆಲವು ಅಂಕಿ ಸಂಖ್ಯೆಗಳು ನನ್ನಲ್ಲಿವೆ. ಅವುಗಳನ್ನು ಇಲ್ಲಿ ಹೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ನಮ್ಮ ರಾಜ್ಯದಲ್ಲಿ ಜೀವನ ಸೂಚ್ಯಾಂಕದಲ್ಲಿ ಎಷ್ಟುಮಟ್ಟಿಗೆ ನಮ್ಮ ಜೀವನಾವಶ್ಯಕವಾದ ವಸ್ತುಗಳ ಬೆಲೆ ಏರುತ್ತಿದೆ ಎನ್ನುವುದರ ಬಗ್ಗೆ ಒಂಬತ್ತು ಪಟ್ಟಣಗಳ ಅಂಕಿಗಳಿವೆ ಮತ್ತು ಇದಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳೂ ಇವೆ. 1960ರಲ್ಲಿ ಜೀವನ ಸೂಚ್ಯಂಕ ಬೆಂಗಳೂರಿನಲ್ಲಿ ಒಂದು ನೂರು ಇತ್ತು. 1970ರಲ್ಲಿ 184ವರೆಗೆ ಆಯಿತು. ಅನಂತರ 1973ನೇ ಜನವರಿವರೆಗೆ 223ಕ್ಕೇರಿದೆ. ಎಂದರೆ 1960ರಿಂದ 1973ನೇ ಜನವರಿಯವರೆಗೆ ಲೆಕ್ಕ ನೋಡುವಾಗ ಶೇಕಡ 125ರಷ್ಟು ಜೀವನದ ಖರ್ಚು ಹೆಚ್ಚಾಗಿದೆ. 1970ರ ಲೆಕ್ಕ ತೆಗೆದುಕೊಂಡರೆ ಶೇಕಡ 40ರಷ್ಟು ಈ ಮೂರು ವರ್ಷಗಳಲ್ಲಿ ಹೆಚ್ಚಾಗಿದೆ. ಇದು ಬೆಂಗಳೂರಿನಲ್ಲಿನ ಅಂಶಗಳು. ಇದೇ ರೀತಿ ದಾವಣಗೆರೆ ನೋಡಿದರೆ 1960ರಲ್ಲಿ 100 ಇತ್ತು. 1970ರಲ್ಲಿ 188, 1973ನೇ ಜನವರಿಯವರೆಗೆ 226ಕ್ಕೇರಿತು. ಮಂಗಳೂರಿನಲ್ಲಿ 1960ರಲ್ಲಿ 100 ಇತ್ತು. 1970ರಲ್ಲಿ 191ಕ್ಕೇರಿತು, 1973ನೇ ಜನವರಿಯಲ್ಲಿ 226ಕ್ಕೇರಿತು. ಮೈಸೂರಿನಲ್ಲಿ 1960ರಲ್ಲಿ ಶೇಕಡಾ 100 ಇತ್ತು, 1970ರಲ್ಲಿ 188ಕ್ಕೇರಿತು. 1973ನೇ ಜನವರಿಯೊಳಗೆ 231 ಆಗಿದೆ, ಹೀಗೆ ಜೀವನದ ವೆಚ್ಚದ ಮೇಲೆ ಸರಕಾರ ಎಷ್ಟೇ ಪ್ರಯತ್ನ ಮಾಡಿದರೂ ಅದರ ಮೇಲೆ ಸಾಕಷ್ಟು ಹಿಡಿತವನ್ನು ಇಟ್ಟುಕೊಳ್ಳುವುದಕ್ಕೆ ಸಾಧ್ಯವಾಗಲಿಲ್ಲ. ಇಷ್ಟೊಂದು ಪ್ರಮಾಣದಲ್ಲಿ ಬೆಲೆಗಳು ಹೆಚ್ಚುವುದಕ್ಕೆ ನಮ್ಮ ದೇಶದಲ್ಲಿ ಬಂದಿರುವ ಈ ಅಭಾವ ಪರಿಸ್ಥಿತಿಯೂ ಒಂದು ಕಾರಣ ಇರಬಹುದು.

ನಮ್ಮ ಆರ್ಥಿಕ ಮಂತ್ರಿಗಳು ಈ ಹಿನ್ನೆಲೆಯಲ್ಲಿ ನಮ್ಮ ರಾಜ್ಯದ ನೌಕರರುಗಳಿಗೆ ತುಟ್ಟಿ ಭತ್ಯೆವನ್ನು ಹೆಚ್ಚಿಸುವ ಒಂದು ಸಾಹಸವನ್ನು ಮಾಡಿದ್ದಾರೆ. ಇದಕ್ಕಾಗಿ ನಮ್ಮ ರಾಜ್ಯದ ಬೊಕ್ಕಸದಿಂದ ಸುಮಾರು ಐದು ಕೋಟಿ ರೂಪಾಯಿಗಳಷ್ಟು ಖರ್ಚಾಗುತ್ತಿದೆ ಎಂದು ಹೇಳಿದ್ದಾರೆ. ಈ ರೀತಿ ಹೆಚ್ಚಳ ಕೊಡುವುದರಿಂದ ಇದು ಕೇಂದ್ರ ಸರಕಾರದ ತುಟ್ಟಿಭತ್ಯದ ಮಟ್ಟಕ್ಕೆ ಬರುತ್ತದೆ ಎಂದೂ ಹೇಳಿದ್ದಾರೆ. ಬಹುಶ: ಈಗ ಇದು ಬಂತಲ್ಲ ಎಂದು ತೃಪ್ತಿಪಟ್ಟುಕೊಳ್ಳಬಹುದು. ಆದರೆ ಇನ್ನು ಕೆಲವೇ ದಿವಸಗಳಲ್ಲಿ ಈ ಅಂತರ ಪುನ: ಬರುತ್ತದೆ ಎಂದು ಕೆಲವಾರು ಸೂಚನೆಗಳನ್ನೂ ಅವರು ಕೊಟ್ಟಿದ್ದಾರೆ. ಈಗಾಗಲೇ ಕೇಂದ್ರ ಸರಕಾರದವರು ವೇತನ ಆಯೋಗವನ್ನು ನೇಮಕಮಾಡಿದ್ದಾರೆ. ಈ ಆಯೋಗದವರು ಈ ತಿಂಗಳ ಅಂತ್ಯದಲ್ಲಿ ಇಲ್ಲವೇ ಮುಂದಿನ ತಿಂಗಳಲ್ಲಿ ಅವರ ಶಿಫಾರಸ್ಸುಗಳನ್ನು ಕಳುಹಿಸಿಕೊಡುವವರಾಗಿದ್ದಾರೆ. ಆ ಶಿಫಾರಸ್ಸುಗಳನ್ನು ಮಾಡುವ ವೇಳೆಯಲ್ಲಿ ಕೇಂದ್ರ ಸರಕಾರದ ನೌಕರರುಗಳಿಗೆ ಸುಮಾರು ಇನ್ನೂರು ಕೋಟಿ

ರೂಪಾಯಿಗಳವರೆಗೆ ವೇತನ ಹೆಚ್ಚುತ್ತದೆ, ಈ ರೀತಿ ತುಟ್ಟಿಭತ್ಯ ಹೆಚ್ಚಳವಾಗಬಹುದು ಎಂದು ನಮಗೆ ಪತ್ರಿಕೆಗಳಲ್ಲಿ ಬಂದಿರುವ ವರದಿಗಳಿಂದ ಕೇಳಿ ತಿಳಿದಿದ್ದೇವೆ. ಹೀಗೆ ಅವರ ಶಿಫಾರಸ್ಸುಗಳು ಬಂದಕೂಡಲೇ ನಮ್ಮ ರಾಜ್ಯದ ನೌಕರರುಗಳಲ್ಲಿ ಇರತಕ್ಕ ತೃಪ್ತಿ ಮುಗಿಯುತ್ತದೆ. ಈಗೇನೋ ಮೆಂಟಲ್ ಸಾಟಿಸ್‌ಫ್ಯಾಕ್ಷನ್ ಎಂದು ಹೇಳುವುದು ಇದ್ದರೂ ಅದರಿಂದ ತೃಪ್ತಿಕರವಾಗುವುದಿಲ್ಲ. ಇದುವರೆಗೆ ಹೋರಾಟ ಮಾಡುತ್ತಿದ್ದಾರೆ. ಇನ್ನು ಒಂದೆರಡು ತಿಂಗಳಲ್ಲೇ ಕೇಂದ್ರ ಸರಕಾರದವರು ಮತ್ತೆ ತುಟ್ಟಿಭತ್ಯವನ್ನು ಹೆಚ್ಚಿಸುತ್ತಿದ್ದಾರೆ. ಆ ಸಮಯದಲ್ಲಿ ನೀವೇನು ಮಾಡಬೇಕು? ನಮ್ಮ ರಾಜ್ಯ ಸರಕಾರ ಪುನ: ತುಟ್ಟಿಭತ್ಯವನ್ನು ಹೆಚ್ಚಿಸುವುದಕ್ಕೆ ನಮ್ಮ ಹಣಕಾಸಿನ ಪರಿಸ್ಥಿತಿಯಿಂದಾಗಿ ನಾವು ಮತ್ತೆ ಅವರಿಗೆ ಕೊಡುವುದಕ್ಕಾಗುವುದಿಲ್ಲ ಎಂದು ತಿರಸ್ಕಾರ ಮಾಡುವುದಕ್ಕಾಗುತ್ತದೆಯೇ ಎನ್ನುವ ಒಂದು ಪ್ರಶ್ನೆ ಬರುತ್ತದೆ. ಇದೊಂದು ಜಟಿಲವಾದ ಪ್ರಶ್ನೆ, ಬಹುಶ: ನಮ್ಮ ಸ್ನೇಹಿತರಾದ ಆರ್ಥಿಕ ಮಂತ್ರಿಗಳಿಗೆ ಇದೊಂದು ಬಿಡಿಸಲಾಗದ ಪ್ರಶ್ನೆ ಎಂದು ನನಗಾದರೂ ಅನಿಸುತ್ತಿದೆ. ಈ ಸಮಸ್ಯೆಯನ್ನು ವಿಚಾರ ಮಾಡುವಾಗ ಒಂದು ವಿಚಾರ ಹೇಳಬೇಕಾಗಿದೆ. ನಮ್ಮ ಹಣಕಾಸಿನ ಪರಿಸ್ಥಿತಿ ಹೆಚ್ಚು ಕೆಡುವುದಕ್ಕೆ ಕಾರಣ ನಮಗೆ ಐದನೇ ಫೈನಾನ್ಸ್ ಕಮಿಷನ್‌ನಲ್ಲಿ ಬಂದಂತಹ ಹಣಕಾಸಿನ ಸೌಲಭ್ಯ ಕಡಿಮೆ. ಐದನೇ ಆರ್ಥಿಕ ಆಯೋಗದ ಶಿಫಾರಸ್ಸು ಏನು ಬಂದಿತ್ತೋ ಅಷ್ಟು ಕೂಡ ಬರಲಿಲ್ಲ, ಈ ವಿಚಾರ ಹೇಗೆ ಆಯಿತು ಎನ್ನುವುದನ್ನು ಪರಿಶೀಲನೆ ಮಾಡುವುದಕ್ಕೆ ಅವಕಾಶ ನಮಗೆ ಇರಲಿಲ್ಲ. ಮತ್ತು ಆ ವಿಚಾರದಲ್ಲಿ ಈ ಸಭೆಯು ಕಾಲವನ್ನು ಉಪಯೋಗಿಸಿಕೊಳ್ಳುವುದಕ್ಕೆ ಅಪೇಕ್ಷೆ ಪಡುವುದಿಲ್ಲ. ನಮ್ಮ ಸರ್ಕಾರದವರು ಆರನೇ ಆಯೋಗಕ್ಕೆ ಏನು ಮೆಮೋರ್‍ಯಾಂಡಂ ಸಲ್ಲಿಸಿದ್ದಾರೆ ಆ ಮೆಮೋರ್‍ಯಾಂಡಂನಲ್ಲಿ ವಾಸ್ತವವಾಗಿ ನಮ್ಮ ರಾಜ್ಯದ ಹಣಕಾಸಿನ ಪರಿಸ್ಥಿತಿ ಹೇಗಿದೆ, ಇಂಡಿಯಾ ಸರಕಾರದವರು ಆರ್ಥಿಕ ಆಯೋಗವನ್ನು ನೇಮಿಸಿ ರಾಜ್ಯಾಂಗದ ಶಾಸನದ 275ನೇ ಆರ್ಟಿಕಲ್ ಪ್ರಕಾರ ಹೆಚ್ಚು ಹಣವನ್ನು ಯಾವ ಆಧಾರದ ಮೇಲೆ ಮಾಡಬೇಕು ಎನ್ನುವುದನ್ನು ಬಹಳ ಉತ್ತಮವಾದ ರೀತಿಯಲ್ಲಿ ತಿಳಿಸುತ್ತಿದ್ದಾರೆ, ನಾನಾದರೂ ನಿರೀಕ್ಷೆ ಮಾಡುತ್ತೇನೆ ಬಹುಶ: ನಮ್ಮ ಸರಕಾರ ಆರನೇ ಆರ್ಥಿಕ ಆಯೋಗದ ಮುಂದೆ ಇಟ್ಟಿರತಕ್ಕ ವಾದವನ್ನು ಪುರಸ್ಕರಿ ನಮ್ಮ ಸರಕಾರ ನಿರೀಕ್ಷೆ ಮಾಡಿದ ರೀತಿಯಲ್ಲಿ ಹಣಕಾಸಿನ ಸಹಾಯ ಮಾಡದೇ ಹೋದರೆ ನಮ್ಮ ಹಣಕಾಸಿನ ಪರಿಸ್ಥಿತಿ ಉತ್ತಮವಾಗುವುದಿಲ್ಲ. ಹಾಗೆ ಉತ್ತಮ ಮಾಡಿಕೊಳ್ಳಬೇಕಾದರೆ ಏನು ಮಾಡಬೇಕು, ಯಾವ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕು ಎನ್ನುವುದಕ್ಕೆ ಈ ಸಭೆಯ ಮುಂದೆ ಬರಬೇಕಾಗುತ್ತದೆ. ನಮ್ಮ ಸರಕಾರದವರು ಆರನೇ ಆಯೋಗಕ್ಕೆ ಮಂಡಿಸಿರತಕ್ಕ ಮೆಮೋರ್‍ಯಾಂಡಂನಲ್ಲಿ ಏನಿದೆ ಅದನ್ನು ನಾನು ಸಂಪೂರ್ಣವಾಗಿ ಅಧ್ಯಯನ ಮಾಡಿದ್ದೇನೆ. ಅವರು ಹೇಳಿರತಕ್ಕ ಅನೇಕ ಅಂಶಗಳನ್ನು ಬಹುಶ: ಆರ್ಥಿಕ ಆಯೋಗದವರು ಒಪ್ಪುತ್ತಾರೆಂದು ತಿಳಿದಿದ್ದೇನೆ. ಹಾಗೆ ಇಂಡಿಯಾ ಸರಕಾರದವರು ಕೊಡಬೇಕಾದ ಹಣಕಾಸಿನ ಸೌಲಭ್ಯಗಳನ್ನು ಕೊಡದೆ ನಮ್ಮ ಹಣಕಾಸಿನ ಪರಿಸ್ಥಿತಿ ಸುಧಾರಿಸುತ್ತದೆ ಎಂದು ಹೇಳಿದರೆ ಖಂಡಿತ ಅದರಿಂದ ಸುಧಾರಿಸುವುದಿಲ್ಲ.

ಈಗ ನಮ್ಮ ಹಣಕಾಸಿನ ಪರಿಸ್ಥಿತಿ ಹೇಗಿದೆ ಎಂಬುದು ಆರನೇ ಆರ್ಥಿಕ ಆಯೋಗಕ್ಕೆ ಕೊಟ್ಟಿರುವ ಮೆಮೋರ್‍ಯಾಂಡಮ್‌ನ 3 ಮತ್ತು 4ನೇ ಪೇಜ್‌ಗಳಲ್ಲಿರುವುದನ್ನು ನೋಡಿದರೆ ಗೊತ್ತಾಗುತ್ತದೆ. ಸಾಮಾನ್ಯವಾಗಿ ನಾವು ಕೇಂದ್ರ ಸರ್ಕಾರದಿಂದ ವರ್ಷೇ ವರ್ಷೇ ಕೋಟ್ಯಾಂತರ

ರೂಪಾಯಿಗಳ ಸಾಲಗಳನ್ನು ಪಡೆಯುತ್ತಿದ್ದೇವೆ. ಬಹಿರಂಗ ಮಾರುಕಟ್ಟೆಯಿಂದ ಸಾಲ ಎತ್ತುತ್ತಿದ್ದೇವೆ. ಮತ್ತು ಹಣಕಾಸಿನ ಸಂಸ್ಥೆಗಳಿಂದ ಸಾಲ ಪಡೆಯುತ್ತಿದ್ದೇವೆ. ಇದೆಲ್ಲಾ ಹಣವೂ ಅಭಿವೃದ್ಧಿಕಾರ್ಯಗಳಿಗೆ ಖರ್ಚು ಆಗುತ್ತಿದೆ ಎನ್ನುವ ಭಾವನೆ ಸಾಮಾನ್ಯ ಜನರ ಮನಸ್ಸಿನಲ್ಲಿ ಇದೆ. ಆದರೆ ಇರತಕ್ಕಂಥ ಪರಿಸ್ಥಿತಿ ನೋಡುವುದಾದರೆ, ನಮ್ಮ ಹುಟ್ಟುವಳಿ ಏನಿದೆ ಅದರಲ್ಲಿ ಆಡಳಿತವನ್ನು ನಡೆಸಲು ಬೇಕಾದ ಖರ್ಚನ್ನು ಕಳೆದರೆ ಅಭಿವೃದ್ಧಿ ಕಾರ್ಯಗಳಿಗೆ ಹಣವೇ ಉಳಿಯುತ್ತಿಲ್ಲ. ನಮ್ಮ ದುರಾದೃಷ್ಟ, ನಾವು ಎತ್ತತಕ್ಕಂಥ ಸಾಲದ ಹಣವು ಕೊಡಬೇಕಾದ ಕಂತಿಗೆ ಮತ್ತು ಬಡ್ಡಿಗೆ ಖರ್ಚಾಗುತ್ತಿದೆ. ಸಾಲದ ತೀರುವಳಿಗೆ ಕೊಡಬೇಕಾದ ಕಂತಿಗೆ ಮತ್ತೆ ಸಾಲ ಮಾಡಿಯೇ ತೀರಿಸುತ್ತಿದ್ದೇವೆ. ಇದು ಚಿಂತಾಜನಕವಾದ ಪರಿಸ್ಥಿತಿ. ಯಾವ ರಾಜ್ಯದ ಹಣಕಾಸಿನ ಪರಿಸ್ಥಿತಿಯೂ ಈ ರೀತಿ ಇರಬಾರದು. ಯಾವಾಗಲೂ ನಾವು ಪ್ರತಿವರ್ಷ ಪಡೆದಂಥ ಸಾಲ ಅಭಿವೃದ್ಧಿ ಕಾರ್ಯಗಳಿಗೆ ಖರ್ಚು ಮಾಡುವುದಕ್ಕೆ ಮೀಸಲಾಗಿರಬೇಕು. ಆದರೆ ಆ ಪರಿಸ್ಥಿತಿ ಇಂದು ಇಲ್ಲದಿರುವುದಕ್ಕೆ ರಾಜ್ಯಸರ್ಕಾರ ಹಣಕಾಸಿನ ಬಗ್ಗೆ ಸರಿಯಾದ ನೀತಿಯನ್ನು ಅನುಸರಿಸುತ್ತಿಲ್ಲ, ಆ ಕಾರಣದಿಂದ ಇಂಥಹ ಒಂದು ಕಠಿನ ಪರಿಸ್ಥಿತಿ ಬಂದು ಒದಗಿರಬಹುದು ಎಂದು ಸಾಮಾನ್ಯ ಜನರು ಯೋಚನೆ ಮಾಡುವುದಕ್ಕೆ ಅವಕಾಶವಿದೆ. ಮತ್ತು ಇಂಥಹ ಒಂದು ಪರಿಸ್ಥಿತಿಯನ್ನು ನಿವಾರಣೆ ಮಾಡಬೇಕಾದರೆ ಅದು ರಾಜ್ಯಸರ್ಕಾರದ ಕೈಯಲ್ಲಿದೆಯೇ ಅಥವಾ ಕೇಂದ್ರ ಸರ್ಕಾರದ ನೆರವು ಬೇಕಾಗಿದೆಯೇ ಎಂಬುದು ಒಂದು ಪ್ರಶ್ನೆ ಇದ್ದೇ ಇದೆ. ಮುಖ್ಯವಾಗಿ ಈ ಒಂದು ಪರಿಸ್ಥಿತಿ ಬರುವುದಕ್ಕೆ ನಮ್ಮ ಸರ್ಕಾರ ಅನುಸರಿಸಿದಂಥ ನೀತಿ ಕಾರಣವಲ್ಲ, ಇದಕ್ಕೆ ಕಾರಣ ಕೇಂದ್ರ ಸರ್ಕಾರದವರು 255ನೇ ಆರ್ಟಿಕಲ್ ಪ್ರಕಾರ ಯಾವ ರೀತಿಯಲ್ಲಿ ರಾಜ್ಯಗಳಿಗೆ ಹಣ ಹಂಚಬೇಕಾಗಿತ್ತೋ ಅದರಲ್ಲಿ ವ್ಯತ್ಯಾಸವಾಗಿರುವುದು ಒಂದು ಕಾರಣವಾದರೆ, ಕೇಂದ್ರಸರ್ಕಾರದವರು ನಮ್ಮ ಅಭಿವೃದ್ದಿ ಕಾರ್ಯಗಳಿಗೆ ಕೊಟ್ಟಂತಹ ಹಣವನ್ನು ವಾಪಸ್ ಪಡೆಯತಕ್ಕಂಥ ರೀತಿಯಲ್ಲಿ ಅವರು ಅನುಸರಿಸಿಕೊಂಡು ಬರುತ್ತಿರುವ ನೀತಿ ಎರಡನೇ ಕಾರಣವಾಗಿದೆ. ಈ ವಿಚಾರದಲ್ಲಿ ನಮ್ಮ ಸರ್ಕಾರದವರು ಆರನೇ ಆರ್ಥಿಕ ಆಯೋಗದ ಮುಂದೆ ಮಂಡಿಸಿರುವ ಮೆಮೋರ್‍ಯಾಂಡಮ್ ಸ್ಪಷ್ಟವಾಗಿದೆ. ಆ ಮೆಮೋರ್‍ಯಾಂಡಮ್‌ನಲ್ಲಿ ಹಿಂದಿನ ಸರ್ಕಾರಗಳು ಹಣಕಾಸನ್ನು ದುರುಪಯೋಗ ಮಾಡಿಕೊಂಡಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹಣಕಾಸಿನ ದುರುಪಯೋಗವಾಗಿಲ್ಲ ಎಂಬ ಬಗ್ಗೆ ಅನೇಕ ಉದಾಹರಣೆಗಳನ್ನು ಕೊಡಬಹುದು, ಸಂಬಳ ಸಾರಿಗೆಯನ್ನು ತೆಗೆದುಕೊಂಡರೆ ಬೇರೆ ರಾಜ್ಯಗಳ ಸಂಬಳ ಸಾರಿಗೆಗಿಂತ ಕನಿಷ್ಠ ಪ್ರಮಾಣದಲ್ಲಿಯೇ ಇದೆ. ಯಾವ ಒಂದು ಬಾಬಿನಲ್ಲಿಯೇ ಆಗಲಿ, ಪರಿಶೀಲನೆಮಾಡಿ ನೋಡಿದರೆ ಸರ್ಕಾರ ಖರ್ಚು ಮಾಡುತ್ತಿರುವ ಹಣದ ಪ್ರಮಾಣ ಬೇರೆ ರಾಜ್ಯಗಳು ಖರ್ಚು ಮಾಡುತ್ತಿರುವ ಹಣದ ಪ್ರಮಾಣಕ್ಕಿಂತ ಬಹಳ ಕಡಿಮೆ ಇದೆ. ಈ ಅಂಶವನ್ನು ಸಹ ಆರ್ಥಿಕ ಆಯೋಗದವರಿಗೆ ತಿಳಿಸಿದ್ದಾರೆ. ಮುಂದಿನ 5 ವರ್ಷಗಳಲ್ಲಿ ನಮ್ಮ ಹಣಕಾಸಿನ ಪರಿಸ್ಥಿತಿ ಸುಧಾರಿಸಬೇಕಾದರೆ, ನಮ್ಮ ರಾಜ್ಯದಲ್ಲಿ ಆಗತಕ್ಕಂಥ ಅಭಿವೃದ್ಧಿ ಕಾರ್ಯಗಳು ಸರಿಯಾದಂಥ ಪ್ರಮಾಣದಲ್ಲಿ ನಡೆಯಬೇಕಾದರೆ.......

ಶ್ರೀ ಹೆಚ್. ಡಿ. ದೇವೇಗೌಡ (ಹೊಳೆನರಸೀಪುರ):-

ಮಾನ್ಯ ಸದಸ್ಯರು ಈಲ್ಡ್ ಆಗುವುದಾದರೆ ಒಂದು ವಿಷಯವನ್ನು ಅವರಿಂದ ಕೇಳಬೇಕಾಗಿದೆ. ಮಾನ್ಯ ಸದಸ್ಯರು ಹಿರಿಯ ಸದಸ್ಯರಾಗಿದ್ದಾರೆ. ಅವರಿಗೆ ಹೆಚ್ಚಿನ ಅನುಭವವಿದೆ.

ಬಹಿರಂಗ ಮಾರುಕಟ್ಟೆಯಲ್ಲಿ ಎತ್ತತಕ್ಕಂಥ ಸಾಲ, ಮತ್ತು ಅವರಿಗೆ ಕೆಲವು ಹಣಕಾಸಿನ ಸಂಸ್ಥೆಗಳಿಂದ ಪಡೆಯತಕ್ಕಂಥ ಸಾಲದ ಹಣ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗವಾಗದೆ ಬಡ್ಡಿಗಾಗಿ ಮತ್ತು ಹಿಂದಿನ ಸಾಲ ತೀರಿಸಲು ಖರ್ಚಾಗುತ್ತಿದೆ ಎಂದು ಹೇಳಿದರು. ಕಳೆದ 25 ವರ್ಷಗಳಲ್ಲಿ ಈ ರಾಜ್ಯ ಅಭಿವೃದ್ಧಿ ದೃಷ್ಟಿಯಿಂದ ಅಷ್ಟೊಂದು ಪ್ರಗತಿದಾಯಕವಾಗಿ ಸಾಗಿರಲಿಲ್ಲವೇ ಎನ್ನುವುದರ ಬಗ್ಗೆ ತಮ್ಮ ನಿಲವು ಏನು ಎಂಬುದನ್ನು ತಿಳಿಸುತ್ತೀರಾ?

ಶ್ರೀ ಕೆ. ಪುಟ್ಟಸ್ವಾಮಿ:-

ನಾನು ಸ್ಪಷ್ಟವಾಗಿ ಹೇಳಿದ್ದೇನೆ. ನಮ್ಮ ರಾಜ್ಯದಲ್ಲಿ ಆಗಿರತಕ್ಕಂಥ ಪ್ರಗತಿಯ ಬಗ್ಗೆ ನಾವೆಲ್ಲರೂ ಹೆಮ್ಮೆಪಡಬೇಕಾಗಿದೆ. ಮತ್ತು ನಾವು ಪಡೆದಂಥ ಹಣಕಾಸು ಸದ್ವಿನಿಯೋಗವಾಗಿದೆ ಎಂಬುದಕ್ಕೆ ಈ ಆರನೇ ಆರ್ಥಿಕ ಆಯೋಗದ ಮುಂದೆ ನಮ್ಮ ಸರ್ಕಾರದವರು ಮಂಡಿಸಿರತಕ್ಕಂಥ ಡಾಕ್ಯುಮೆಂಟೇ ಸಾಕು. ಆದರೆ ಕೇಂದ್ರಸರ್ಕಾರದವರು ನಮ್ಮ ಅಭಿವೃದ್ಧಿಗೆ ಕೊಡತಕ್ಕಂತ ಸಾಲಗಳು, ಆ ಸಾಲಗಳನ್ನು ಉಪಯೋಗಿಸಿದ ಮೇಲೆ ಆ ಸಾಲಗಳ ಮರುಪಾವತಿಗೆ ಹಾಕಿರುವ ಷರತ್ತುಗಳೇ ಅಭಿವೃದ್ಧಿ ಕಾರ್ಯಗಳು ಹೆಚ್ಚಾಗಿ ಆಗುವುದಕ್ಕೆ ಅವಕಾಶವಿಲ್ಲದಂತೆ ಆಗಿದೆ. ಉದಾಹರಣೆಗಾಗಿ ಹೇಳುವುದಾದರೆ ನೀರಾವರಿ ಕಾಮಗಾರಿಗಳಿಗೆ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತೇವೆ. ಆದರೆ ಅದರಿಂದ ಪ್ರತಿಫಲ ಬರಬೇಕಾದರೆ ನಾವು 5-6 ವರ್ಷಗಳ ಕಾಲ ಕಾಯಬೇಕಾಗುತ್ತದೆ. ಅಲ್ಲಿಯವರೆಗೆ ಹಣ ತೀರಿಸುವುದು ಹೇಗೆ? ಉತ್ಪನ್ನ ಇಲ್ಲದೆ ಸಾಲ ತೀರಿಸಬೇಕಾದ ಪರಿಸ್ಥಿತಿ ಬರುತ್ತದೆ, ಈ ಒಂದು ನೀತಿಯನ್ನು ಪರಿಶೀಲಿಸಿ ಒಂದು ವಾಸ್ತವಿಕವಾದಂಥ ಮಾರ್ಗವನ್ನು ಕಂಡುಹಿಡಿಯಬೇಕೆಂದು ನಮ್ಮ ಸರ್ಕಾರದವರು ಆರನೇ ಆರ್ಥಿಕ ಆಯೋಗದವರ ಮುಂದೆ ವಾದ ಮಾಡಿದ್ದಾರೆ. ಆ ಒಂದು ವಾದವನ್ನು ಅವರು ಪುಷ್ಟೀಕರಿಸಿದರೆ ನಮ್ಮ ಆರ್ಥಿಕ ಮಂತ್ರಿಗಳು ಯಾವ ಒಂದು ಪ್ರಗತಿಯನ್ನು ನಿರೀಕ್ಷಿಸಿದ್ದಾರೋ ಅದನ್ನು ಸಾಧಿಸುವುದಕ್ಕೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಕಷ್ಟವಾಗುತ್ತದೆ.

ಶ್ರೀ ಎಂ. ವೈ. ಘೋರ್ಪಡೆ (ಹಣಕಾಸಿನ ಶಾಖೆಯ ಮಂತ್ರಿಗಳು). - ನಾವು ಏನು ಒಂದು ಮೆಮೋರ್‍ಯಾಂಡವನ್ನು ಆರನೇ ಆರ್ಥಿಕ ಅಯೋಗದ ಮುಂದೆ ಕೊಟ್ಟಿದ್ದೇವೆ, ಅದರಲ್ಲಿ ಹಿಂದಕ್ಕೆ ಎಷ್ಟರಮಟ್ಟಿಗೆ ದಕ್ಷತೆಯಿಂದ ಹಣ ಖರ್ಚಾಯಿತು ಅದರ ಬಗ್ಗೆ ವಿವರಗಳನ್ನು ಕೊಡುವ ಆವಶ್ಯಕತೆ ಇರಲಿಲ್ಲ. ಅದಕ್ಕೆ ಪ್ರಯತ್ನವನ್ನೂ ನಾವು ಮಾಡಲಿಲ್ಲ. ಇರತಕ್ಕಂಥ ವಾಸ್ತವಿಕ ಪರಿಸ್ಥಿತಿ ಏನಿದೆ ಅದನ್ನು ಮಾತ್ರ ಹೇಳಿದ್ದೇವೆ. ಅದರ ಪ್ರಕಾರ ಸಾಲ ತೀರಿಸುವುದಕ್ಕೆ ಮತ್ತು ಬಡ್ಡಿ ಕೊಡಲು ಹಣ ಬೇಕಾಗುತ್ತದೆ, ಅದಕ್ಕಾಗಿ ಸಾಲ ಮಾಡಬೇಕಾಗುತ್ತದೆ, ಹೊಸ ಸಾಲ ಎತ್ತುವುದರಿಂದ ಹೊಸ ಪ್ರಗತಿ ಕೆಲಸಗಳನ್ನು ಮಾಡುವುದು ಕಷ್ಟವಾಗುತ್ತದೆ ಎಂಬತಕ್ಕಂಥ ವಾಸ್ತವಿಕ ಪರಿಸ್ಥಿತಿಯನ್ನು ಅವರ ಮುಂದೆ ಇಟ್ಟಿದ್ದೇವೆ. ಹಿಂದಕ್ಕೆ ಏನೇನು ಆಯಿತು ಅದು ಸರಿಯೋ ತಪ್ಪೋ ಎಂಬುದನ್ನು ಮೆಮೊರ್‍ಯಾಂಡಮ್‌ನಲ್ಲಿ ಪ್ರಸ್ತಾಪ ಮಾಡಲಿಲ್ಲ.

**Sri H.D. DEVE GOWDA:-**

I Want to hear you because you have rich experience in administration. In the past 25 years so far as development is

concerned it is not up to our expectations. That is our charge. What is your opinion?

**Sri K. PUTTASWAMY:-**

I have already stated that the progress achieved is not to our expectation and I was telling the House the reasons for shortfall in our expectations. I don't want to enter into any controversy with my hon. friend that the Finance Minister,

**Sri M.Y. GHORPADE:-**

That is precisely what I was suggesting, Let us not try to enter into any controversy over what has happened in the past.

ಶ್ರೀ ಕೋಣಂದೂರು ಲಿಂಗಪ್ಪ:-

ಕಳೆದ 25 ವರ್ಷಗಳಿಂದಲೂ ಸಹ ಇದೇ ಜಾಣತನದಲ್ಲಿ ಹೇಳಿಕೊಂಡು ಬಂದಿದ್ದೀರಿ.

ಶ್ರೀ ಕೆ. ಪುಟ್ಟಸ್ವಾಮಿ:-

ಇನ್ನು ನಾನು ಈ ಬಗ್ಗೆ ಹೆಚ್ಚು ಹೇಳಬೇಕಾದ್ದಿಲ್ಲ. ಈ ಸಭೆಯ ಕಾಲವನ್ನು ಹೆಚ್ಚು ತೆಗೆದುಕೊಳ್ಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಮಾನ್ಯ ವಿರೋಧ ಪಕ್ಷದ ನಾಯಕರು ನನಗೆ ನಮ್ಮ ಕಾಲವನ್ನು ಕೊಡುತ್ತೇನೆ ಎಂದು ಹೇಳಿದ ಔದಾರ್ಯಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ. ಮುಂದೆ ಈ ಸಭೆಯು ಮುಂದೆ ಬೇಡಿಕೆಗಳು ಬರುತ್ತವೆ. ಆಗ ಬೇಡಿಕೆಗಳ ಮೇಲೆ ಮಾತನಾಡಬಹುದು. ಈ ದೇಶದಲ್ಲಿ ಯಾವುದೇ ಒಂದು ವಿಚಾರದಲ್ಲಿ ತಪ್ಪು ಕಲ್ಪನೆ ಬರುವಂತೆ ವಿರೋಧ ಪಕ್ಷದವರು ಈ ಸಭೆ ಪ್ರಾರಂಭವಾದ ಲಾಗಾಯಿತು ಇವೊತ್ತಿನವರೆಗೂ ಹಿಂದಿನ ಅಧಿವೇಶನದಲ್ಲೂ ಕೂಡ ನಮ್ಮ ಸರ್ಕಾರದವರು ಬರಗಾಲ ಪೀಡಿತ ಪ್ರದೇಶಕ್ಕೆ ಗಮನ ಕೊಟ್ಟಿಲ್ಲ ಎಂದು ಹೇಳಿದರು. ಇದು ವಾಸ್ತವಿಕವಾದ ಸಂಗತಿಯಲ್ಲ.

ಶ್ರೀ ಹೆಚ್. ಡಿ. ದೇವೇಗೌಡ:-

ನಿಮ್ಮಲ್ಲೂ ಹೇಳಿದ್ದಾರೆ.

ಶ್ರೀ ಕೆ. ಪುಟ್ಟಸ್ವಾಮಿ:-

ಆಡಳಿತ ಪಕ್ಷದಲ್ಲಿ ಅಂಥಾ ವಿಶೇಷವಾದ ರೀತಿಯಲ್ಲಿ ಯಾರೂ ಹೇಳಿಲ್ಲ.

ಶ್ರೀ ಹೆಚ್. ಡಿ. ದೇವೇಗೌಡ:-

ಸತ್ಯಾಗ್ರಹ ಮಾಡುವುದಕ್ಕೆ ಹೊರಟಿದ್ದರು.

ಶ್ರೀ ಕೆ. ಪುಟ್ಟಸ್ವಾಮಿ:-

ಮನೆಯಲ್ಲಿ ಭಕ್ಷ್ಯ ಭೋಜನ ಮಾಡುತ್ತೇವೆ ಎಂದರೂ ಕೂಡ ಒಂದು ಗಂಟೆಗೆ ಆಗುವುದು 2 ಗಂಟೆಗೆ ಆದರೆ ನಾವು ಚಡಪಡಿಸುತ್ತೇವೆ. ಇಂಥಾ ಒಂದು ಪರಿಸ್ಥಿತಿ ಇರಬಹುದು. ಅದನ್ನೇ ದೊಡ್ಡದು ಮಾಡುವುದರಿಂದ ಪ್ರಯೋಜನವಿಲ್ಲ. ನಾನು ವಿರೋಧ ಪಕ್ಷದವರಿಗೆ ಒಂದು ಸಲಹೆಯನ್ನು ಕೊಡುತ್ತೇನೆ. ಅದು ಏನೆಂದರೆ ನಿಜವಾಗಿಯೂ ರಾಜ್ಯದ ಜನತೆಗೆ ಸೇವೆ ಸಲ್ಲಿಸಬೇಕು .ಎನ್ನುವ ದೃಷ್ಟಿಯಿಂದ ವಾಸ್ತವವಾಗಿರತಕ್ಕ ಪರಿಸ್ಥಿತಿಯನ್ನು ಹೇಳುವುದು ಅತ್ಯಗತ್ಯ. ಇಷ್ಟು ಹೇಳಿ ಅಧ್ಯಕ್ಷರು ನನಗೆ ಇಷ್ಟು ಕಾಲವನ್ನು ಒದಗಿಸಿದ್ದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ.

ಶ್ರೀ ಕೆ. ಹೆಚ್. ಹನುಮೇಗೌಡ (ಹಾಸನ):-

ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಅರ್ಥ ಸಚಿವರು ಮಂಡಿಸಿರತಕ್ಕ 1973-74ನೇ ಇಸವಿಯ ಆಯವ್ಯಯವನ್ನು ನಾನು ವಿರೋಧಿಸುತ್ತಾ ಕೆಲವು ಮಾತುಗಳನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಆಡಳಿತ ಪಕ್ಷದ ಕೆಲವು ಮಾನ್ಯ ಸದಸ್ಯರು ಆಯವ್ಯಯವನ್ನು ಹೊಗಳಿದ್ದಾರೆ. ಕೆಲವು ಮಾನ್ಯ ಸದಸ್ಯರು ಈ ಆಯವ್ಯಯ ಕಾಮಧೇನು ಎಂದು ಹೇಳಿದ್ದಾರೆ. ಕೆಲವು ಮಾನ್ಯ ಸದಸ್ಯರು ಇಂಥಾ ಆಯವ್ಯಯವನ್ನು ಹಿಂದೆ ಎಂದೂ ಇಟ್ಟಿಲ್ಲ. ಮುಂದೆ ಇಡುವುದಿಲ್ಲ ಎಂದು ಹೊಗಳಿ ಮಾತನಾಡಿದ್ದಾರೆ. ಈ ಸಂದರ್ಭದಲ್ಲಿ ನಾನು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಇಷ್ಟಪಡುತ್ತೇನೆ. ಈ ಆಯವ್ಯಯವನ್ನು ಕಾಮಧೇನುವಿಗೆ ಹೋಲಿಸಿರತಕ್ಕ ಔಚಿತ್ಯ ಏನು ಎಂದು ನಾನು ಪ್ರಶ್ನೆ ಮಾಡುತ್ತೇನೆ. ಹಳ್ಳಿಗಳ ಕಡೆ ಕೆಲವು ರೈತರು ಹಾಲು ಕೊಡದೇ ಇರತಕ್ಕ ಗೊಡ್ಡು ಹಸುಗಳನ್ನು ಇಟ್ಟುಕೊಂಡಿರುತ್ತಾರೆ. ಅಂಥಾ ಹಸುಗಳಿಗೆ ಈ ಆಯವ್ಯಯ ಪಟ್ಟಿಯನ್ನು ಹೋಲಿಸಿದ್ದರೆ ಚೆನ್ನಾಗಿತ್ತು. ಈ ಆಯವ್ಯಯದಿಂದ ದೇಶದ ಆರ್ಥಿಕ ಪರಿಸ್ಥಿತಿಗೆ ಉತ್ತೇಜನ ಬರತಕ್ಕಂಥಾ ಯಾವ ವಿಧವಾದ ಒಂದು ಸಂಗತಿಯನ್ನೂ ಇದರಲ್ಲಿ ಅಳವಡಿಸಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಈ ಸಂಧಿಗ್ಧ ಪರಿಸ್ಥಿತಿಯಲ್ಲಿ ಇದಕ್ಕಿಂತ ಉತ್ತಮವಾದ ಬಡ್ಜೆಟನ್ನು ಮಂಡಿಸಬೇಕಾಗಿತ್ತು ಎಂದು ನಾನು ಹೇಳುತ್ತೇನೆ.

ಹಿಂದೆ ಆಡಳಿತ ಪಕ್ಷದವರು ಚುನಾವಣೆಯಲ್ಲಿ ಗೆದ್ದು ಬಂದಾಗ ಜನತೆಯ ಮುಂದೆ ಅನೇಕ ಆಶೋತ್ತರಗಳನ್ನು ಇಟ್ಟಿದ್ದರು. ಈ ದಿವಸ ಅವರ ಆಶೋತ್ತರಗಳ ಈಡೇರಿಕೆಗೆ ಅನುಕೂಲವಾದಂತಹ ಬಡ್ಜೆಟ್ಟನ್ನು ಮಂಡಿಸಲಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಕಳೆದ ಎರಡು ವರ್ಷಗಳಿಂದ ಜನ ಅನೇಕ ವಿಧವಾದ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಒಂದು ವರ್ಷದ ಹಿಂದೆ ಸಾಧಾರಣವಾಗಿ 200- 300 ರೂಪಾಯಿಗಳಿಂದ ಜೀವನ ಮಾಡತಕ್ಕ ಸಂಸಾರ ಇಂದು 500-600 ರೂಪಾಯಿಗಳನ್ನು ಖರ್ಚು ಮಾಡಿದರೂ ಜೀವನ ಮಾಡುವುದಕ್ಕೆ ಕಷ್ಟಪರಿಸ್ಥಿತಿ ಇದೆ. ಇವೊತ್ತು ಜೀವನ ಆವಶ್ಯಕ ವಸ್ತುಗಳ ಬೆಲೆ ಒಂದಕ್ಕೆರಡರಷ್ಟಾಗಿ ಬೆಲೆಗಳು ಗಗನಕ್ಕೆ ಏರುತ್ತಿವೆ. ಇದನ್ನು ಒಂದು ಕಂಟ್ರೋಲಿಗೆ ತರುವ ವ್ಯವಸ್ಥೆ ಕೂಡ ಅಳವಡಿಸಿಲ್ಲ. ನಿರುದ್ಯೋಗ ಸಮಸ್ಯೆ ದೇಶದಲ್ಲಿ ಬೃಹದಾಕಾರವಾಗಿ ಬೆಳೆಯುತ್ತಿದೆ ಇದನ್ನು ಹೋಗಲಾಡಿಸುವುದಕ್ಕೆ ಸರ್ಕಾರಿ ಅಧಿಕಾರಿಗಳ ವರ್ಗವನ್ನು ಹೆಚ್ಚು ಮಾಡುತ್ತಾ ಹೋಗುತ್ತಿದ್ದಾರೆ. ಯಾವ ವಿಧದಲ್ಲೂ ಕೂಡ ಈ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸುವುದಕ್ಕೆ ಇದರಲ್ಲಿ ಕಾರ್ಯಕ್ರಮವನ್ನು ಅಳವಡಿಸಿಲ್ಲ.

ನಮ್ಮ ದೇಶದ ವಿದ್ಯಾಭ್ಯಾಸ ಪದ್ಧತಿ ಮಾರ್ಪಾಟಾಗಿದ್ದರೆ ಇಂಥಾ ಒಂದು ಕಷ್ಟಪರಿಸ್ಥಿತಿ ಬರುತ್ತಾ ಇರಲಿಲ್ಲ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಇಂದು ನಮ್ಮ ರಾಜ್ಯದ ಉತ್ಪತ್ತಿ 300 ಕೋಟಿ ರೂಪಾಯಿಗಳು ಇದೆ. ಇದರಲ್ಲಿ 137 ಕೋಟಿ ರೂಪಾಯಿಗಳು ಸರ್ಕಾರದ ಅಧಿಕಾರಿಗಳ ಸಂಬಳ ಸಾರಿಗೆಗೇ ಖರ್ಚಾಗುತ್ತಿದೆ. ಈ ರೀತಿ ಉತ್ಪತ್ತಿ ಬಾರದೆ ಇರುವಂತಹ ರೀತಿಯಲ್ಲಿ ಈ ರೀತಿ ಹಣವನ್ನು ಖರ್ಚು ಮಾಡುತ್ತಾ ಹೋದರೆ ದೇಶದ ಆರ್ಥಿಕ ಪರಿಸ್ಥಿತಿ ಅಭಿವೃದ್ಧಿಯಾಗುವುದು ಅನುಮಾನಾಸ್ಪದ. ಈಗ ಹಾಲಿ ಇರತಕ್ಕ ಅಧಿಕಾರಿವರ್ಗದವರಿಗೆ ಸಾಕಷ್ಟು ಸಂಬಳ ಸಾರಿಗೆಯನ್ನು ಕೊಟ್ಟು ಹೆಚ್ಚು ಕೆಲಸಕಾರ್ಯಗಳನ್ನು ಮಾಡಿದರೆ ಅಧಿಕಾರವರ್ಗದವರನ್ನು ಹೆಚ್ಚು ಮಾಡತಕ್ಕ ಆವಶ್ಯಕತೆ ಇರಲಿಲ್ಲ. ಶ್ರೀಮಾನ್ ಪುಟ್ಟಸ್ವಾಮಿಯವರು ಇವೊತ್ತಿನ ದಿವಸ ಈ ದೇಶದಲ್ಲಿರತಕ್ಕ ಪರಿಸ್ಥಿತಿಗೆ ಬಾಂಗ್ಲಾದೇಶದ ವ್ಯವಹಾರವೇ ಕಾರಣ ಎಂದು ಹೇಳಿದ್ದಾರೆ. ಬಾಂಗ್ಲಾದೇಶದ ಪ್ರಶ್ನೆ ಬಂದಾಗ ಇಡೀ ದೇಶದ ಜನತೆ ಒಂದೂಗೂಡಿ ಒಕ್ಕೊರಲಿನಿಂದ ಕೂಗಿ ಬಾಂಗ್ಲಾ ದೇಶಕ್ಕೆ ಸಹಾಯ ಮಾಡಿದ್ದೇವೆ. ಹೆಚ್ಚಿಗೆ ತೆರಿಗೆ ಕೂಡ ಜನತೆ ಕೊಟ್ಟಿದ್ದಾರೆ. ಯಾವ ಒಂದು ಭಿನ್ನಾಭಿಪ್ರಾಯವೂ ಇಲ್ಲದೆ ಸರ್ಕಾರದ ಅಭಿಪ್ರಾಯವನ್ನು ಒಪ್ಪಿಕೊಂಡು ಆ ಒಂದು ಸಮಸ್ಯೆಯನ್ನು ಪರಿಹಾರ ಮಾಡುವುದಕ್ಕೆ ಸರ್ಕಾರಕ್ಕೆ ಜನತೆ ಸಹಾಯಮಾಡಿದೆ. ಮತ್ತು ಸರ್ಕಾರದವರು ಮಾಡತಕ್ಕ ಕೆಲಸಕಾರ್ಯಗಳಿಗೆ ವಿರೋಧ ಪಕ್ಷದವರು ಯಾವ ಒಂದು ಅಡಚಣೆಯನ್ನೂ ಮಾಡಿಲ್ಲ. ಸರ್ಕಾರದವರು ಇತ್ತೀಚೆಗೆ ಇನ್ನೊಂದು ವಿಷಯವನ್ನು ಹೇಳುತ್ತಿದ್ದಾರೆ. ಅದೇನೆಂದರೆ ಸರ್ಕಾರದವರು ಮಾಡತಕ್ಕ ಪ್ರಗತಿಪರ ಕಾರ್ಯಗಳಲ್ಲಿ ವಿರೋಧ ಪಕ್ಷದವರು ಅಡಚಣೆಯನ್ನುಂಟು ಮಾಡುತ್ತಿದ್ದಾರೆ ಎಂದು ಹೇಳಿದ್ದಾರೆ. ಈಗ ವಿರೋಧ ಪಕ್ಷದ ಸಂಖ್ಯೆ ಬಹಳ ಕಡಿಮೆ ಇದೆ. ಆಡಳಿತ ಪಕ್ಷದವರ ಸಂಖ್ಯೆ ಜಾಸ್ತಿ ಇದೆ. ರಚನಾತ್ಮಕವಾದ ಮತ್ತು ಉತ್ತಮವಾದ ಕೆಲಸ ಕಾರ್ಯಗಳನ್ನು ವಿರೋಧಪಕ್ಷದವರು ಎಂದಿಗೂ ಕೂಡ ವಿರೋಧ ಮಾಡುವುದಿಲ್ಲ.

## 9. ಮೈಸೂರು ತಾಲ್ಲೂಕಿನಲ್ಲಿ ನೆರೆಹಾವಳಿ ಕುರಿತು - 1973.*

**630. Sri K. PUTTASWAMY (Chamundeswari)-.**

Will the Minister for Revenue be pleased to state:

(a) the tanks in Mysore Taluk which breached in the year 1972 due to heavy rain;

(b) the extent of wet, dry and garden lands damaged and estimated loss on account of floods;

(c) the estimated loss of standing crop;

(d) whether any relief is given to those who suffered loss;

(e) If so, the nature of relief provided?

**Sri N. HUTCHAMASTHY GOWDA (Minister for Revenue):-**

(a)
1. Devagahalli Tank
2. Rayanakere Tank
3. Hosakere Tank
4. Doddagowdanakatte
5. Maidanahalli Tank
6. Yennehole

(b)

| | Extent | Estimated Loss |
|---|---|---|
| | A--G | Rs. |
| Wet. | 36-07 | 58,100 |
| Dry | 83-29 | 37,150 |
| Garden | 13-31 | 71,400 |
| Total | 133-27 | 1,66,650 |

(c) 131 acres Rs. 1,66,650

(d) Relief by way of cash grant has been sanctioned in 41 cases amounting to Rs. 16650;

(e) Vide clause (d)

* ವಿಧಾನ ಸಭಾ ಕಲಾಪ ದಿನಾಂಕ: 21-3-1973

ಶ್ರೀ ಕೆ. ಪುಟ್ಟಸ್ವಾಮಿ :-

(ಆ) ಪ್ರಶ್ನೆಗೆ ಉತ್ತರವಾಗಿ 1 ಲಕ್ಷದ 66 ಸಾವಿರದ 650 ರೂಪಾಯಿ ಜಮೀನು ನಷ್ಟಕ್ಕಾಗಿ ಎಂದು ಹೇಳುತ್ತೀರಿ ಅದರ ಮುಂದಿನ ಪ್ರಶ್ನೆಗೂ ಕೂಡ ಏನು ಹೇಳಿದೆಯೆಂದರೆ ಪೈರು ಎಷ್ಟು ನಷ್ಟವಾಗಿದೆ ಅದಕ್ಕೂ 1ಲಕ್ಷದ 66 ಸಾವಿರದ 650 ರೂಪಾಯಿಗಳು ಎಂದು ಹೇಳಿದ್ದೀರಿ. ಈ ಎರಡಕ್ಕೂ ಕೋಯಿನ್‌ಸೈಡ್ ಆಗಿರುವುದಕ್ಕೆ ವಿಶೇಷ ಏನಾದರೂ ಇದೆಯೇ?

ಶ್ರೀ ಎನ್. ಹುಚ್ಚಮಾಸ್ತಿಗೌಡ :-

ನಷ್ಟ ಆಗಿರುವುದನ್ನು ಲೆಕ್ಕ ಹಾಕುವಾಗ ಸ್ವಲ್ಪ ಕನ್‌ಫ್ಯೂಷನ್ ಆಗಿದೆ. ಮತ್ತ ಬದಲಾವಣೆ ಮಾಡುವುದಕ್ಕೆ ಆಗಲಿಲ್ಲ. ಜಮೀನು ನಷ್ಟ, ಬೆಳೆ ನಷ್ಟ ಎರಡು ಒಟ್ಟಿಗೆ ಸೇರಿಸಿ ಹಾಕಿಬಿಟ್ಟಿದ್ದಾರೆ. ಅದು ಎಷ್ಟು ಎನ್ನುವುದನ್ನು ಪ್ರತ್ಯೇಕವಾಗಿ ತಿಳಿದು ಹೇಳಬೇಕಾಗುತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ :-

ಇದನ್ನು ಪರಿಹಾರ 16 ಸಾವಿರದ 550 ರೂಪಾಯಿ ಮಂಜೂರು ಮಾಡಿದೆಯೆಂದು ಹೇಳುತ್ತೀರಿ? ಯಾವಾಗ ಮಂಜೂರು ಮಾಡಿದಿರಿ: ಮಂಜೂರು ಮಾಡುವುದಕ್ಕೆ ಆಧಾರವೇನು?

ಶ್ರೀ ಎನ್. ಹುಚ್ಚಮಾಸ್ತಿಗೌಡ:-

ಇಷ್ಟು ನಷ್ಟಕ್ಕೆ ಎಷ್ಟು ಕೊಡಬೇಕೆನ್ನುವುದನ್ನು ನೋಡಿ ಅದರ ಆಧಾರದ ಮೇಲೆ ಗೌರ್ನಮೆಂಟ್ ಆರ್ಡರ್ ಇದೆ. 1000 ರೂಪಾಯಿ ನಷ್ಟವಾದರೆ ಎಷ್ಟು 500 ರೂಪಾಯಿ ನಷ್ಟವಾದರೆ ಎಷ್ಟು: 200 ರೂಪಾಯಿ ಒಳಗೆ ನಷ್ಟವಾದರೆ ಆ ನಷ್ಟಕ್ಕೆ ಏನು ಕೊಡಬೇಕು ಎಂದು ಗೌರ್ನಮೆಂಟ್ ಆರ್ಡರ್ ಇದೆ. ಅದರ ಪ್ರಕಾರ ಆ ಆಧಾರದ ಮೇಲೆ ಕೊಡುವುದಕ್ಕೆ ಆರ್ಡರ್ ಮಾಡಿರುವುದು.

ಶ್ರೀ ಕೆ. ಪುಟ್ಟಸ್ವಾಮಿ:-

ಯಾವಾಗ ಮುಂಜೂರು ಮಾಡಿದಿರಿ?

ಶ್ರೀ ಎನ್. ಹುಚ್ಚಮಾಸ್ತಿಗೌಡ.-

ಮಂಜೂರು ಆದದ್ದು ನಷ್ಟವಾದ ಒಂದೂವರೆ ತಿಂಗಳಲ್ಲಿ ಆಗಿದೆ. ನನ್ನ ಹತ್ತಿರ ತಾರೀಖು ಇಲ್ಲ. ನಷ್ಟ ಆದ ಸ್ವಲ್ಪ ದಿವಸದಲ್ಲಿ ಮಂಜೂರು ಆಗಿದೆ. ಮಂಜೂರು ಆದ ಮೇಲೆ ಒಟ್ಟಿಗೆ ಜಿಲ್ಲೆಗೆ ಕೊಡಲಾಗಿದೆ. ಆ ಹಣವನ್ನು ಚಿಕ್ಕಹೊಳೆ ನಷ್ಟವಾದ ಸ್ಥಳದಲ್ಲಿ ಅಧಿಕಾರಿಗಳು ಅದನ್ನು ಉಪಯೋಗಿಸಿಕೊಂಡಿರುವುದು ಗೊತ್ತಾಗಿ ಅದಕ್ಕಾಗಿ ಕೂಡಲೇ ಕೊಡಬೇಕು ಎಂದು ಹೇಳಿದ್ದೇವೆ 6 ತಿಂಗಳೊಳಗಾಗಿ ಹಣಕೊಡಲಾಗಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ವರ್ಷಗಳು ಸಹಿತ ಆದರೂ ಪರಿಹಾರ ದೊರೆಯದೆ ಹೋಗುವುದಕ್ಕೆ ಕಾರಣ ಏನು? ಚಿಕ್ಕಹೊಳೆ ಪ್ರಕರಣ ಆದದ್ದು ಮೊನ್ನೆ ತಾನೇ? ಚಿಕ್ಕಹೊಳೆ ಕಾರಣವಲ್ಲದೆ ಇನ್ನು ಏನಾದರೂ ಕಾರಣ ಇದೆಯೇ?

ಶ್ರೀ ಎನ್. ಹುಚ್ಚಮಾಸ್ತಿಗೌಡ:-

ಇನ್ನು ಯಾವುದು ಇಲ್ಲ. ಇತ್ತೀಚೆಗೆ ಇನ್ನೊಂದು ಸ್ವಲ್ಪ ಕಾರಣ ಇದೆ. ಕ್ಷಾಮ ಪ್ರದೇಶಗಳಿಗೆ ಅನುಕೂಲಗಳನ್ನು ಒದಗಿಸಿಕೊಡುವುದಕ್ಕೆ ಈ ಪ್ರದೇಶದಿಂದ ಇನ್ನೊಂದು ಪ್ರದೇಶದ ರೈತರಿಗೆ ಪ್ರೋತ್ಸಾಹ ಕೊಡತಕ್ಕ ಸಂದರ್ಭದಲ್ಲಿ ಕೇಂದ್ರದಿಂದ ಬಂದಿದ್ದ ಅಧ್ಯಯನ ತಂಡ ಗೊತ್ತು ಮಾಡಿರತಕ್ಕ ಹಣಕ್ಕೆ ಮೀರದಂತೆ ಕೊಡಬೇಕು ಎಂದು ಹೇಳಿದ್ದಾರೆ. ಅದರ ಮಿತಿಯೂ ಕೂಡ ಇದ್ದುದರಿಂದ ಸ್ವಲ್ಪ ನಿಧಾನವಾಯಿತು.

## 10. ನಗರಾಭಿವೃದ್ಧಿ ಸಮಸ್ಯೆ ಕುರಿತು - 1973.*

ಮಾನ್ಯ ಉಪಾಧ್ಯಕ್ಷರೇ, ಈ ಬೇಡಿಕೆಯನ್ನು ನಾನು ಪುಷ್ಟೀಕರಿಸುತ್ತಾ ಕೆಲವು ವಿಚಾರಗಳನ್ನು ಹೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ಶ್ರೀಮಾನ್ ಕಾಗೋಡು ತಿಮ್ಮಪ್ಪನವರು ನಾನು ಮಾತನಾಡುವುದಕ್ಕೆ ಪ್ರಾರಂಭ ಮಾಡಿದಾಗ ಸ್ವಲ್ಪ ಗೊಣಗಿದರು. ಅವರು ಹಾಗೆ ಅಲ್ಪತೃಪ್ತರಾಗಬಾರದು. ನಾವು ಈ ಒಂದು ಬೇಡಿಕೆಯ ಮೇಲೆ ಮಾತನಾಡಿ, ಆಡಳಿತ ಉತ್ತಮವಾಗುವುದಕ್ಕೆ ನಮಗೆ ತಿಳಿದಂಥ ಸಲಹೆಗಳನ್ನು ಕೊಡುವುದು ನಮ್ಮ ಕರ್ತವ್ಯ. ಆಡಳಿತ ನಡೆಸತಕ್ಕ ಜವಾಬ್ದಾರಿ ಹೊತ್ತಿರತಕ್ಕವರು ನಮ್ಮ ಸಲಹೆಗಳನ್ನು ಪರಿಶೀಲನೆ ಮಾಡಿ, ಆಡಳಿತ ದೃಷ್ಟಿಯಿಂದ ಎಷ್ಟು ಮಟ್ಟಿಗೆ ಅವನ್ನು ಜಾರಿಗೆ ಕೊಡುವುದಕ್ಕಾಗುತ್ತದೆ ಎಂದು ಪ್ರಯತ್ನ ಮಾಡಬೇಕಾದುದು ಅವರ ಕರ್ತವ್ಯ. ಮೈಸೂರು ರಾಜ್ಯದಲ್ಲಿ ಇರತಕ್ಕಂಥ ಸ್ಥಳೀಯ ಸಂಸ್ಥೆಗಳ ಪರಿಸ್ಥಿತಿ ಅಷ್ಟು ಉತ್ತಮವಾಗಿಲ್ಲ. ಕಾರಣ ಯಾವ ಸಂಸ್ಥೆಗೂ ಕೂಡ ಹಣಕಾಸಿನ ಭದ್ರತೆ ಇಲ್ಲ. ಈಗತಾನೆ ಮಾತನಾಡಿದ ಮಾನ್ಯ ಶಾಮಣ್ಣನವರು ಹೇಳಿದರು. ಬೆಂಗಳೂರಿನ ನಗರಸಭೆಯ ಹಣಕಾಸಿನ ಪರಿಸ್ಥಿತಿ ಎಷ್ಟು ಚೆನ್ನಾಗಿದೆ, ತನ್ನ ಮೇಲಿರತಕ್ಕ ಎಲ್ಲಾ ಕರ್ತವ್ಯ ನಿರ್ವಹಣೆಯನ್ನು ಮಾಡತಕ್ಕ ಶಕ್ತಿ ಅದಕ್ಕೆ ಇದೆಯೆಂದು ಹೇಳುವುದಕ್ಕಾಗುವುದಿಲ್ಲ ಎಂದು ಹೇಳಿದರು. ಅವರು ಬೆಂಗಳೂರು ಪುರಸಭೆಗೆ ಬಹಳ ಕಾಲದಿಂದಲೂ ಸದಸ್ಯರಾಗಿರುವುದರಿಂದ, ಅಲ್ಲಿಂದಲೇ ಜನರ ಪ್ರತಿನಿಧಿಗಳಾಗಿರುವುದರಿಂದ ಅವರ ಮಾತುಗಳು ಸಾಮಾನ್ಯವಾಗಿ ಬೆಂಗಳೂರಿನ ನಗರದ ಆಡಳಿತಕ್ಕೆ ಸಂಬಂಧಪಟ್ಟ ಹಾಗೆ ವಾಸ್ತವಾಂಶದಿಂದ ಕೂಡಿವೆ. ಆದರೆ ಬೆಂಗಳೂರಿನ ಪರಿಸ್ಥಿತಿ ಹೀಗಿರುವಾಗ ಸಣ್ಣ ಸಣ್ಣ ಸ್ಥಳೀಯ ಸಂಸ್ಥೆಗಳ ಪರಿಸ್ಥಿತಿ ಹೇಗೆ ಇರಬಹುದು ಎಂದು ನಾವು ಊಹೆ ಮಾಡಿಕೊಳ್ಳಬಹುದು. ಇಂಥ ಪರಿಸ್ಥಿತಿ ಇರುವಾಗ ಪುರಸಭೆಗಳ ಹಣಕಾಸಿನ ಪರಿಸ್ಥಿತಿಯನ್ನು ಉತ್ತಮ ಮಾಡಿಕೊಳ್ಳುವುದು ಹೇಗೆ ಎನ್ನುವ ಕಡೆ ಗಮನ ಕೊಡಬೇಕು. ಬಹುಶ: ನಾವು ಯಾರು ಈ ಪ್ರಯತ್ನವನ್ನು ಮಾಡಿಲ್ಲ. ಸರ್ಕಾರ ಈ ದಿಸೆಯಲ್ಲಿ ಆಲೋಚನೆ ಮಾಡಬೇಕು. ಪುರಸಭೆಯ ಹಣಕಾಸಿನ ಪರಿಸ್ಥಿತಿ ಉತ್ತಮವಾಗದ ಹೊರತು ಅಲ್ಲಿ ವಾಸ ಮಾಡತಕ್ಕ ನಾಗರೀಕರಿಗೆ ನಾಗರೀಕ ಸೌಲಭ್ಯಗಳನ್ನು ಒದಗಿಸಿ ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ

ಸಾಕಷ್ಟು ಕುಡಿಯುವ ನೀರಿನ ಸೌಲಭ್ಯ, ಒಳಚರಂಡಿ ವ್ಯವಸ್ಥೆ, ಮತ್ತೆ ನಗರ ನಿರ್ಮಲೀಕರಣ ವ್ಯವಸ್ಥೆ ಸರಿಯಿಲ್ಲ ಎಂದು ನಾವು ಟೀಕೆ ಮಾಡಬಹುದು. ಆದರೆ ಅದಕ್ಕೆಲ್ಲಾ ಬೇಕಾದಂಥ ಸಿಬ್ಬಂದಿಯನ್ನು ಹಣವನ್ನು ಅವರೇ ಒದಗಿಸಿಕೊಳ್ಳಬೇಕು, ಇಲ್ಲದಿದ್ದರೆ ಅವರು ಏನು ತಾನೆ ಮಾಡಿಯಾರು? ಈ ಪುರಸಭೆಗಳಿಗೆ ಬಹುಭಾಗ ಹಣಕಾಸು ಬರುತ್ತಾ ಇರುವುದು ಆಕ್ಟ್ರಾಯ್‌ನಿಂದ, ಈ ಆಕ್ಟ್ರಾಯ್‌ನ್ನು ಮುಂದುವರೆಸಿಕೊಂಡು ಹೋಗಬೇಕೆ ಬೇಡವೇ, ಎನ್ನುವ ಪ್ರಶ್ನೆ ಇದೆ. ಇದನ್ನು ಸರ್ಕಾರದವರು ಸಮಗ್ರವಾಗಿ ಆಲೋಚನೆ ಮಾಡಿ ಜಾಗ್ರತೆ ತೀರ್ಮಾನ ಮಾಡಬೇಕು. ಇದು ಯಾವುದೋ ಹಳೆಯ ಕಾಲದ ಒಂದು ಕಂದಾಚಾರ ಪದ್ಧತಿ, ಇದು ಔಟ್‌ಡೇಟೆಡ್ ಟ್ಯಾಕ್ಸ್ ಎಂದು ಹೇಳುತ್ತಾರೆ. ಆರ್ಥಿಕ ತಜ್ಞರೂ ಕೂಡ ಈ ಸುಂಕವನ್ನು ತೆಗೆದುಹಾಕಬೇಕು ಎಂದು ಸ್ಪಷ್ಟವಾದ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಇದರಲ್ಲಿ ಭಿನ್ನಾಭಿಪ್ರಾಯ

---

* ವಿಧಾನ ಸಭಾ ಕಲಾಪ ದಿನಾಂಕ: 29-3-1973

ಯಾವುದೂ ಇಲ್ಲ. ಆದರ ಅದನ್ನು ರದ್ದುಮಾಡುವುದಕ್ಕೆ ಸರ್ಕಾರಕ್ಕೆ ಕೆಲವು ಕಷ್ಟ ಇದೆ. ಈ ಆಕ್ಟ್ರಾಯ್ ದೆಸೆಯಿಂದ ಸರ್ಕಾರಕ್ಕೆ ಏಳು ಕೋಟಿ ರೂಪಾಯಿಗಳ ಉತ್ಪನ್ನ ಬರುತ್ತದೆ. ಆಕ್ಟ್ರಾಯ್‌ನ್ನು ತೆಗೆದಿದ್ದೇ ಆದರೆ, ಬೇರೆ ರೀತಿಯಿಂದ ಅದನ್ನು ಕೊಡಿಸಿ ಕೊಡಬೇಕು. ಹೇಗೆ ಕೊಡಿಸಿಕೊಡಬೇಕು ಎನ್ನುವುದು ಒಂದು ಸಮಸ್ಯೆಯಾಗಿದೆ. ಸರ್ಕಾರದವರು ನೇಮಿಸಿದಂಥ ಆರ್ಥಿಕ ತಜ್ಞರ ಸಮಿತಿ ವರದಿ ಕೊಟ್ಟಿದೆ, ಅದನ್ನು ಸರ್ಕಾರದವರು ಪರಿಶೀಲನೆ ಮಾಡಿ ಸರ್ಕಾರದವರೇ ಕಾರ್ಯಕ್ರಮ ತೆಗೆದುಕೊಳ್ಳಬೇಕು. ನನ್ನ ಅಭಿಪ್ರಾಯದಲ್ಲಿ, ಈ ಸುಂಕವನ್ನು ಆದಷ್ಟು ಬೇಗ ರದ್ದು ಮಾಡಬೇಕು. ಆದ್ದರಿಂದ ಎಷ್ಟೇ ತೊಂದರೆಯಾಗಲಿ, ಸರ್ಕಾರದ ಖಜಾನೆಯ ಮೇಲೆ ಎಷ್ಟೇ ಭಾರ ಬರಲಿ, ಈ ಸುಂಕವನ್ನು ರದ್ದು ಮಾಡುವುದು ಅತ್ಯಂತ ಆವಶ್ಯಕ. ಅದಕ್ಕೆ ನಾನು ಕೊಡುವಂತಹ ಕಾರಣ ಒಂದು. ಈ ಏಳು ಕೋಟಿ ರೂಪಾಯಿಗಳ ಸುಂಕ, ಪುರಸಭೆಗಳಿಗೆ ತಲುಪಬೇಕಾದರೆ ಜನರ ಮೇಲೆ ಎಷ್ಟು ಪ್ರಮಾಣದ ತೆರಿಗೆ ಬರುತ್ತದೆ ಎಂದು ನಾವು ಆಲೋಚನೆ ಮಾಡಬೇಕು. ಬಹುಶ: ಸುಂಕದ ವಸೂಲಾತಿಯಲ್ಲಿ ದೋಷವಿದೆ. ಸುಂಕ ಸರಿಯಾಗಿ ವಸೂಲಾಗುತ್ತಿಲ್ಲ. ಆದ್ದರಿಂದ ಇದನ್ನು ಆಲೋಚನೆ ಮಾಡಿದರೆ, ಬರತಕ್ಕ ತೆರಿಗೆ ಎಲ್ಲ ಸಂಪೂರ್ಣವಾಗಿ ಪುರಸಭೆಗಳಿಗೆ ತಲುಪುವಂತೆ ಮಾಡುವುದು ಬಹಳ ದುಸ್ಸಾಧ್ಯವಾದಂಥ ಕೆಲಸ. ಇದು ಸಾಧ್ಯವಿಲ್ಲ ಎಂದು ನನ್ನ ಅಭಿಪ್ರಾಯ. ನನ್ನ ತಿಳುವಳಿಕೆಯ ಪ್ರಕಾರ ಏಳು ಕೋಟಿ ರೂಪಾಯಿಗಳು ಪುರಸಭೆಗಳಿಗೆ ತಲುಪಬೇಕಾದರೆ, ಸುಮಾರು ನಾಲ್ಕು ಕೋಟಿ ರೂಪಾಯಿಗಳ ತೆರಿಗೆ ಜನರ ಮೇಲೆ ಬಿದ್ದೇ ಬೀಳುತ್ತದೆ. ಬಳಕೆದಾರರ ಮೇಲೆ ಆಕ್ಟ್ರಾಯ್ ಬಿದ್ದೇಬೀಳುತ್ತದೆ. ಅದು ವಸೂಲಾಗುವಾಗ ಚೋಲು ಆಗುತ್ತದೆ. ಇದನ್ನು ಕೊಡದೆ ತಪ್ಪಿಸಿಕೊಂಡು ಹೋದವರೂ ಜನಗಳ ಮೇಲೆ ತೆರಿಗೆ ಹಾಕಿ ವಸೂಲಿಮಾಡುತ್ತಾರೆ. ಅಂತೂ ಇಂತೂ ದೇಶಕ್ಕೆ ಏಳು ಕೋಟಿ ರೂಪಾಯಿಗಳು ವಸೂಲು ಆಗಬೇಕಾದರೆ ನನ್ನ ಅಭಿಪ್ರಾಯದಲ್ಲಿ ಇದು 30 ಕೋಟಿ ಜನಗಳ ಮೇಲೆ ಬೀಳುತ್ತದೆ ಇದನ್ನು ಸಂಪೂರ್ಣವಾಗಿ; ವಸೂಲು ಮಾಡುವುದಕ್ಕೆ ಅನುಕೂಲವಾಗುವ ರೀತಿಯಲ್ಲಿ ಯೋಚನೆ ಮಾಡಬೇಕು.

ಶ್ರೀ ಟಿ.ಆರ್. ಶಾಮಣ್ಣ:-

ಸೇಲ್ಸ್ ಟ್ಯಾಕ್ಸ್ ಜನಸಾಮಾನ್ಯರ ಮೇಲೆ ಬೀಳುತ್ತದೆ, ಅದನ್ನು ಮುನಿಸಿಪಾಲಿಟಿಗಳಿಗೆ ಕೊಡಬೇಕಾದದ್ದು ಅಲ್ಲವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಶಾಮಣ್ಣನವರು ನನ್ನನ್ನು ಬಹಳ ದಿವಸಗಳಿಂದ ಬಲ್ಲವರು. ಪುರಸಭೆಗಳಿಗೆ ಪರಿಹಾರ ಕೊಡದಿದ್ದರೆ ಅವುಗಳು ಆಡಳಿತವನ್ನು ನಡೆಸುವುದಕ್ಕೆ ಸಾಧ್ಯವಿಲ್ಲ. ಅವುಗಳಿಗೆ ಪರಿಹಾರ ಕೊಡಬೇಕು, ಕೊಡಬೇಕಾದರೆ ಬೇರೆ ಯಾವುದಾದರೂ ತೆರಿಗೆ ಹಾಕಿ ಕೊಡಬೇಕು ಅಥವಾ ಸರ್ಕಾರದ ಖಜಾನೆಯಿಂದ ಕೊಡಬೇಕು ಎಂದು ನನ್ನ ವಾದ. ನನ್ನ ಅಭಿಪ್ರಾಯದಲ್ಲಿ ಇನ್ನೊಂದು ತೆರಿಗೆ ಹಾಕಿ ಪುರಸಭೆಗಳಿಗೆ ಕೊಡುವುದು ನ್ಯಾಯವಲ್ಲ. ಸರ್ಕಾರದ ಒಟ್ಟು ಬೊಕ್ಕಸದಿಂದ ಕೊಡಬಹುದು. ಭಾರ ಬೀಳದಂತಹ ಬೇಕಾದಂತಹ ತೆರಿಗೆ ಜನರ ಮೇಲೆ ಹಾಕುವುದರಲ್ಲಿ ಯಾವ ಆಕ್ಷೇಪಣೆ ಇರದು. ಈ ಆಕ್ಟ್ರಾಯಿ ಸುಂಕದ ತೆರಿಗೆ ತೆಗೆದರೆ ಬಹಳ ಮಟ್ಟಿಗೆ ನಷ್ಟವಾಗುತ್ತದೆ ಎಂದರೂ ವಾಹನಗಳು ಎಷ್ಟು ಕಡೆ ನಿಲ್ಲಬೇಕು, ನಿಂತು ಸುಂಕ ಕೊಟ್ಟು ಹೋಗಬೇಕಾದರೆ

ಎಷ್ಟು ನಷ್ಟವಾಗುತ್ತದೆ ಎಂಬುದನ್ನು ಪರಿಶೀಲನೆ ಮಾಡಿ ನೋಡಿದರೆ ಈ ಸುಂಕ ರದ್ದುಮಾಡುವುದರಲ್ಲಿ ಕ್ಷೇಮ ಇದೆ ಎನ್ನುವುದು ಸ್ಪಷ್ಟವಾಗುತ್ತದೆ ಎಂದು ನನ್ನ ಅಭಿಪ್ರಾಯ. ಮತ್ತೆ ಈ ಪುರಸಭೆಗಳ ಆಡಳಿತದಲ್ಲಿ ಸರಿಯಾದಂತಹ ಕಾನೂನನ್ನು ಮಾಡದೆಹೋದರೆ ಆಡಳಿತವನ್ನು ಸುಧಾರಿಸುವುದಕ್ಕೆ ಆಗುವುದಿಲ್ಲ. ಈ ಮೈಸೂರು ರಾಜ್ಯದಲ್ಲಿ ಕಾರ್ಪೊರೇಷನ್‌ಗಳನ್ನು ಸ್ಥಾಪನೆ ಮಾಡುವುದಕ್ಕೆ ಇದುವರೆಗೂ ಕೂಡ ಕಾನೂನು ಮಾಡುವುದಕ್ಕೆ ಸಾಧ್ಯವಾಗಿಲ್ಲ. ಅದಕ್ಕೆ ಯಾರ ಮೇಲೆ ಆದರೂ ನಾನು ಆಕ್ಷೇಪಣೆ ಮಾಡುತ್ತಾ ಇಲ್ಲ. ಕಾಲ ಗತಿಸಿಹೋಗಿದೆ. ಕಷ್ಟ ಏನಾದರೂ ಇರಬಹುದು. ಮೈಸೂರು ರಾಜ್ಯದಲ್ಲಿ ಪುರಸಭೆಗಳನ್ನು ಕಾರ್ಪೊರೇಷನ್ ಆಗಿ ಪರಿವರ್ತಿಸುವುದಕ್ಕೆ ಬೇಕಾದಂತಹ ಕಾನೂನನ್ನು ಆದಷ್ಟು ಜಾಗ್ರತೆ ಮಾಡಬೇಕು ಎಂದು ನಾನು ಸಲಹೆಯನ್ನು ಕೊಡುತ್ತೇನೆ. ಮೈಸೂರು ರಾಜ್ಯದಲ್ಲಿ ಕೆಲವು ಪಟ್ಟಣಗಳು ತೀವ್ರವಾಗಿ ಕಾರ್ಪೊರೇಷನ್ ಸ್ಥಾನಮಾನಗಳನ್ನು ಪಡೆಯುವುದಕ್ಕೆ ಅರ್ಹವಾಗಿವೆ. ಕಾನೂನು ಇದ್ದರೆ ಯಾವ ಯಾವ ಪಟ್ಟಣಗಳು ಕಾರ್ಪೊರೇಷನ್ ಆಗುವುದಕ್ಕೆ ಲಾಯಕ್ಕು ಆಗುತ್ತದೆ ಅವಕ್ಕೆ ಅದನ್ನು ಅನ್ವಯ ಮಾಡುವುದಕ್ಕೆ ಸಾಧ್ಯ ಆಗುತ್ತದೆ. ಆ ದೃಷ್ಟಿಯಿಂದ ನಾನು ಸಲಹೆ ಮಾಡುವುದು ಮೈಸೂರು ರಾಜ್ಯಕ್ಕೆ ಎಲ್ಲಾ ಅನ್ವಯವಾಗುವಂತೆ ಒಂದು ಕಾರ್ಪೊರೇಷನ್ ಕಾನೂನನ್ನು ಮಾಡುವುದು ಅತ್ಯಂತ ಅಗತ್ಯ. ಬೆಂಗಳೂರು ಮತ್ತು ಹುಬ್ಬಳ್ಳಿ ಧಾರವಾಡ ಕಾರ್ಪೊರೇಷನ್‌ಗಳಿಗೆ ಅನ್ವಯವಾಗುವಂತೆ ಯಾವುದು ಒಳ್ಳೆಯ ಅಂಶ ಇದೆ ಅದನ್ನು ಸೇರಿಸಿ ಆದಷ್ಟು ಜಾಗ್ರತೆ ಕಾನೂನು ಮಾಡಬೇಕು.

ಮತ್ತೆ ಸ್ಲಮ್ಸ್ ವಿಚಾರದಲ್ಲಿ ಹೇಳುವುದಾದರೆ ನಗರಾಭಿವೃದ್ಧಿ ಸಮಿತಿಗಳು ಅಗತ್ಯ. ಇಲ್ಲಿ ಇರತಕ್ಕ ಸದಸ್ಯರು ಅನೇಕರು ಬೆಂಗಳೂರು ಮತ್ತು ಮೈಸೂರು ಪಟ್ಟಣಗಳನ್ನು ನೋಡಿರಬಹುದು. ಮೈಸೂರು ಪಟ್ಟಣದಲ್ಲಿ ನಗರಾಭಿವೃದ್ಧಿ ಸಮಿತಿ 1904ರಿಂದ ಇದೆ, ಹತ್ತಿರ ಹತ್ತಿರ 70 ವರ್ಷಗಳ ಕಾಲ ನಗರಾಭಿವೃದ್ಧಿ ಸಮಿತಿ ಆ ಪಟ್ಟಣದಲ್ಲಿ ಕಾರ್ಯ ಮಾಡುತ್ತಾ ಇದೆ. ಇವೊತ್ತು ಮೈಸೂರು ನಗರ ಸುಂದರವಾದಂತಹ ಪಟ್ಟಣ ಆಗಿರಬೇಕಾದರೆ, ಮೈಸೂರು ನಗರ ಒಳ್ಳೆಯ ರೀತಿಯಲ್ಲಿ ನಗರಾಭಿವೃದ್ಧಿ ಹೊಂದಿರಬೇಕಾದರೆ, ಅದರ ಬೆಳವಣಿಗೆ ಪಡೆದಿರಬೇಕಾದರೆ ಆ ಕೀರ್ತಿ ಬಹಳ ಮಟ್ಟಿಗೆ ಸಲ್ಲತಕ್ಕದ್ದು ನಗರಾಭಿವೃದ್ಧಿ ಸಮಿತಿಗೆ ಎಂದು ಹೇಳಬಹುದು. ನಗರಾಭಿವೃದ್ಧಿ ಸಮಿತಿಯನ್ನು ಸ್ಥಾಪನೆ ಮಾಡಿ ಆ ಮೂಲಕ ನಗರಗಳನ್ನು ಅಭಿವೃದ್ಧಿ ಮಾಡುವುದು ಅತ್ಯಗತ್ಯ. ಮೈಸೂರು ಅಭಿವೃದ್ಧಿಯಾಗಿರುವುದನ್ನು ನೋಡಿದರೆ ನಮಗೆ ಮನಸ್ಸಿನಲ್ಲಿ ಏನೋ ಒಂದು ಸಂತೋಷವಾಗುತ್ತದೆ. ಅದೇ ರೀತಿ ಇತರಕಡೆಗಳಲ್ಲೂ ಆಗಲು ಇಡೀ ಮೈಸೂರು ದೇಶಕ್ಕೆ ಎಲ್ಲಾ ಅನ್ವಯವಾಗುವಂತಹ ನಗರಾಭಿವೃದ್ಧಿ ಸಮಿತಿಗೆ ಸಂಬಂಧಪಟ್ಟ ಕಾನೂನು ಆಗುವುದು ಅಗತ್ಯ. ಆದ್ದರಿಂದ ಆದಷ್ಟು ಜಾಗ್ರತೆ ಈ ಕಾನೂನು ಮಾಡಬೇಕು. ಮಂಗಳೂರು ಬೆಳದಿರತಕ್ಕ ಪಟ್ಟಣ. ಅಲ್ಲಿ ಸರ್ವ ಕಾಲದ ಬಂದರು ಆಗುತ್ತದೆ, ರೈಲ್ವೆ ಮಾರ್ಗ ಬರುತ್ತದೆ. ಬಹಳ ಕೈಗಾರಿಕೆ ಚಟುವಟಿಕೆಗಳು ನಡೆಯುತ್ತಿವೆ. ಇಂಥ ನಗರಕ್ಕೆ ನಗರಾಭಿವೃದ್ಧಿ ಸಮಿತಿ ಇಲ್ಲದೆ ಹೋದರೆ ಸೂಕ್ತವಾಗಿ ಕಾಣುವುದಿಲ್ಲ, ಹುಬ್ಬಿ-ಧಾರವಾಡ ಅಷ್ಟೇ ಅಲ್ಲ. ಅದರಂತಹ ಅನೇಕ ಪಟ್ಟಣಗಳು ಇವೆ. ಆದ್ದರಿಂದ ನಗರಾಭಿವೃದ್ಧಿ ಸಮಿತಿಯನ್ನು ಸ್ಥಾಪನೆ ಮಾಡುವುದಕ್ಕೆ ಸಮಗ್ರವಾದ ಕಾನೂನನ್ನು ತರುವುದು ಅತ್ಯಗತ್ಯ. ಅದನ್ನು ಆದಷ್ಟು ಜಾಗ್ರತೆ ಈ ಸಭೆಗೆ ತಂದು ಕಾನೂನು ಮಾಡಬೇಕು ಎಂದು ಸರ್ಕಾರದಲ್ಲಿ ವಿನಂತಿಸಿಮಾಡಿಕೊಳ್ಳುತ್ತೇನೆ.

ಹಾಗೆ ಬೆಂಗಳೂರು ನಗರ ಸಮಿತಿ ಸಮಸ್ಯೆ ಏನು ಎಂದರೆ ಸೊಳ್ಳೆ, ನೀರು ಮತ್ತು ಒಳಚರಂಡಿ ವ್ಯವಸ್ಥೆ ಅಲ್ಲದೆ ಕೊಳಚೆ ಪ್ರದೇಶ ನಿರ್ಮೂಲ ಮಾಡತಕ್ಕದು. ಇದು ಬಹಳ ದೊಡ್ಡ ಕೆಲಸ. ನನ್ನ ಅಭಿಪ್ರಾಯದಲ್ಲಿ ನಗರಾಭಿವೃದ್ಧಿ ಮಂಡಲಿ ಕಾರ್ಯವನ್ನು ಪ್ರಾರಂಭಮಾಡುವುದಕ್ಕೆ ಮೊದಲು ಇದ್ದಂಥ ಪುರಸಭೆ ಸಾಕಷ್ಟು ಮುಂಜಾಗ್ರತೆ ಕಾರ್ಯಕ್ರಮವನ್ನು ತೆಗೆದುಕೊಳ್ಳದೇ ಇದ್ದುದರಿಂದ ಈ ಕೊಳಚೆ ಪ್ರದೇಶ ಬೆಳೆಯುವುದಕ್ಕೆ ಕಾರಣವಾಯಿತು. ಇತ್ತೀಚೆಗೆ ಸ್ವಾತಂತ್ರ್ಯ ಬಂದ ನಂತರ ಇಲ್ಲಿಗೆ ವಲಸೆ ಬಂದಂತಹ ಜನರು ಯಾವುದೋ ರೀತಿಯಲ್ಲಿ ವಾಸಮಾಡಬೇಕಾಗಿ ಬಂದು ಕೊಳಚೆ ಪ್ರದೇಶ ಬೆಳೆಯುವುದಕ್ಕೆ ಕಾರಣವಾಯಿತು. ಕೊಳಚೆ ಪ್ರದೇಶವನ್ನು ನಿರ್ಮೂಲನ ಮಾಡುವುದಕ್ಕೆ ಬೇಕಾದಂತಹ ಕಾನೂನು ಅಗತ್ಯ. 1958ರಲ್ಲಿ ಅದಕ್ಕೆ ಬೇಕಾದ ಕಾನೂನು ಮಾಡಿದ್ದರು. ಆದರೆ ಕಾನೂನು ಜಾರಿಗೆ ಕೊಡುವುದಕ್ಕೆ ಆಗಲಿಲ್ಲ. ಅದಕ್ಕೆ ಅನೇಕ ಅಡಚಣೆಗಳು ಬಂದವು. ಈಗಲೂ ಕೂಡ ಸುಪ್ರೀಂ ಕೋರ್ಟಿನಲ್ಲಿ ವ್ಯಾಜ್ಯ ಇರಬೇಕು. ಸರ್ಕಾರದವರು ಸ್ಲಮ್ಸ್ ಕ್ಲಿಯರ್ ಮಾಡುವುದಕ್ಕೆ ಸಭೆಯ ಮುಂದೆ ಮಸೂದೆಯನ್ನು ಮಂಡಿಸಿ ಆದಷ್ಟು ಜಾಗ್ರತೆ ಕಾನೂನು ತಂದು ಅದನ್ನು ಜಾರಿಗೆ ಕೊಡಬೇಕು ಎಂದು ಹೇಳುತ್ತೇನೆ. ಕಾನೂನು ಮಾಡಿದ ಮೇಲೆ ಇರತಕ್ಕ ಕೊರತೆ ಎಂದರೆ ಕಾನೂನಿನಲ್ಲಿ ಅನೇಕ ರೂಲ್ಸ್‌ಗಳನ್ನು ಮಾಡುವುದಕ್ಕೆ ಉದ್ದೇಶ ಇರುತ್ತದೆ. ಕಾನೂನು ಮಾಡುತ್ತೇವೆಯೇ ವಿನ: ಮತ್ತೆ ಅದನ್ನು ಜಾರಿಗೆ ಕೊಡುವುದಕ್ಕೆ ಅನೇಕ ವೇಳೆ ರೂಲ್ಸ್‌ಗಳನ್ನು ಮಾಡುವುದು ನಿಧಾನವಾದ ಕಾರಣದಿಂದ ಅದು ಜಾರಿಗೆ ಬರುವುದು ಕುಂಠಿತವಾಗುತ್ತದೆ. ಆ ಕಡೆಗೆ ಸರ್ಕಾರ ಗಮನಕೊಡಬೇಕು ಎಂದು ಸರ್ಕಾರದಲ್ಲಿ ವಿನಂತಿ ಮಾಡಿಕೊಳ್ಳುತ್ತೇವೆ. ಈಗ ಬೆಂಗಳೂರು ನಗರಾಭಿವೃದ್ಧಿಗೆ ಸಂಬಂಧಪಟ್ಟ ಮೂರು ಸಂಸ್ಥೆಗಳು ಕಾರ್ಯ ಮಾಡುತ್ತಾ ಇವೆ. ಒಂದು ನಗರಾಭಿವೃದ್ಧಿ ಮಂಡಳಿ, ಮತ್ತು ಕಾರ್ಪೋರೇಷನ್ ಹಾಗೂ ಪ್ಲಾನಿಂಗ್ ಅಥಾರಿಟಿ. ಪ್ಲಾನಿಂಗ್ ಅಥಾರಿಟಿ ನನ್ನ ಅಭಿಪ್ರಾಯದಲ್ಲಿ ಇವೊತ್ತಿನವರೆಗೂ ಕೂಡ ಅದಕ್ಕೆ ಸೂಕ್ತವಾದಂತಹ ಲೀಗಲ್ ಸ್ಟೇಟಸ್ ಇಲ್ಲ. ಕಂಟ್ರಿ ಮತ್ತು ಟೌನ್ ಪ್ಲಾನಿಂಗ್ ಆಕ್ಟ್ ಈ ಸಭೆ ಒಪ್ಪಿಗೆ ಪಡೆದು ನಿರ್ಣಯವಾಯಿತು. ಕಂಟ್ರಿ ಮತ್ತು ಟೌನ್‌ಪ್ಲಾನಿಂಗ್ ಆಕ್ಟ್ ಪ್ರಕಾರ ಸಾಮಾನ್ಯವಾಗಿ ಒಂದು ಡ್ರಾಫ್ಟ್ ಮಾಸ್ಟರ್ ಪ್ಲಾನ್ ಆಗುವುದು ನಿಧಾನವಾಗುತ್ತದೆ. ಹೆಚ್ಚು ಕಾಲ ಅಲ್ಲಿ ನಿಂತುಹೋಗುತ್ತದೆ. ಹಿಂದೆ ಸರ್ಕಾರದವರು ನೇಮಿಸಿದಂತಹ ದಿವಾನ್ ಮಾಧವರಾವ್‌ರವರ ಅಧ್ಯಕ್ಷತೆಯಲ್ಲಿ ನೇಮಕವಾದಂತಹ ಮೆಟ್ರೊಪಾಲಿಟನ್ ಬೋರ್ಡು ರಚಿಸಿ ಮಾಸ್ಟರ್ ಪ್ಲಾನ್, ಔಟ್‌ಲೇ ಡೆವಲಪ್‌ಮೆಂಟ್ ಪ್ಲಾನ್ ಈ ಸಭೆ ಅಂಗೀಕರಿಸಿತು. ಆ ಔಟ್‌ಲೇ ಡೆವಲಪ್‌ಮೆಂಟ್ ಪ್ಲಾನ್ ಬಗ್ಗೆ ಸಾರ್ವಜನಿಕ ಆಕ್ಷೇಪಣೆಗಳನ್ನು ಕೇಳಿ, ಆಖೈರು ಆದಂಥ ಮಾಸ್ಟರ್ ಪ್ಲಾನ್ ಅದುವರೆಗೂ ಮಾಡಿ ಆಗಿಲ್ಲ. ಆಕ್ಷೇಪಗಳನ್ನು ಕೇಳಿರಬಹುದು. ಆದರೆ ಆಖೈರು ತೀರ್ಮಾನಮಾಡಿ ಮಾಸ್ಟರ್ ಪ್ಲಾನ್ ಇದುವರೆಗೆ ಒಪ್ಪಿಕೊಂಡಿಲ್ಲ. ಮಾಸ್ಟರ್ ಪ್ಲಾನ್ ಒಪ್ಪಿಕೊಳ್ಳದೆ ಅದರಲ್ಲಿ ಇರತಕ್ಕ ಅಂಶಗಳನ್ನು ಜಾರಿಗೆ ಕೊಡುವುದಕ್ಕೆ ಪ್ಲಾನಿಂಗ್ ಅಥಾರಿಟಿ ಪ್ರಯತ್ನಮಾಡುತ್ತಾ ಇದ್ದಾರೆ. ಅವರಿಗೆ ಇರತಕ್ಕ ತೊಂದರೆ ಏನು ಎಂದರೆ ಯಾರಾದರೂ ಅವರ ಅಧಿಕಾರವನ್ನು ಪ್ರಶ್ನೆ ಮಾಡಿದರೆ ಅವರು ತಮ್ಮ ಅಧಿಕಾರವನ್ನು ಚಲಾಯಿಸುವುದಕ್ಕೆ ಬಹಳ ತೊಂದರೆಯಾಗುತ್ತದೆ. ಆದುದರಿಂದ ಆದಷ್ಟು ಜಾಗ್ರತೆ ಈ ಮಾಸ್ಟರ್ ಪ್ಲಾನ್ ವಿಚಾರದಲ್ಲಿ ಸರ್ಕಾರದವರು ಆಖೈರು ಆದಂತಹ ಹುಕುಂ

ಹೊರಡಿಸುವುದು ಅಗತ್ಯ. ಮೈಸೂರು ನಗರದಲ್ಲಿ ಔಟ್‌ಲೇ ಡೆವಲಪ್‌ಮೆಂಟ್ ಪ್ಲಾನ್ ಇದ್ದರೂ ಕೂಡ ಅಖೈರು ಆರ್ಡರ್ ಹೊರಡಿಸಿಲ್ಲ. ಎಲ್ಲೆಲ್ಲಿ ನಗರ ಸಭೆಗಳನ್ನು ತೆಗೆದುಹಾಕಿದ್ದಾರೋ ಅಲ್ಲೆಲ್ಲಾ ಯಾವ ನಿಬಂಧನೆಗಳ ಆಧಾರದ ಮೇಲೆ ಡೆವಲಪ್‌ಮೆಂಟ್ ಮಾಡಬೇಕೆಂದು ಏನಾದರೂ ಪ್ಲಾನು ಮಾಡಿದ್ದಿರಾ ? ಅಲ್ಲದೆ ಕೆಲವು ನಗರಸಭೆಗಳನ್ನು ರದ್ದು ಮಾಡಬೇಕೆಂದು ಸಾರ್ವಜನಿಕರಿಂದೇನಾದರೂ ದೂರುಗಳು ಸರಕಾರಕ್ಕೆ ಬಂದಿದ್ದವೇ? ಇದರಮೇಲೆ ಏನಾದರೂ ಆರ್ಡರು ಮಾಡಿದರೇ? ಇದರ ಆವಶ್ಯಕತೆ ಇತ್ತೇ? ಇವನ್ನೆಲ್ಲಾ ತಿಳಿಸಬೇಕೆಂದು ಸರಕಾರದಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಕೆಲವು ಕಾನೂನುಗಳು ಇವೆ, ಕಂಟ್ರಿ ಟೌನ್ ಪ್ಲಾನಿಂಗ್ ಆಕ್ಟ್, ಸಿಟಿ ಇಂಪ್ರೂವ್‌ಮೆಂಟ್ ಆಕ್ಟ್ ಮತ್ತು ಕಾರ್ಪೋರೇಷನ್ ಆಕ್ಟ್, ಈ ಮೂರು ಕಾನೂನುಗಳಲ್ಲಿರುವ ಕೆಲವು ಪ್ರಾವಿಷನ್‌ಗಳು ಒಂದಕ್ಕೊಂದು ಓವರ್ ಲ್ಯಾಪಿಂಗ್ ಆಗುವಂತೆ ಇವೆ, ಇದನ್ನು ಸರಕಾರ ಪರಿಶೀಲನೆ ಮಾಡಿ ಇಂತಹ ಓವರ್ ಲ್ಯಾಪಿಂಗ್ ಪ್ರಾವಿಷನ್‌ಗಳನ್ನು ತೆಗೆದು ಹಾಕುವುದು ಅತ್ಯಗತ್ಯ ಎಂದು ಸಲಹೆ ಮಾಡುತ್ತೇನೆ. ಮೂರು ಸಂಸ್ಥೆಗಳು ಇರಬೇಕಾದುದು ಅತ್ಯಾವಶ್ಯಕ, ಪ್ಲಾನಿಂಗ್ ಅಥಾರಿಟಿ ಯಾವ ರೀತಿ ಪ್ಲಾನು ಮಾಡಬೇಕು ಎನ್ನುವುದನ್ನು ಯೋಚಿಸಿ ಅದಕ್ಕೆ ತಕ್ಕಂತೆ ಯೋಜನೆಗಳನ್ನು ಮಾಡಬೇಕು ಮತ್ತು ನಗರಗಳನ್ನು ಯಾವ ರೀತಿ ಬೆಳೆಯಲು ಅವಕಾಶ ಮಾಡಬೇಕು ಎನ್ನುವುದನ್ನೂ ಅವರು ತೀರ್ಮಾನ ಮಾಡಬೇಕು. ಅದೇ ರೀತಿ ಅಭಿವೃದ್ಧಿ ಕಾರ್ಯಗಳನ್ನು ನಗರಸಭೆ ಸಮಿತಿಯವರು ಮಾಡಿ ಅಭಿವೃದ್ಧಿ ಕೆಲಸಗಳನ್ನು ನಡೆಸಿಕೊಂಡು ಹೋಗಬೇಕಾದುದು ಅವರ ಕೆಲಸ, ಕಾರ್ಪೋರೇಷನ್ ಕಾನೂನಿನಲ್ಲಿ ಬೇರೆ ಬೇರೆ ಬೋರ್ಡುಗಳಿವೆ. ಇವು ಬೇರೆ ಬೇರೆ ಕೆಲಸಗಳನ್ನು ಹಾಗೂ ಅತ್ಯಗತ್ಯವಾದ ಕೆಲಸಗಳನ್ನು ಮಾಡಬೇಕಾದುದು ಅತ್ಯಾವಶ್ಯಕ; ಈ ಮೂರು ಸಂಸ್ಥೆಗಳೂ ಇರಬೇಕಾದುದು ಅತ್ಯಾವಶ್ಯಕ. ಈ ಮೂರು ತಮ್ಮ ತಮ್ಮ ಕಾರ್ಯಗಳನ್ನು ಸರಿಯಾಗಿ ನಿರ್ವಹಿಸುವಂತೆ ಒಂದು ವ್ಯವಸ್ಥೆ ಮಾಡುವುದು ಅತ್ಯಗತ್ಯ ಎಂದು ನಾನು ಇಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಶ್ರೀ ಶಾಮಣ್ಣನವರು ಇಲ್ಲಿ ಪುರಸಭೆಗಳನ್ನು ರದ್ದು ಮಾಡುವ ವಿಚಾರಗಳನ್ನು ಪ್ರಸ್ತಾಪ ಮಾಡಿದರು, ಅವರು ಹೇಳುವ ವಿಷಯಗಳನ್ನೂ ನಾನು ಒಪ್ಪುತ್ತೇನೆ. ಆದರೆ ಪುರಸಭೆಗಳನ್ನು ರದ್ದು ಮಾಡುವ ಅಧಿಕಾರ ಸರಕಾರಕ್ಕಿದೆ, ಅದನ್ನು ನಾನು ಪ್ರಸ್ತಾಪ ಮಾಡುವುದಿಲ್ಲ. ಹಾಗೆ ಸರಕಾರ ಈಗಾಗಲೇ ಸುಮಾರು 9-10 ಪುರಸಭೆಗಳನ್ನು ಅವು ಮಾಡುವ ಕರ್ತವ್ಯಗಳಲ್ಲಿ ಕರ್ತವ್ಯ ವಿಮುಖವಾಗಿವೆ ಎಂದು ಅವರಿಗೆ ಮುನ್ನೆಚ್ಚರಿಕೆ ನೋಟೀಸನ್ನು ಕೊಟ್ಟು ಅವರು ಅದಕ್ಕೆ ಸಮಾಧಾನಕರವಾದ ಉತ್ತರಗಳನ್ನು ಕೊಡಲಿಲ್ಲ ಎಂದು ರದ್ದು ಮಾಡಿದ್ದೀರಾ? ರದ್ದು ಮಾಡುವ ಸಂದರ್ಭದಲ್ಲಿ ಚುನಾವಣೆ ಮಾಡಲು ಆಗಲಿಲ್ಲ ಎಂದು ಅದನ್ನು ಕ್ರಮಬದ್ಧವಾಗಿ ಮಾಡಲು 9-10 ಪುರಸಭೆಗಳನ್ನು ರದ್ದು ಮಾಡಿರುವ ವಿಚಾರವನ್ನು ಈ ಸಭೆಯಲ್ಲಿ ಪ್ರಸ್ತಾಪಮಾಡುವುದಿಲ್ಲ. ಇನ್ನೂ ಸುಮಾರು ತೊಂಬತ್ತಕ್ಕೆ ಮೇಲ್ಪಟ್ಟು ಪುರಸಭೆಗಳು ಸರಕಾರದ ವಶದಲ್ಲಿವೆ, ಇಲ್ಲೆಲ್ಲಾ ಅಡ್ಮಿನಿಸ್ಟ್ರೇಟರುಗಳನ್ನು ನೇಮಕ ಮಾಡಿದ್ದಾರೆಂದರೆ ಅದು ಸರಕಾರದ ವಶದಲ್ಲಿದ್ದಂತೆಯೇ ಆಗುತ್ತದೆ. ಇತ್ತೀಚೆಗೆ ಸರಕಾರದವರು ಅವರ ಕ್ಯಾಬಿನೆಟ್ಟಿನಲ್ಲಿ ಒಂದು

ತೀರ್ಮಾನ ಮಾಡಿದ್ದಾರೆ. ಅದು ಅಭಾವ ಪ್ರದೇಶಗಳಲ್ಲಿರುವ ಪುರಸಭೆಗಳಿಗೆ ಡಿಸೆಂಬರಿನಲ್ಲಿ ಚುನಾವಣೆಗಳನ್ನು ಮಾಡಬಾರದು ಎಂದು ಮತ್ತು ಇದು ಪತ್ರಿಕೆಗಳಲ್ಲಿ ಕೂಡ ಬಂದಿರುವುದನ್ನು ಓದಿದ್ದೇನೆ. ಅಭಾವ ಪ್ರದೇಶಗಳಲ್ಲಿ ಡಿಸೆಂಬರು ತಿಂಗಳಲ್ಲಿ ನಡೆಯುವ ಚುನಾವಣೆಗಳನ್ನು ಮುಂದೂಡುವುದು ಸರಿ, ಇದು ಅನ್‌ಅವಾಯ್‌ಡಬಲ್ ಎನ್ನುವುದು, ಇದಕ್ಕೆ ನನ್ನ ಅಡ್ಡಿ ಇಲ್ಲ. ಆದರೆ ಈಗಿರುವ ಕಾನೂನಿನ ಪ್ರಕಾರ ಇಂತಹ ವಿಶೇಷ ಸಂದರ್ಭಗಳಲ್ಲಿ ಕಾನೂನಿಗೆ ತಿದ್ದುಪಡಿ ಮಾಡಿ ತಂದು ಆ ನಂತರ ಚುನಾವಣೆಗಳನ್ನು ರದ್ದು ಮಾಡಬೇಕೆಂದು ಇದೆ. ಆದರೆ ಇದರಲ್ಲಿ ಅಂತಹ ಯಾವ ತಿದ್ದುಪಡಿಯನ್ನೂ ತರದೆ ಸರಕಾರವೇ ತಮ್ಮ ಪಕ್ಷದ ಧೋರಣೆಗೆ ಅನುಸಾರವಾಗಿದೆ ಎಂದು ತಮ್ಮ ಅಧಿಕಾರಕ್ಕೆ ಇದನ್ನು ತೆಗೆದುಕೊಂಡು ರದ್ದು ಮಾಡುವುದು ಸರಿಯಲ್ಲ ಮತ್ತು ಈಗಿರುವಂತೆಯೇ ಇದನ್ನು ಮುಂದುವರಿಸಿಕೊಂಡು ಹೋಗುವುದೂ ಸರಿಯಲ್ಲ ಎಂದು ನನ್ನ ಅಭಿಪ್ರಾಯ. ಹಿಂದೆ ಯುದ್ಧ ಪರಿಸ್ಥಿತಿ ಬಂದಿದ್ದ ಕಾಲದಲ್ಲಿ ಇಂತಹುದೇ ಒಂದು ತಿದ್ದುಪಡಿ ಕಾನೂನು ತಂದು ಆ ನಂತರ ಪುರಸಭೆಗಳ ಚುನಾವಣೆಗಳನ್ನು ಮುಂದುವರಿಸಿದ್ದರು. ಈಗೇನೋ ನಾಲ್ಕು ತಿಂಗಳಿಗಾಗಿ ಎಂದು ಮಾಡಬಹುದು, ಮುಂದೆ ಇದು ಒಂದು ವರ್ಷದಷ್ಟು ಕಾಲ ಮುಂದುವರಿಯಬಹುದು, ಆನಂತರ ಪುರಸಭೆಗಳಿಗೆ ಚುನಾವಣೆಗಳನ್ನು ಮಾಡಬಹುದು ಎಂದು ಹೇಳಬಹುದು, ಚುನಾವಣೆಗಳನ್ನು ನಡೆಸುತ್ತೇವೆಂದೂ ಇಲ್ಲಿ ಹೇಳಿಲ್ಲ. ಇದಕ್ಕೆ ಬದಲಾಗಿ ಇಂತಹ ಒಂದು ವಿಶೇಷ ಪರಿಸ್ಥಿತಿ ಇದೆ ಇಲ್ಲಿಗೆ ಒಂದು ತಿದ್ದುಪಡಿ ಕಾನೂನು ತಂದು ಅದರಂತೆ ಕ್ರಮ ತೆಗೆದುಕೊಳ್ಳುವುದು ಅತ್ಯಂತ ಅವಶ್ಯಕ ಎಂದು ನನಗಾದರೂ ಅನಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಯಾವುದೇ ಕಾರ್ಯ ಮಾಡಿದರೂ ನೇರವಾಗಿ ಮಾಡಬೇಕು. ಜನರ ಪ್ರತಿನಿಧಿಗಳಿಂದ ಅಭಿಪ್ರಾಯ ಪಡೆದು ಮಾಡಬೇಕು ಇದು ಅತ್ಯಂತ ಅವಶ್ಯಕ, ಇದನ್ನು ಮಾನ್ಯ ಮಂತ್ರಿಗಳು ಆಲೋಚನೆ ಮಾಡಬೇಕು ಎಂದು ಅವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಅಭಾವವಿಲ್ಲದೆ ಇರುವ ಅನೇಕ ಕಡೆಗಳಲ್ಲಿ ಇವೊತ್ತು ಇದ್ದ ಪುರಸಭೆಗಳನ್ನು ಸರಕಾರ ವಶಪಡಿಸಿಕೊಂಡಿದೆ. ಬಹುಶ: ಅದಷ್ಟು ಜಾಗ್ರತೆ ಇಲ್ಲಿ ಚುನಾವಣೆಗಳನ್ನು ಮಾಡಬೇಕೆಂದು ಇರಬಹುದು; ಆದರೆ ಮಾನ್ಯ ಮಂತ್ರಿಗಳು ಕೆಲವು ಕಡೆ ಹೇಳಿರುವ ಪತ್ರಿಕಾ ಹೇಳಿಕೆಗಳಲ್ಲಿ ಒಂದು ರೀತಿಯಾದ ಅನುಮಾನ ಬರುವಂತೆ ಹೇಳಿದ್ದಾರೆ. ಒಂದು ಕಡೆ ಅವರೇ ಹೇಳಿರುವ ಹೇಳಿಕೆಯಲ್ಲಿ ಎಲ್ಲಿಯವರೆಗೆ ಪುರಸಭೆಗಳ ಪರಿಸ್ಥಿತಿ ಸರಿಯಾಗುವುದಿಲ್ಲವೋ ಅಲ್ಲಿಯವರೆಗೆ ಚುನಾವಣೆಗಳನ್ನು ಮಾಡುವುದಿಲ್ಲ ಎಂದು ಹೇಳಿದ್ದಾರೆ. ಇವರು ಈ ರೀತಿ ಹೇಳುವಾಗ ಅವರ ಮನಸ್ಸಿನಲ್ಲಿ ಯಾವ ಪುರಸಭೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿದ್ದಾರೋ ಅಥವಾ ಕೆಲವು ಪುರಸಭೆಗಳನ್ನು ಗಮನದಲ್ಲಿ ಇಟ್ಟುಕೊಂಡು ಹೇಳಿದ್ದಾರೋ ಅದರ ಬಗ್ಗೆ ಊಹೆ ಮಾಡಿ ನಾನು ಇಲ್ಲಿ ಟೀಕೆ ಮಾಡುವುದಕ್ಕೆ ಹೋಗುವುದಿಲ್ಲ. ಈಗಿರುವ ಪರಿಸ್ಥಿತಿಯಲ್ಲಿ ಇಲ್ಲಿ ಚುನಾವಣೆಗಳನ್ನು ಮಾಡುವುದು ಯೋಗ್ಯವಲ್ಲ ಎಂದು ಅದಕ್ಕೆ ಕಾರಣಗಳನ್ನು ಕೊಟ್ಟಿದ್ದಾರೆ. ಪುರಸಭೆಗಳನ್ನು ನಡೆಸಲು ಮತ್ತು ಇಲ್ಲಿ ಚುನಾವಣೆಗಳನ್ನು ಮಾಡಲು 1971 ಸೆನ್‌ಸಸ್ ಎಂದರೆ ಜನಗಣತಿ ಲೆಕ್ಕದ ಪ್ರಕಾರ ಕೆಲವು ಕಡೆಗಳಲ್ಲಿ ವಾರ್ಡು ಹಾಗೂ ಡಿವಿಜನ್‌ಗಳು ಸರಿಯಾಗಿ ವಿಂಗಡಣೆಯಾಗಿರಲಿಲ್ಲ ಎಂದು. ಈ ವಿಚಾರದಲ್ಲಿ ಮಾನ್ಯ ಮಂತ್ರಿಗಳು ಸರಿಯಾಗಿ ಪರಿಶೀಲನೆ ಮಾಡಿ ನೋಡಬೇಕೆಂದು ಹೇಳುತ್ತೇನೆ. 1971ನೇ ಜನಗಣತಿ ಪ್ರಕಾರ ಎಂದರೆ 1972ನೇ

ಇಸವಿ ಮೇ ತಿಂಗಳಲ್ಲೇ ಇದನ್ನು ಇಂಡಿಯಾ ಸರ್ಕಾರದವರು ಪ್ರಕಟಣೆ ಮಾಡಿದ್ದಾರೆ. ಇದು ನಮ್ಮ ಲೈಬ್ರರಿಯಲ್ಲಿ ಕೂಡ ಇದೆ, ಇದರಲ್ಲಿ ಎಲ್ಲ ಅಂಕಿ ಅಂಶಗಳ ವಿವರಗಳೂ ಬಂದಿವೆ. ಅಷ್ಟೇ ಅಲ್ಲ, ನಾನು ತಿಳಿದಿರುವಂತೆ ಏಪ್ರಿಲ್ ತಿಂಗಳಿನಲ್ಲೇ ಅಂಶಗಳ ವಿವರಗಳೂ ಬಂದಿವೆ. ಅಷ್ಟೇ ನಮ್ಮ ಸೆಕ್ರೆಟೇರಿಯಟ್‌ನಲ್ಲಿ; ಸಂಬಂಧಪಟ್ಟ ಇಲಾಖೆಯವರು ಎಲ್ಲ ಡಿವಿಜನಲ್ ಕಮಿಷನರ್‌ರವರಿಗೂ ಇವರ ಬಗ್ಗೆ ಕಾಗದ ಬರೆದಿದ್ದಾರೆ. 1971ರ ಜನಗಣತಿಯಂತೆ ಪುನರ್ ವಿಂಗಡಣೆಯಾಗಿರುವಂತೆ ಎಲ್ಲ ಕಡೆಗಳಲ್ಲೂ ಸಕಾಲದಲ್ಲಿ ಚುನಾವಣೆಗಳನ್ನು ಮಾಡುವ ವ್ಯವಸ್ಥೆ ಮಾಡಬೇಕು. ಹೀಗಿರುವಾಗ ಈ ಏಳು ತಿಂಗಳಿನಲ್ಲಿ ಕೆಲಸ ಮಾಡಲು ಸಾಧ್ಯವಿರಲಿಲ್ಲವೇ? ಎಲ್ಲಿ ಕೈ ತಪ್ಪಿದ್ದೀರಿ, ನಿಮ್ಮ ಸೆಕ್ರೆಟೇರಿಯಟಿನವರು ಕೊಟ್ಟಿರುವ ಆದೇಶದಿಂದ ಮತ್ತು ಎಲ್ಲ ಡೆಪ್ಯುಟಿ ಕಮಿಷನರುಗಳಿಗೂ ಕೊಟ್ಟಿರುವ ಆದೇಶದಂತೆ ಚುನಾವಣೆಗಳು ಆಗದೆ ಇರುವ ಪುರಸಭೆಗಳಿಗೆ ಹೊಸ ಚುನಾವಣೆಗಳನ್ನು ಮಾಡಲು ಆಗುತ್ತಿರಲಿಲ್ಲವೇ? ಇದನ್ನು ತಾವು ಪರಿಶೀಲನೆ ಮಾಡಬೇಕು ನಾವು ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇತರಕ್ಕ ಜನ. ನಾಲ್ಕು ವರ್ಷಗಳು ಇರುವ ಅವಧಿ ಪೂರೈಸದೆ ಅಲ್ಲಿ ಚುನಾವಣೆಗಳನ್ನು ನಡೆಸಲು ಅನಿವಾರ್ಯದಿಂದ ಚುನಾವಣೆ ಸಾಧ್ಯವಾಗದೇ ಹೋದರೆ ಕಾನೂನನ್ನು ವಿಸ್ತರಣೆ ಮಾಡುವುದು ಯೋಗ್ಯವಾದುದು, ಇದರ ಬಗ್ಗೆ ಸರಿಯಾಗಿ ವಿವೇಚನೆ ಮಾಡಬೇಕಾಗಿತ್ತು. ಸುಮ್ಮನೆ ಇಲ್ಲಿ ಚುನಾವಣೆ ಮಾಡಲಾಗಲಿಲ್ಲ ಎಂದು ಇದರ ಅಧಿಕಾರವನ್ನು ವಹಿಸಿಕೊಳ್ಳಬೇಕೆಂದು ಇಲ್ಲಿ ತೆಗೆದುಕೊಂಡಿದ್ದಾರೆಯೇ? ಮುಂದೆ ಯಾವ ಯಾವ ಪುರಸಭೆಗಳನ್ನು ವಶಪಡಿಸಿಕೊಂಡು ಅಲ್ಲಿಗೆ ಅಡ್ಮಿನಿಸ್ಟ್ರೇಟರುಗಳನ್ನು ಹಾಕಿ ಅಲ್ಲ ಚುನಾವಣೆಗಳನ್ನು ಯಾವಾಗ ಮಾಡಬೇಕೆಂದಿದ್ದೀರಿ? ನನಗಿರತಕ್ಕ ಅನುಭವ ಪುರಸಭೆಯ ಕಾನೂನಿನಲ್ಲಿ ಇರುವಂತೆ ವಿಚಾರ ಮಾಡಿದರೆ ಇಂತಹ ಅನಾನುಕೂಲಗಳಿಂದಾಗಿ ಆ ಸಮಸ್ಯೆಯನ್ನು ಪರಿಹಾರ ಮಾಡುವುದು ಸಾಧ್ಯವಿಲ್ಲ.

ಎಷ್ಟೇ ಕೇಡು ಕೆಟ್ಟರೂ ಜನರ ಪ್ರತಿನಿಧಿಗಳ ಆಡಳಿತ ಅಧಿಕಾರಿಗಳ ಆಡಳಿತಕ್ಕಿಂತ ಮೇಲು. ಅದರ ಅನುಭವ 1971ನೇ ಇಸವಿಯಲ್ಲಿ ಮೈಸೂರು ರಾಜ್ಯದಲ್ಲಿ ಆಗಿದೆ. ಅದರ ಬಗ್ಗೆ ನಾನು ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ರಾತ್ರಿ ಕಂಡ ಹಳ್ಳದಲ್ಲಿ ಹಗಲು ಹಾಕಿದರು ಎನ್ನುವಂತಾಗಬಾರದು. ಮಾನ್ಯ ಮಂತ್ರಿಗಳು ದಯವಿಟ್ಟು ಗಮನ ಕೊಡಬೇಕು. ನಮಗೆ ತೆಗೆದುಕೊಳ್ಳುವುದಕ್ಕೆ ಅಧಿಕಾರವಿದೆ. ತೆಗೆದುಕೊಂಡ ಮೇಲೆ ಹೇಗೋ ನಡೆಯುತ್ತದೆ, ಹೇಗಾದರೂ ನಡೆದುಕೊಂಡು ಹೋಗಲಿ ಎಂದಾಗಬಾರದು. ಅಲ್ಲಿಯ ಕೂಗು ಇಲ್ಲಿಗೆ ಮುಟ್ಟುವುದಿಲ್ಲ. ನಾನು ಮೈಸೂರು ನಗರದಲ್ಲಿ ನೋಡಿದ್ದೇನೆ, ಮ್ಯಾನ್‌ಹೋಲ್‌ನಲ್ಲಿ ಹೊಳೆ ಹರಿದ ಹಾಗೆ ಹರಿಯುತ್ತಿದ್ದರೂ ಅದಕ್ಕೆ ಹೇಳುವವರಿಲ್ಲ, ಕೇಳುವವರಿಲ್ಲ; ಮೈಸೂರು ನಗರದಲ್ಲಿ ಹಾಸುಹೊಕ್ಕಾಗಿ ಬೆಳೆದಿರತಕ್ಕ ನನಗೆ, ಆ ಪುರಸಭೆಯಲ್ಲಿ ಸಾಕಷ್ಟು ಕಾಲ ಸದಸ್ಯನಾಗಿದ್ದವನಿಗೆ, ಕೆಲವು ವೇಳೆ ಅಧ್ಯಕ್ಷನಾಗಿ ಕೆಲಸ ಮಾಡಿರುವವನಿಗೆ ಆ ನಗರದ ಬೆಳವಣಿಗೆಯಲ್ಲಿ ಸಂಪೂರ್ಣ ಆಸಕ್ತಿ ವಹಿಸುತ್ತಿರತಕ್ಕ ನನಗೆ ಈ ಹೊತ್ತು ಇರತಕ್ಕ ಪರಿಸ್ಥಿತಿಯನ್ನು ನೋಡಿ ನಾಚಿಕೆಯಾಗಿದೆ. ಮೈಸೂರು ನಗರದ ಅಭಿವೃದ್ಧಿ ಬಗ್ಗೆ ನನಗೆ ಹೆಮ್ಮೆ ಇದೆ. ಅದು ಬಹಳ ಚೆನ್ನಾಗಿ ನಡೆದುಕೊಂಡು ಬಂದಿದೆ. ಬಹುಶ: ಸದಸ್ಯರು ಕ್ಷಮಿಸುತ್ತಾರೆ, ಇದನ್ನು ನಾನು ಸ್ಥಳೀಯ ಅಭಿಮಾನದಿಂದ ಹೇಳುತ್ತೇನೆಂದೂ ಯಾರೂ ಭಾವಿಸಬಾರದು. ಮೈಸೂರು ನಗರದ ಆಡಳಿತ ಬಹಳ ಯಶಸ್ವಿಯಾಗಿ ನಡೆದಿದೆ, ಮಾದರಿಯಾಗಿ

ನಡೆದಿದೆ. ಅಂಥ ಪುರಸಭೆಯನ್ನು ವಶಪಡಿಸಿಕೊಂಡಮೇಲೆ ಸುಂದರವಾದ ನಗರದಲ್ಲಿ ಈ ಹೊತ್ತು ಎಲ್ಲ ನಾಗರಿಕ ಸೌಲಭ್ಯಗಳು ಇರತಕ್ಕ ನಗರದಲ್ಲಿ, ಅದರ ವ್ಯವಸ್ಥೆ ಸರಿಯಾಗಿ ನಡೆಯುತ್ತಿಲ್ಲ ಎನ್ನುವುದನ್ನು ನೋಡಿದಾಗ ನನಗೆ ನೋವಾಗುತ್ತದೆ. ಮಾನ್ಯ ಮಂತ್ರಿಗಳು ಇದಕ್ಕೆ ಗಮನ ಕೊಡಬೇಕು. ನೇರವಾದ ಆಡಳಿತದಲ್ಲಿ ಅವರು ನಂಬಿಕೆ ಇಟ್ಟರೆ ಒಳ್ಳೆಯದಲ್ಲ, ಅದಾಗುವುದಿಲ್ಲ. ಯಾವ ಯಾವ ಸಂಸ್ಥೆ ಯಾವ ಕಾರ್ಯ ಮಾಡಬೇಕೋ ಆ ಸಂಸ್ಥೆ ಆ ಕಾರ್ಯ ಮಾಡುವಂತೆ, ಬೇಕಾದ ಸಲಕರಣೆಗಳನ್ನು, ಪ್ರೋತ್ಸಾಹವನ್ನು ಕೊಟ್ಟು ಮಾರ್ಗವನ್ನು ತೋರಿಸಬೇಕಾದ್ದು ಸರ್ಕಾರದ ಕರ್ತವ್ಯವೆಂದು ನಾನು ಅವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಪುರಸಭೆಗಳ ವಿಚಾರದಲ್ಲಿ ಇಷ್ಟು ಹೇಳಿದರೆ ಸಾಕು.

ಈ ಹೊತ್ತಿನ ಬೇಡಿಕೆಯಲ್ಲಿ ಹೌಸಿಂಗ್ ಬೋರ್ಡ್ ವಿಚಾರ ಕೂಡ ಇದೆ. ಹೌಸಿಂಗ್ ಬೋರ್ಡ್ ವಿಚಾರವನ್ನು ಸ್ವಲ್ಪ ಚರ್ಚೆಮಾಡುವುದು ಅತ್ಯಂತ ಅಗತ್ಯವೆಂದು ನನಗನ್ನಿಸುತ್ತದೆ. ನನಗೆ ತಿಳಿದಿರುವಂತೆ ಈ ಸಭೆಯಲ್ಲಿ ಹೌಸಿಂಗ್ ಬೋರ್ಡ್ ಬಗ್ಗೆ ಚರ್ಚೆ ಯಾವತ್ತೂ ಕೂಡ ಅಷ್ಟು ಹೆಚ್ಚಾಗಿ ಆಗಿಲ್ಲ. ನಾನು ಸಚಿವನಾಗಿದ್ದಾಗ ಕೆಲವು ಕಾಲ ಹೌಸಿಂಗ್ ಬೋರ್ಡ್ ನನ್ನ ಅಧೀನದಲ್ಲಿತ್ತು. ಈಗ ಅದಕ್ಕೆ ಹೆಚ್ಚು ಪ್ರಾಮುಖ್ಯತೆ ಬಂದಿದೆ. ಈ ಸಭೆ ಆ ವಿಚಾರದಲ್ಲಿ ಚರ್ಚೆಮಾಡಿ ಅದರ ಸೌಲಭ್ಯಗಳು ಜನರಿಗೆ ಹೆಚ್ಚುವಂತೆ ಸಲಹೆಗಳನ್ನು ಸರ್ಕಾರಕ್ಕೆ ಕೊಡುವುದು ಅಗತ್ಯ. ಈಗ ಈ ಹೌಸಿಂಗ್‌ಬೋರ್ಡಿನಲ್ಲಿ ಆಗಿರತಕ್ಕ ಪರಿಸ್ಥಿತಿಯನ್ನು ನನಗೆ ತಿಳಿದಿರತಕ್ಕ ಪರಿಸ್ಥಿತಿಯನ್ನು ಹೇಳುವುದಕ್ಕೆ ನನಗೆ ಬಹಳ ನೋವಾಗುತ್ತದೆ. ಮಾನ್ಯ ಮಂತ್ರಿಗಳು ಆ ಪರಿಸ್ಥಿತಿಯನ್ನು ಇಲ್ಲಿ ನಾವು ತಿಳಿದುಕೊಂಡಿರುವುದು ತಪ್ಪು, ನಮಗೆ ಬಂದಿರತಕ್ಕ ವರದಿ ಸರಿಯಾದುದಲ್ಲ ಎಂದರೆ ಬಹುಶ: ನನ್ನಷ್ಟು ಸಂತೋಷಪಡುವವರು ಯಾರೂ ಇಲ್ಲ ಎಂದು ಹೇಳಿಕೊಳ್ಳುವುದಕ್ಕೆ ಇಚ್ಛೆಪಡುತ್ತೇನೆ. ಹೌಸಿಂಗ್ ಬೋರ್ಡಿನಲ್ಲಿ 13 ಜನ ಸದಸ್ಯರಿದ್ದಾರೆ. ಅವರೆಲ್ಲರೂ ಸರ್ಕಾರದಿಂದ ನೇಮಕ ಮಾಡಲ್ಪಟ್ಟ ಸದಸ್ಯರು. 13 ಜನರಲ್ಲಿ 5 ಜನ ಅಧಿಕಾರಿ ಸದಸ್ಯರಿದ್ದಾರೆ. ಹೌಸಿಂಗ್ ಬೋರ್ಡ್ ಆಕ್ಟ್ ಪ್ರಕಾರ ಎಂಟು ಜನ ಸದಸ್ಯರಿದ್ದ ಹೊರತು ಅದು ಕಾರ್ಯಕಲಾಪಗಳನ್ನು ನಡೆಸುವುದಕ್ಕಾಗುವುದಿಲ್ಲ. ಹೌಸಿಂಗ್ ಬೋರ್ಡಿನಲ್ಲಿರುವ ಜವಾಬ್ದಾರಿ ಸಾಮಾನ್ಯವಾದುದಲ್ಲ. ಅದು ಬಹಳ ದೊಡ್ಡ ಜವಾಬ್ದಾರಿ. ಎಲ್ಲರಿಗೂ ಕೂಡ ಮನೆ ಹೊಂದಬೇಕು ಎನ್ನುವ ಆಸೆ ಇದೆ. ಸರ್ವಜ್ಞ ಹೇಳಿರುವಂತೆ ಬೆಚ್ಚನೆಯ ಮನೆಯನ್ನು ಪಡೆದುಕೊಳ್ಳುವುದಕ್ಕೆ ಎಲ್ಲರೂ ಕಾತುರರಾಗಿರುತ್ತಾರೆ. ಪೋಲೀಸ್ ಇಲಾಖೆ ವಿಚಾರದಲ್ಲಿ ಈ ಸಭೆಯಲ್ಲಿ ಎಷ್ಟು ಗಮನ ಕೊಡುತ್ತೇವೆಯೋ ಅದರಲ್ಲಿ ಹತ್ತನೇ ಒಂದು ಭಾಗ ಜನೋಪಯುಕ್ತ ಸಂಸ್ಥೆಗಳ ವಿಚಾರದಲ್ಲಿ ಗಮನಕೊಟ್ಟರೆ ಜನರಿಗೆ ಹೆಚ್ಚಿನ ಸೌಲಭ್ಯ ದೊರಕಬಹುದು ಎನ್ನುವ ಆಸೆ ನನಗೆ ಇದೆ. ಹೌಸಿಂಗ್ ಬೋರ್ಡ್ ಸಭೆಗಳಲ್ಲಿ ಎಂಟು ಜನ ಸದಸ್ಯರು ಹಾಜರಿರಬೇಕು. ಅಲ್ಲಿರುವ ಸದಸ್ಯರಲ್ಲಿ ಮೂರು ಜನ ಅಧಿಕಾರಿ ಸದಸ್ಯರು ರಾಜೀನಾಮೆ ಕೊಟ್ಟಿದ್ದಾರೆಂದೂ, ಅದು ಇನ್ನೂ ಒಪ್ಪಿಗೆಯಾಗಿಲ್ಲವೆಂದೂ ಕೇಳಿದ್ದೇನೆ. ಖಾಸಗಿ ಸದಸ್ಯರು ರಾಜೀನಾಮೆ ಕೊಟ್ಟಿದ್ದರೆ ಖಾಸಗಿ ಕಾರ್ಯಗಳಿಗಾಗಿ ರಾಜಿನಾಮೆ ಕೊಟ್ಟರು ಎಂದು ಹೇಳಬಹುದು. ತಿಳಿದುಕೊಳ್ಳುವುದಕ್ಕೆ ಕಾತುರವಾಗಿದೆ. ಏಕೆ ಅವರು ರಾಜಿನಾಮೆ ಕೊಡಬೇಕಾಯಿತು, ಅವರು ಇನ್ನು ಯಾವುದಾದರೂ ಒಂದು ಕಾರಣಕ್ಕಾಗಿ ಬಿಟ್ಟರೇ? ಅವರು ರಾಜಿನಾಮೆ ಯಾವತ್ತು ಕೊಟ್ಟರೋ ಆ ಹೊತ್ತೆ ರಾಜಿನಾಮೆಯನ್ನು ಒಪ್ಪಿಕೊಂಡು ಅವರಿಗೆ ಬದಲು ಸದಸ್ಯರನ್ನು ನೇಮಕ ಮಾಡುವುದಕ್ಕೆ

ಸಾಧ್ಯವಿರಲಿಲ್ಲವೇ? ಡೈರೆಕ್ಟರ್ ಆಫ್ ಟೌನ್ ಪ್ಲಾನಿಂಗ್, ಚೀಫ್ ಇಂಜಿನಿಯರ್ ಸಿ.ಅಂಡ್ ಬಿ., ಡೈರೆಕ್ಟರ್ ಆಫ್ ಇಂಡಸ್ಟ್ರೀಸ್, ಮೂರು ಜನ ರಾಜೀನಾಮೆ ಕೊಟ್ಟಿದ್ದಾರೆ. ಬೆಂಗಳೂರು ನಗರಾಭಿವೃದ್ಧಿ ಮಂಡಲಿಯ ಅಧ್ಯಕ್ಷರು ಮತ್ತು ಲೇಬರ್ ಕಮಿಷನರ್ ಸಭೆಗಳಿಗೆ ಹೋಗುತ್ತಿಲ್ಲ. 13 ಜನ ಸದಸ್ಯರಿರುವ ಕಡೆ ಇವರು ಐದು ಜನ ಹೋಗಲಿಲ್ಲ ಎಂದರೆ 8 ಜನ ಉಳಿದರು. ಒಬ್ಬರು ಖಾಸಗಿ ಸದಸ್ಯರು ರಾಜಿನಾಮೆ ಕೊಟ್ಟಿದ್ದಾರೆ. 7 ಜನ ಆಯಿತು. ಎಂದರೆ ಆ ಸಂಸ್ಥೆ ತನ್ನ ಕಾರ್ಯವನ್ನು ಮಾಡುವುದಕ್ಕಾಗುವುದಿಲ್ಲ. ಅದನ್ನು ಮಾಡಬಾರದು. ಆ ಸಂಸ್ಥೆ ಬೇಕಾಗಿಲ್ಲ. ಅದನ್ನು ನಾವೇ ಬೇರೆ ರೀತಿಯಲ್ಲಿ ಮಾಡಬಹುದು ಎನ್ನುವುದಕ್ಕೆ ಸರ್ಕಾರಕ್ಕೆ ಸ್ವಾತಂತ್ರ್ಯವಿದೆ. ಅದಕ್ಕೆ ಹೌಸಿಂಗ್ ಬೋರ್ಡ್ ಆಕ್ಟ್‌ನಲ್ಲಿ ಅವಕಾಶವಿದೆ. ಆ ಅವಕಾಶವನ್ನು ಉಪಯೋಗಿಸಿಕೊಳ್ಳಬಹುದು. ಡಿಸೊಲ್ಯೂಷನ್ ಆಫ್ ದಿ ಬೋರ್ಡ್ ಸಹ ಮಾಡಬಹುದು. ರದ್ದು ಮಾಡಬೇಕಾದರೆ ಈ ಸಭೆಯ ಮುಂದೆ ಬರಬೇಕಾಗುತ್ತದೆ, ಸರ್ಕಾರದವರೇ ಮಾಡುವುದಕ್ಕಾಗುವುದಿಲ್ಲ. ಪ್ರಬಲವಾದ ಕಾರಣಗಳಿಲ್ಲದೆ ಇದ್ದರೆ ರದ್ದು ಮಾಡುವುದಕ್ಕಾಗುವುದಿಲ್ಲ. ಸೂಪರ್‌ಸೆಷನ್ ಮಾಡುವುದಕ್ಕೆ ಅವಕಾಶವಿದೆ. ಸೂಪರ್‌ಸೆಷನ್ ಮಾಡಬೇಕಾದರೆ ಕಾನೂನಿದೆ, ರೂಲ್ಸ್ ಇದೆ, ಆ ಪ್ರಕಾರ ಮಾಡಬೇಕು. ಮೊದಲನೆಯಾದಾಗಿ ರೂಲ್ ಮೇಕಿಂಗ್ ಪವರ್‌ನಲ್ಲಿ ಈ ಒಂದು ಸಂಸ್ಥೆಯನ್ನು ಸೂಪರ್‌ಸೀಡ್ ಮಾಡಬೇಕಾದರೆ ರೂಲ್ಸ್ ಮಾಡಿಕೊಳ್ಳುವುದಕ್ಕೆ ಅವಕಾಶವಿದೆ. ಅಂಥ ರೂಲ್ಸ್ ಏನಾದರೂ ಮಾಡಿದ್ದಾರೆಯೇ ಎಂದು ನಾನು ಮಾನ್ಯ ಮಂತ್ರಿಗಳನ್ನು ಕೇಳುತ್ತೇನೆ. ಈ ಪುಸ್ತಕದಲ್ಲಿರುವ ರೂಲ್ಸ್‌ನಲ್ಲಿ ಆ ವಿಚಾರವಿಲ್ಲ. ಇನ್ನೇನಾದರೂ ರೂಲ್ಸ್ ಇದ್ದರೆ ಇರಬಹುದು. ರೂಲ್ಸ್ ಫಾರ್ ಸೂಪರ್ ಸೆಷನ್ ಎಂದು ಮಾಡಬೇಕು. ನನ್ನ ಅನುಭವದಲ್ಲಿ ಹೇಳುವುದಾದರೆ, ಆಕ್ಟ್ ಮಾಡುವಾಗ ಎಷ್ಟು ಸುಲಭವಾಗಿ ನಾವು ಮಾಡುತ್ತೇವೆ ರೂಲ್ಸ್ ಮೇಕಿಂಗ್‌ಪವರ್ ಸರ್ಕಾರಕ್ಕೆ ಬಿಟ್ಟು ಕೊಡುತ್ತೇವೆ. ಆದರೆ ಒಂದು ರೂಲ್ಸ್ ಸಹ ಮಾಡುವುದಿಲ್ಲ. ಅನಿವಾರ್ಯ ಬಂದಾಗ ಮಾತ್ರ ರೂಲ್ಸ್ ಮಾಡಿಕೊಳ್ಳುತ್ತೇವೆ. ಈ ಸೂಪರ್‌ಸೀಡ್ ಮಾಡಬೇಕಾದರೆ ಮೊದಲೂ ರೂಲ್ಸ್ ಮಾಡಿಕೊಂಡಿಲ್ಲ ಎಂದು ನಾನು ಹೇಳುತ್ತೇನೆ. ಒಂದು ವೇಳೆ ರೂಲ್ಸ್ ಇದ್ದರೂ ಕೂಡ, ಸೂಪರ್‌ಸೀಡ್ ಮಾಡಬೇಕಾದರೆ ಕಾರಣವೇನಿದೆ? ಅಧಿಕಾರಿಗಳು ಐದು ಜನರಿದ್ದಾರೆ ಮತ್ತೆ ಖಾಸಗಿ ಸದಸ್ಯರು ಸನ್ಮಾನ್ಯರಾದವರು ಎಂಟು ಜನರಿದ್ದಾರೆ. ಸೂಪರ್‌ಸೀಡ್ ಮಾಡುವುದಕ್ಕೆ ಗಹನವಾದ ತಪ್ಪು ಮಾಡಿದ್ದರೆ ಸೂಪರ್‌ಸೀಡ್ ಮಾಡಿ ಕಾರ್ಯಕ್ರಮ ತೆಗೆದುಕೊಳ್ಳಿ. ಆದರೆ ನನಗೆ ತಿಳಿಬಮಟ್ಟಿಗೆ ಇಂದು ಅದಕ್ಕೆ ಕೊಟ್ಟಿರತಕ್ಕ ಸೂಪರ್‌ಸೆಷನ್ ನೋಟೀಸ್ ನೋಡಿದರೆ ಮಸೀದಿಯನ್ನು ಮೇಲೆ ಕೆಳವಿಕೊಂಡಂತೆ, ಮರ ಕಡಿದು ಮೇಲೆ ಕೆಡವಿಕೊಂಡ ಹಾಗೆ ಆಗಿದೆ. ಸೂಪರ್‌ಸೀಡ್ ಮಾಡುವುದಕ್ಕೆ ಅಧಿಕಾರವಿಲ್ಲ ಎಂದು ನಾನು ಹೇಳುತ್ತಿಲ್ಲ. ಅಧಿಕಾರ ಚಲಾಯಿಸುವುದಕ್ಕೂ ಮಾರ್ಗವಿದೆ. ನಮ್ಮಲ್ಲಿ ಹರಿತವಾದ ಕತ್ತಿ ಇಟ್ಟುಕೊಂಡಿರುತ್ತೇವೆ. ಆದರೆ ಬಳಸಬೇಕಾದರೆ ಯಾವುದಕ್ಕೆ ಬಳಸಬೇಕು ಎನ್ನುವುದನ್ನು ಸ್ವಲ್ಪ ತಿಳಿದುಕೊಳ್ಳಬೇಕು. ನಾನು ಒಂದು ಪ್ರಶ್ನೆ ಕೇಳಿದಾಗ ಸಾರ್ವಜನಿಕ ಹಿತದೃಷ್ಟಿಯಿಂದ ಕೊಡುವುದಕ್ಕಾಗುವುದಿಲ್ಲವೆಂದು ಹೇಳಿದರು. ಹೇಗೋ ಏನೋ ನೋಟೀಸ್ ಕಾಪಿ ಕೈಗೆ ಬಿದ್ದಿದೆ. ಅದರ ಮೂಲ ಹೇಳುವುದಕ್ಕೆ ಅವಕಾಶವಿಲ್ಲ. ಇದು ಅನೇಕ ಸದಸ್ಯರ ಕೈಯಲ್ಲಿದೆ ಎಂದು ನಾನು ತಿಳಿದಿದ್ದೇನೆ. ಅದನ್ನು ಪ್ರಯತ್ನ ಮಾಡಿ ಪಡೆದಿದ್ದಲ್ಲ.

ಇದೇನು ಮಂತ್ರದಲ್ಲಿ ಮಾವಿನಕಾಯಿ ಉದುರಿಸಿದಂತೆ ಆಗುತ್ತದೆಯೆ?

5 per cent of the houses should be allotted to the nomadic, semi-nomadic and denotified tribes.

ಇದರಲ್ಲಿ ಎಷ್ಟು ಜನ ತಮ್ಮ ಜಾತಿ, ಕುಲ ಗೋತ್ರ ಇವುಗಳನ್ನು ಹೇಳುತ್ತಿದ್ದಾರೆ? ಎಷ್ಟೋ ಜನ ಅವರ ಜಾತಿ ಪಂಗಡಗಳನ್ನೇ ಹೇಳುವುದಿಲ್ಲ. ಅರ್ಜಿಗಳನ್ನು ಹಾಕುವಾಗ ಅದರಲ್ಲಿ ಕೆಲವರು 'ಹಿಂದೂ' ಇಲ್ಲವೇ 'ಮುಸ್ಲಿಂ' ಎಂದು ಬರೆಯುತ್ತಾರೆ. ನಿಮ್ಮ ಮನಸ್ಸಿನಲ್ಲಿ ಏನಿತ್ತೋ ಅದು ಈಗ ಹೊರಕ್ಕೆ ಬಂತು. ನಿಮ್ಮ ಲಾ ಏನಿದೆ? ಮತ್ತು ಯಾವ ಕಾನೂನಿನೊಳಗೆ ಜಾತಿಗಳನ್ನು ಹೇಳಬೇಕು ಎಂದು ಕಡ್ಡಾಯ ಮಾಡಿದ್ದೀರಿ? ಕಾನೂನು ಯಾವುದೂ ಇಲ್ಲದೇ ಇರುವಾಗ ನಾವು 'ಇಂಡಿಯನ್' ಎಂದು ಬರಿಯುತ್ತೇವೆ. ಹಿಂದು ಎಂದೂ ಕೂಡ ಬರೆಯುವುದಿಲ್ಲ. ಜಾತಿ ಪಂಗಡಗಳನ್ನು ನಿರ್ಮೂಲ ಮಾಡಬೇಕು ಎನ್ನುವುದನ್ನು ಒಪ್ಪಬಹುದು? 7per cent for minorities such as Muslims. Jains and Christians. ಇದು ಸಾಕಷ್ಟು ನಮ್ಮ ದೇಶಕ್ಕೆ ಹಾನಿಮಾಡಿದೆ. ಈ ರೀತಿ ಇರುವ ಕಾಲದಲ್ಲಿ ಇದನ್ನು ಅನೂರ್ಜಿತ ಮಾಡಲು ಯಾವ ಹೊಸ ನೀತಿಯನ್ನು ಅಲಾಟ್‌ಮೆಂಟ್ ಮಾಡುವಾಗ ಅನುಸರಿಸಬೇಕೆಂದಿದ್ದೀರಿ?

**Sri. B. BASAVALINGAPPA:-**

Sri I am glad Sri Puttaswamy has raised this issue. It is one thing to preach and another thing to practice. We have been practising the caste system without mentioning it all these days though we openly say we do not observe the caste system. All these 25 years after independence we have seen the working of the administration but the question is, how we have practised it and how we have reacted to it we are wedded to eradicate this caste system in the country but the question is whether we have taken any steps to distribute justice.

ಇದರಲ್ಲಿ ನೋಟಿಫೈಡ್ ಟ್ರೈಬ್ಸ್ ಹಾಗೂ ಷೆಡ್ಯೂಲು ಕ್ಯಾಸ್ಟಿನವರಿಗೆ ಹಾಗೂ ಇತರರಿಗೆ ಸರ್ಟಿಫಿಕೇಟು ಕೊಡಬೇಕೆಂದು ನಮ್ಮಲ್ಲಿ ಬರುತ್ತಾರೆ. ಕೆಲವರು ನಮ್ಮನ್ನು ಬೆಸ್ತರು ಎಂದು ಬರೆದು ಕೊಡಿ ಎನ್ನುತ್ತಾರೆ, ಗೊಲ್ಲರು ಎಂದು ಬರೆದುಕೊಡಿ ಎನ್ನುತ್ತಾರೆ. ಡೀನೋಟಿಫೈಡ್ ಎಂದು ಇರುವುದರಲ್ಲಿ ಇವರನ್ನೂ ಏಕೆ ಸೇರಿಸಬಾರದು? ಇದರಲ್ಲಿ ಯಾವ ರೀತಿ ದುರುಪಯೋಗವಾಗುತ್ತದೆ? ಶೇಕಡಾ ಐದರಷ್ಟು ಯಾವ ರೀತಿ ಹಂಚಿಕೆಮಾಡುತ್ತೀರಿ? ಇದರ ವಿವರಣೆ ಕೊಡಬೇಕು. ಷೆಡ್ಯೂಲು ಕ್ಯಾಸ್ಟು, ಟ್ರೈಬ್ಸ್ ಎಂದು ಇರುವಂತೆ ಇನ್ನು ಕೆಲವರು ಮೈನಾರಿಟಿ ಪಂಗಡಗಳಿವೆ, ಇವರು ಶೇಕಡ ಏಳರಷ್ಟು ಇರಬಹುದು. ಇವರಲ್ಲಿ ಜೈನರು, ಕ್ರಿಶ್ಚಿಯನ್ನರು ಹಾಗೂ ಇತರ ಮೈನಾರಿಟಿ ಪಂಗಡಗಳವರಿಗೆ ಸೌಲಭ್ಯಗಳನ್ನು

ಒದಗಿಸಿಕೊಡಬೇಕೆಂದು ಕೇಳುತ್ತಿದ್ದಾರೆ? ಮುಸ್ಲಿಂಸ್ ಹಾಗೂ ಕ್ರಿಶ್ಚಿಯನ್‌ಗಳು ಎನ್ನುವವರಿಗೆ ವಿನಾಯಿತಿ ಕೊಡಬೇಕೆಂದು ಮಾಡುವಾಗ ಇದರಲ್ಲಿ ಯಾವ ರೀತಿ ಡಿಸ್‌ಕ್ರಿಮಿನೇಷನ್ ಮಾಡುತ್ತೀರಿ? For example, take the Mulims, the Christians, the Parsees and other minorities. Have we given them? How many are given? we have constructed thousands of houses but how many of them are allotted to the Muslims, to the Scheduled Castes and to those who have been pushed to the wall? Taking into consideration all these things which we have done for the last 25 years, I have issued orders fixing priority. what is wrong in doing so?

ಶ್ರೀ ಕೆ. ಪುಟ್ಟಸ್ವಾಮಿ:-

ತಾವು ತಪ್ಪು ಎಂದು ಒಪ್ಪಿಕೊಳ್ಳುತ್ತೀರಿ ಎಂಬ ಒಂದು ಆಶೆಯಿಂದ ನಾನು ಇದನ್ನು ಹೇಳುತ್ತಿಲ್ಲ. ನೀವು ಮಾಡುತ್ತಿರುವುದನ್ನು ಸಾಬೀತು ಮಾಡಿಕೊಳ್ಳುವುದಕ್ಕೆ ಅವಕಾಶವಿದೆ. ಇದುವರೆಗೆ ಹಂಚಿಕೆ ಮಾಡಿರುವ ಮನೆಗಳು ಎನಿವೆ, ಅವುಗಳ ಪೈಕಿ ಮುಸ್ಲಿಮರಿಗೆ ಎಷ್ಟು ಕೊಟ್ಟಿದ್ದೀರಿ, ಕ್ರಿಶ್ಚಿಯನ್ನರಿಗೆ ಎಷ್ಟು ಕೊಟ್ಟಿದ್ದೀರಿ, ಇತರೇ ಬೇರೆ ಬೇರೆ ಪಂಗಡಗಳವರಿಗೆ ಎಷ್ಟೆಷ್ಟು ಕೊಟ್ಟಿದ್ದೀರಿ ಅದನ್ನು ಡಾಟಾ ಮೇಲೆ ಮಾಡಿದ್ದೀರಾ ಅಥವಾ ನಿಮ್ಮ ಮನಸ್ಸಿನಲ್ಲಿ ಏನೋ ಇದೆ ಎಂದು ಮಾಡಿದ್ದೀರಾ?

**Sri B. BASAVALINGAPPA:-**

Please put a question and I will answer.?

ಶ್ರೀ ಕೆ. ಪುಟ್ಟಸ್ವಾಮಿ:-

ಈ ಒಂದು ಮೈನಾರಿಟಿ ಕೋಮುಗಳಾದ ಮುಸ್ಲಿಮರು, ಕ್ರಿಶ್ಚಿಯನ್ನರು, ಜೈನರು ಮುಂತಾದ ಪಂಗಡಗಳವರಿಗೆ ರಾಜ್ಯಾಂಗದಲ್ಲಿ ಕೊಡದಿರುವ ರಿಜರ್‌ವೇಷನ್‌ಗಳನ್ನು ನೀವು ಕೊಡುವುದಕ್ಕೆ ಪ್ರಯತ್ನ ಮಾಡಿದ್ದೀರಿ.

ಶ್ರೀ ಕಾಗೋಡು ತಿಮ್ಮಪ್ಪ:-

ಈಗ ನಾವು ಯಾವುದೇ ನಗರಕ್ಕೆ ಹೋದರೂ ಬ್ರಾಹ್ಮಣರ ಕೇರಿ, ಲಿಂಗಾಯಿತರ ಕೇರಿ, ಮುಸ್ಲಿಮರ ಕೇರಿ, ಕ್ರಿಶ್ಚಿಯನರ ಕೇರಿ ಎಂಬುದಾಗಿ ಇರುತ್ತವೆ. ಜಾತೀಯತೆ ಹೋಗಬೇಕೆಂದು ನಾವೆಲ್ಲರೂ ಹೇಳುತ್ತಿರುವಾಗ, ಮತ್ತು ಆ ಬಗ್ಗೆ ಒಂದು ನಿರ್ದಿಷ್ಟವಾದ ಕಾರ್ಯಕ್ರಮ ಹಾಕಿಕೊಂಡು ಎಲ್ಲ ಜಾತಿಯವರು ಒಂದೇ ಕಡೆ ವಾಸ ಮಾಡುವ ದೃಷ್ಟಿಯಿಂದ ಒಂದು ಕಾರ್ಯಕ್ರಮ ಹಾಕಿಕೊಳ್ಳುವುದಾದರೆ ಅದಕ್ಕೆ ಯಾವ ರೂಪದ ಕಾರ್ಯಕ್ರಮ ಇರಬೇಕೆಂದು ಮಾನ್ಯ ಪುಟ್ಟಸ್ವಾಮಿಯವರು ಹೇಳಿದರೆ ಒಳ್ಳೆಯದು.

ಶ್ರೀ ಕೆ. ಪುಟ್ಟಸ್ವಾಮಿ:-

ಆ ಕೇರಿ, ಈ ಕೇರಿ ಎಂದು ಹೇಳುವುದು 19ನೇ ಶತಮಾನಕ್ಕೆ ಸೇರಿದ್ದು. ಈಗ ಎಲ್ಲ ಕಡೆಗಳಲ್ಲಿಯೂ ಬಡಾವಣೆಗಳಾಗುತ್ತಿರುವುದರಿಂದ ಯಾವ ಕೇರಿಗಳೂ ಇಲ್ಲ. ಈ ಬಡಾವಣೆಗಳಿಗೆ

ಆರ್ಥಿಕ ಮುಗ್ಗಟ್ಟಿನಿಂದ ಬಡವರಿಗೆ ಹೋಗುವುದಕ್ಕೆ ಆಗದಿರಬಹುದು; ಆದರೆ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರುವವರು ಬಡಾವಣೆಗಳಲ್ಲಿ ಮನೆಗಳನ್ನು ತೆಗೆದುಕೊಂಡು ಅಲ್ಲಿಯೇ ಜೀವನ ಮಾಡುತ್ತಿದ್ದಾರೆ. ಆ ಕೇರಿ. ಈ ಕೇರಿ ಎಂಬ ಪ್ರಸ್ತಾಪ ಈಗ ಆಗುತ್ತಿಲ್ಲ.

ಶ್ರೀ **ಕಾಗೋಡು ತಿಮ್ಮಪ್ಪ.-**

ಒಬ್ಬ ಲಿಂಗಾಯಿತ ಎಷ್ಟೇ ದೊಡ್ಡ ಮನುಷ್ಯನಾಗಿದ್ದರೂ ಸಹ ಅವರ ಜಾತಿಯವರಿರುವ ಕಡೆಯಲ್ಲಿಯೇ ವಾಸ ಮಾಡುವುದಕ್ಕೆ ಇಷ್ಟಪಡುತ್ತಾನೆ. ಇಂದು ಸಹ ಈ ಒಂದು ವಾಸ್ತವಿಕವಾದಂಥ ಪರಿಸ್ಥಿತಿ ಇದೆ.

ಶ್ರೀ **ಕೆ. ಪುಟ್ಟಸ್ವಾಮಿ.-**

ಅದು ಹಳೆಯ ಊರುಗಳಲ್ಲಿ ಇರಬಹುದು. ಈ ದಿನ ಹೊಸ ಬಡಾವಣೆಗಳಲ್ಲಿ ಆ ರೀತಿ ಇಲ್ಲ.

ಶ್ರೀ **ಎಸ್. ಹಮೀದ್ ಷಾ.-**

ಮುಸ್ಲೀಮ್ ಜನಾಂಗಕ್ಕೆ ಮನೆಗಳನ್ನು ಕೊಟ್ಟಿದ್ದು ತಪ್ಪು ಎಂದು ಮಾನ್ಯ ಸದಸ್ಯರು ಹೇಳುತ್ತಾರೆಯೇ?

ಶ್ರೀ. **ಕೆ. ಪುಟ್ಟಸ್ವಾಮಿ.-**

ಹೌಸಿಂಗ್ ಬೋರ್ಡಿನಲ್ಲಿ ಈ ಜನಾಂಗದ ಹಿತ ಕಾಪಾಡಲು 4 ಜನ ಮುಸ್ಲೀಮರನ್ನು, 4 ಜನ ಕ್ರಿಶ್ಚಿಯನರನ್ನು ಹಾಕಲಿ. ಅದಕ್ಕೆ ನನ್ನ ಆಕ್ಷೇಪ ಇಲ್ಲ. ಆದರೆ ಮನೆಗಳನ್ನು ಹಂಚುವಾಗ ಈ ರೀತಿ ಜಾತೀವಾರು ವಿಂಗಡಣೆ ಮಾಡುವ ಆವಶ್ಯಕತೆ ಇಲ್ಲ. ಆವಶ್ಯಕತೆ ಇಲ್ಲದಿರುವ ಕಡೆಗಳಲ್ಲಿ ಕಂಪಾರ್ಟ್‌ಮೆಂಟ್‌ಗಳನ್ನು ಜಾಸ್ತಿ ಮಾಡುತ್ತಿದ್ದೀರಿ. ಇದರಿಂದ ದೇಶದಲ್ಲಿ ಉತ್ತಮವಾದ ಪರಿಸ್ಥಿತಿ ಬರುವುದಿಲ್ಲ. ಮತ್ತು ಕಾನೂನು ಪ್ರಕಾರ ಯಾವುದನ್ನು ಮಾಡುವುದಕ್ಕೆ ಸಾಧ್ಯವಿಲ್ಲವೋ ಅದನ್ನು ಮಾಡುವುದಕ್ಕೆ ಹೊರಟಿದ್ದೀರಿ. ಆರ್ಥಿಕ ಪರಿಸ್ಥಿತಿಯನ್ನು ಗಮನಕ್ಕೆ ತೆಗೆದುಕೊಂಡು ಆಯಾ ವರ್ಗಗಳವರಿಗೆ ಹಂಚಿಕೆ ಮಾಡುವುದಾದರೆ ಅದಕ್ಕೆ ನಮ್ಮ ಆಕ್ಷೇಪವಿಲ್ಲ. ಅದನ್ನು ಬಿಟ್ಟು ಜಾತಿ, ಗುಂಪು, ಪಂಗಡ, ಮತದ ಮೇಲೆ ಹಂಚಿಕೆ ಮಾಡಿದರೆ ಅದು ಕಾನೂನು ಪ್ರಕಾರ ಸಿಂಧುವಾಗುವುದಿಲ್ಲ. ಆದಕಾರಣ ಇದನ್ನು ಪುನರ್ ಪರಿಶೀಲನೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ. **ಎಂ. ಎಚ್. ಜಯಪ್ರಕಾಶ್ ನಾರಾಯಣ.-**

ಹರಿಜನರೆಲ್ಲಾ ಒಂದೇ ಕಡೆ ಇರಬೇಕು, ಬೇರೆಯವರ ಜೊತೆಯಲ್ಲಿ ವಾಸ ಮಾಡಬಾರದೆಂದು ತಮ್ಮ ಅಭಿಪ್ರಾಯವೇ?

ಶ್ರೀ. ಕೆ. ಪುಟ್ಟಸ್ವಾಮಿ.—

ಶ್ರೀಮಾನ್ ಜಯಪ್ರಕಾಶ್‌ನಾರಾಯಣ್ ಅವರ ಸಮಾಧಾನಕ್ಕೆ ಒಂದು ವಿಚಾರವನ್ನು ಹೇಳುವುದಕ್ಕೆ ಅಪೇಕ್ಷೆ ಮಾಡುತ್ತೇನೆ. ಕೇರಿಗಳನ್ನು ಸ್ಥಾಪನೆ ಮಾಡಿ ಅಲ್ಲಿ ಒಂದೊಂದು ಜಾತಿಯ ಜನರು ಇರಬೇಕೆಂದರೆ ಅದನ್ನು ನಾನು ಒಪ್ಪುವವನಲ್ಲ. ಒಂದು ಬಡಾವಣೆಯಲ್ಲಿ ಮನೆಗಳನ್ನು ಕಟ್ಟಿದ ಮೇಲೆ ಅವುಗಳು ಎಲ್ಲ ಜಾತಿಯವರಿಗೆ ಸಿಗಬೇಕು; ಅದಕ್ಕೆ ಸರಿಯಾದ ವ್ಯವಸ್ಥೆ ಮಾಡಬೇಕು ಎಂಬುದನ್ನು ಸಹ ಒಪ್ಪುತ್ತೇನೆ. ಆದರೆ ಆ ಬಗ್ಗೆ ಈ ರೀತಿ ಜಾತಿವಾರು ಹಂಚಿಕೆ ಮಾಡುತ್ತೇವೆಂದು ಕಾನೂನು ಮಾಡಿದರೆ ರಾಜ್ಯಾಂಗದ ಪ್ರಕಾರ ಅದು ಸಿಂಧುವಾಗುವುದಿಲ್ಲ. ಅದಕ್ಕಾಗಿ ಆ ರೀತಿ ಮಾಡಬೇಡಿ ಎಂದು ನಾನು ಹೇಳುತ್ತಿರುವುದು. ಈ ವಿಚಾರದಲ್ಲಿ ಮಾನ್ಯ ಸದಸ್ಯರು ಎಷ್ಟು ಪ್ರಗತಿಪರವಾದ ಅಭಿಪ್ರಾಯವನ್ನು ಇಟ್ಟುಕೊಂಡಿದ್ದಾರೋ ಆ ಅಭಿಪ್ರಾಯಗಳಿಗೆ ಕಿಂಚಿತ್ತೂ ಕೂಡ ಹಿಂದುಳಿದ ಅಭಿಪ್ರಾಯವನ್ನು ನಾನು ಹೊಂದಿಲ್ಲ. ಮಾನ್ಯ ಸದಸ್ಯರಿಗೆ ನನ್ನ ರಾಜಕೀಯ ಜೀವನ ಇನ್ನೂ ತಿಳಿದಿಲ್ಲ, ಇವೊತ್ತಿಗೂ ಕೂಡ ನಾನು ಕಾರ್ಯ ಮಾಡುತ್ತಿರುವುದು ಕಾರ್ಮಿಕರ ಮತ್ತು ಕೆಳದರ್ಜೆ ಜನರ ಹತ್ತಿರ. ಮೇಲೆ ಕುಳಿತುಕೊಂಡು ಮೇಲ್ದರ್ಜೆ ಜನರ ಹತ್ತಿರ ವ್ಯವಹಾರ ಮಾಡುತ್ತಿಲ್ಲ ಮತ್ತು ಕೆಳದರ್ಜೆ ಜನರಿಗೆ ಏನು ತೊಂದರೆ ಇದೆ ಎಂಬುದನ್ನು ತಿಳಿಯದಂಥ ಮನುಷ್ಯ ನಾನಲ್ಲ, ಆದರೆ ಇಂತಹ ಕಾನೂನು ಮಾಡುವುದು ಸರಿಯಲ್ಲ. ಇಲ್ಲಿ ಬ್ಯ-ಔಟ್ ರೈಟ್ ಸೇಲ್ ಎಂದು ಮಾಡಿದ್ದೀರಿ.

> "recovering the cash without postponing, by hire purchase, by allotting to scheduled castes, by sanctioning corner buildings by selling to middle income group"

ಎಂದು ಮಾಡಿದ್ದೀರಿ. ಇದು ಯಾವ ಕಾರಣಕ್ಕಾಗಿ? ಮಧ್ಯಮವರ್ಗದ ಜನರಿಗೆ ಮನೆಗಳನ್ನು ಹರಾಜು ಮೂಲಕ ವಿತರಣೆ ಮಾಡಿ ಅದರಿಂದ ಬಂದಂಥ ಹಣವನ್ನು ಬೇರೆ ಕಡೆ ಮತ್ತೆ ಇನ್‌ವೆಸ್ಟ್ ಮಾಡುತ್ತೇವೆಂದು ಹೇಳಿದ್ದೀರಿ. ಇಂದು ನಾವು ಹೌಸಿಂಗ್ ಬೋರ್ಡ್‌ನ್ನು ಯಾವ ಕಾರಣಕ್ಕಾಗಿ ಸ್ಥಾಪನೆ ಮಾಡಿದ್ದೇವೆಂಬುದನ್ನು ನೋಡಬೇಕಾಗಿದೆ. ಮಧ್ಯಮ ವರ್ಗದ ಜನರಿಗೆ ಮನೆಗಳನ್ನು ಹರಾಜು ಮೂಲಕ ವಿತರಣೆ ಮಾಡುವುದು ಸರಿಯಲ್ಲ. ಏಕೆಂದರೆ ಅವರೇನೂ ಶ್ರೀಮಂತ ವರ್ಗವಲ್ಲ. ಇನ್ನೊಬ್ಬರಿಗೆ ಸಬ್ಸಿಡೈಸ್‌ಮಾಡುವ ಶಕ್ತಿ ಅವರಿಗೆ ಇರುವುದಿಲ್ಲ. ಅವರ ಆವಶ್ಯಕತೆಗೆ ಒಂದು ಮನೆಯನ್ನು ಕೊಂಡು ಕೊಳ್ಳುವುದೂ ಸಹ ಕಷ್ಟವಾಗಿರುತ್ತದೆ. ಅಂಥಾದ್ದರಲ್ಲಿ ಇವರುಗಳಿಗೆ ಮನೆಗಳನ್ನು ಹರಾಜು ಮೂಲಕ ವಿತರಣೆ ಮಾಡಿ ಅದರಿಂದ ಬಂದಂಥ ಹಣದಿಂದ ಇನ್ನೂ ಹತ್ತು ಮನೆಗಳನ್ನು ಕಟ್ಟುವುದಕ್ಕೆ ಹೋಗಬೇಡಿ. ವಲ್ನರಬಲ್ ಸೆಕ್ಷನ್‌ಗೆ ಈ ಮೂಲಕ ಸಬ್ಸಿಡೈಜ್‌ಮಾಡುವುದು ಸರಿಯಲ್ಲ. ಸಬ್ಸಿಡೈಜ್ ಮಾಡುವುದಕ್ಕೆ ಸರ್ಕಾರದ ಖಜಾನೆ ಇದೆ. ಆದ್ದರಿಂದ ಮಾಡಿಯೆಂದು ಹೇಳುತ್ತಾ ಈ ವಿಚಾರವನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲನೆ ಮಾಡಿ ನಾನು ಹೇಳಿದ್ದರಲ್ಲಿ ಒಳ್ಳೆಯದಿದ್ದರೆ ಒಪ್ಪಿಕೊಳ್ಳಿ; ಒಳ್ಳೆಯದಿಲ್ಲದಿದ್ದರೆ ಒಪ್ಪಿಕೊಳ್ಳಬೇಡಿ.

ಅದಲ್ಲದೆ ಇಲ್ಲಿ ಒಂದು ಮಾತು ಹೇಳಬಯಸುತ್ತೇನೆ. ಅವರೂ ಹೇಳುವುದೂ ಸರಿಯಾಗುವುದಿಲ್ಲ. ಜನಸಂಖ್ಯೆಯನ್ನು ಪರ್ ಕ್ಯಾಪಿಟಾ ಮಾಡಬೇಕಾಗುತ್ತದೆ. ಹಾಗೆ ಮಾಡುವಾಗ ನಮ್ಮ ದೇಶದ ಬಗ್ಗೆ ತುಲನೆಯನ್ನು ಮಾಡಿದ್ದಾರೆಯೋ? ನಮಗೆ ನ್ಯಾಯವಾಗಿ ಸಲ್ಲಬೇಕಾದ ಹಣ ಕೊಟ್ಟಿಲ್ಲವೇ? ಮತ್ತು ಕೇಂದ್ರ ಸರಕಾರದಿಂದ ನಮಗೆ ಬರತಕ್ಕ ಹಣ ಕಾನೂನು ರೀತಿಯಾಗಿ ರಾಜ್ಯಾಂಗ ಬದ್ಧವಾಗಿಯೇ ಇರಬೇಕು. ಆಯೋಗ ಕೆಲಸ ಮಾಡುವಾಗ ಕೆಲವು ತತ್ವಗಳನ್ನು ಅನುಸರಿಸಿ ಮಾಡಬೇಕಾಗುತ್ತದೆ. ಈ ಆಯೋಗದವರು ಕೇಂದ್ರ ಸರಕಾರಕ್ಕೆ ಏನು ಶಿಫಾರಸ್ಸುಗಳನ್ನು ಮಾಡುತ್ತಾರೋ ಅದನ್ನು ಕೇಂದ್ರ ಸರಕಾರದವರು ಒಪ್ಪಿಕೊಳ್ಳುತ್ತಾರೆ. ಹಾಗೆ ಕೇಂದ್ರ ಸರಕಾರ ಐದನೇ ಹಾಗೂ ಆರನೇ ಹಣಕಾಸಿನ ಆಯೋಗದ ಶಿಫಾರಸ್ಸುಗಳನ್ನು ಒಪ್ಪಿಕೊಂಡಿದ್ದಾರೆ. ಇದರಲ್ಲಿ ಯಾವ ರೀತಿಯ ತಪ್ಪು ಕಡಿಮೆಯನ್ನೂ ಮಾಡಿಲ್ಲ. ಇದಕ್ಕಾಗಿ ಕೇಂದ್ರ ಸರಕಾರ ಮಲತಾಯಿ ಧೋರಣೆ ಅನುಸರಿಸುತ್ತದೆ ಎಂದು ಹೇಳುವುದರಲ್ಲಿ ಯಾವ ನ್ಯಾಯವೂ ಇಲ್ಲ. ಇದನ್ನು ನಾವು ತಿಳಿದುಕೊಳ್ಳಬೇಕು. ಕೇಂದ್ರ ಸರಕಾರ ನಮಗೇನೂ ದೂರವಾದ ಸರಕಾರವಲ್ಲ. ರಾಜ್ಯಾಂಗದಲ್ಲಿ ಹೇಳಿರುವಂತೆ ಶಾಸನಬದ್ಧವಾಗಿ ಜನರಿಂದ ಚುನಾಯಿಸಲ್ಪಟ್ಟ ಆಡಳಿತವೇ ಅಲ್ಲೂ ಇರುವುದು. ಜನರು ಎಲ್ಲಾ ರಾಜ್ಯಗಳಲ್ಲೂ ತೆರಿಗೆ ಕೊಡುತ್ತಿರುವಂತೆ ಇಲ್ಲೂ ಕೊಡುತ್ತಿದ್ದಾರೆ. ನಮಗೆ ಸಮಾನವಾಗಿ ಹಂಚಿಕೆಯಾಗಿ ಒಂದು ಕಡೆ ಹತ್ತು ಇಪ್ಪತ್ತು ಕೋಟಿ ಹೆಚ್ಚು ಬರಬಹುದು. ಇನ್ನು ಒಂದು ಕಡೆ ಸ್ವಲ್ಪ ಕಡಿಮೆ ಬರಬಹುದು. ಬೇರೆ ಸರಕಾರಗಳ ಬಗ್ಗೆ ಯಾವ ರೀತಿ ಮಮತೆ ಇರುತ್ತದೋ ಅದರಂತೆ ನಮ್ಮ ರಾಜ್ಯದ ಮೇಲೂ ಕೇಂದ್ರ ಸರಕಾರದ ಮಮತೆ ಇದೆ. ಹಾಗೆ ಮಲತಾಯಿ ಧೋರಣೆ ಇಲ್ಲಿ ಅನುಸರಿಸುತ್ತಿದ್ದಾರೆ ಎನ್ನತಕ್ಕದ್ದು ಇಲ್ಲಿ ನ್ಯಾಯವಲ್ಲ. ಕೇಂದ್ರ ಸರಕಾರದಿಂದ ನಮ್ಮ ಜನರ ಮೂಲಕ ವಸೂಲಾಗುವ ತೆರಿಗೆಯ ಪ್ರಮಾಣದಲ್ಲಿ ನಮಗೆ ನ್ಯಾಯವಾಗಿ ಬರಬೇಕಾದ ಪ್ರಮಾಣ ಬರುತ್ತಿಲ್ಲ ಎಂದು ಪದೇ ಪದೇ ಹೇಳುತ್ತಾ ಹೋದರೆ ಇದರಿಂದ ನಮಗೆ ಬೇರೆ ಏನು ಪರಿಣಾಮವಾಗುತ್ತದೆ? ಇದರಲ್ಲಿ ಏನೋ ಒಂದು ರೀತಿಯ ಅನುಮಾನ ಬರಬಹುದು. ಇದರಿಂದ ಯಾವ ಪ್ರಯೋಜನವನ್ನು ಸಾಧಿಸಿದಂತೆ ಆಗುವುದಿಲ್ಲ.

ಅಧ್ಯಕ್ಷರೇ, ನಮ್ಮಲ್ಲಿ ಈಗ ಯೋಜನೆಗಳು, ನಮ್ಮ ಅಭಿವೃದ್ಧಿ ಕಾರ್ಯಗಳು ಎಲ್ಲಾ [illegible] ನಡೆಯತಕ್ಕದ್ದು ಇದೆ. ಅದು ಪ್ರತಿಯೊಂದೂ ಕೂಡ ಯೋಜನೆಯಲ್ಲಿ [illegible] ವಾರ್ಷಿಕ ಯೋಜನೆಯಲ್ಲಿ ಹೇಗೆ ಗುರಿ ಮುಟ್ಟಬೇಕು ಎನ್ನುವುದು [illegible] ಸರ್ಕಾರದವರು ಪಂಚವಾರ್ಷಿಕ ಯೋಜನೆಯಲ್ಲಿ [illegible] ಕೊಡುತ್ತೇವೆ ಎಂಬುದನ್ನು ಹೇಳುತ್ತಾರೆ. ಅದೂ ಕೂಡ ಕೆಲವು ತತ್ವಗಳಿಗೆ ಒಳಪಟ್ಟು ಅವರು ನಮಗೆ ಹಣ ಸಹಾಯ ಮಾಡುತ್ತಾರೆ. 4ನೇ ಪಂಚವಾರ್ಷಿಕ ಯೋಜನೆಯಲ್ಲಿ ಗಾಡ್ಗಿಲ್ ಅವರ ರೀತಿಯನ್ನು ಅನುಸರಿಸಿ ನಮ್ಮ ರಾಜ್ಯಕ್ಕೆ ಏನು ಕೊಡಬೇಕು ಎಂಬುದು ನಿರ್ಧಾರವಾಗಿದೆ. ಅದರ ಪ್ರಕಾರ ಅವರು ಕೊಟ್ಟುಕೊಂಡು ಬಂದಿದ್ದಾರೆ. 5ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಅನುಸರಿಸಬೇಕಾದ ತತ್ವ ನಿರ್ಧಾರವಾಗಿಲ್ಲ. 4ನೇ ಪಂಚವಾರ್ಷಿಕ ಯೋಜನೆಯ 5ನೇ ವರ್ಷದಲ್ಲಿ ಎಂದರೆ ಕೊನೆಯ ವರ್ಷದಲ್ಲಿ ಎಷ್ಟು ಹಣ ಸಹಾಯ ಕೊಟ್ಟಿದ್ದರೋ ಅಷ್ಟನ್ನು ಎಂದರೆ 35.46 ಕೋಟಿ ರೂಪಾಯಿಗಳನ್ನು 5ನೇ ಪಂಚವಾರ್ಷಿಕ ಯೋಜನೆಯ ಮೊದಲನೆಯ ವರ್ಷದಲ್ಲಿ ಕೊಟ್ಟಿದ್ದಾರೆ. ಎರಡನೇ ವರ್ಷವೂ ಅಷ್ಟೇ ಕೊಟ್ಟಿದ್ದಾರೆ.

ಮಾನ್ಯ ಹಣಕಾಸಿನ ಸಚಿವರು ಹೇಳಿದ ಹಾಗೆ ರಾಷ್ಟ್ರೀಯ ಅಭಿವೃದ್ಧಿ ಪರಿಷತ್ತು ಸೇರಿದಾಗ ಇದನ್ನು ನಿರ್ಧಾರ ಮಾಡಬೇಕಾಗುತ್ತದೆ. ಆಗ ಯಾವ ತತ್ವಕ್ಕೆ ಒಳಪಟ್ಟು ಯಾವ ತತ್ವವನ್ನು ಮಾಡಿ ಪ್ರತಿಯೊಂದು ರಾಜ್ಯಕ್ಕೂ ಕೇಂದ್ರ ಸರ್ಕಾರದ ನೆರವು ಕೊಡಬೇಕು ಎಂಬುದು ನಿರ್ಧಾರವಾಗಬೇಕು. ನಮ್ಮ ಹಣಕಾಸಿನ ಸಚಿವರು ಆ ಕಡೆಗೆ ಈ ಸಭೆಯ ಗಮನವನ್ನು ಸೆಳೆದಿದ್ದಾರೆ. ನಾನು ಆಶೆ ಮಾಡುತ್ತೇನೆ. ರಾಷ್ಟ್ರೀಯ ಅಭಿವೃದ್ಧಿ ಪರಿಷತ್ತು ಸೇರಿ ಆ ವಿಷಯವನ್ನು ನಿರ್ಣಯ ಮಾಡುತ್ತಾರೆ ಎಂದು. ಈ ನಿರ್ಣಯವನ್ನು ಮಾಡುವ ಕಾಲದಲ್ಲಿ ನನಗೆ ಆಶೆ ಇದೆ. ನಮ್ಮ ದೇಶದಲ್ಲಿರತಕ್ಕ ರಾಷ್ಟ್ರೀಯ ದೃಷ್ಟಿಯಿಂದ ಪ್ರಾಮುಖ್ಯವಾಗಿರತಕ್ಕ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಗಮನಿಸಿ ಹೆಚ್ಚಿನ ಪ್ರಮಾಣದಲ್ಲಿ ನೆರವು ದೊರೆಯುತ್ತದೆ ಎಂದು ನಿರೀಕ್ಷೆ ಮಾಡುತ್ತೇನೆ. ರಾಷ್ಟ್ರೀಯ ದೃಷ್ಟಿಯಿಂದ ಗಣ್ಯವಾದ ಪ್ರಾಮುಖ್ಯವಾದ ಕಾರ್ಯಗಳನ್ನು ಕೈಗೊಂಡಿರತಕ್ಕದ್ದು ಈ ಮಾನ್ಯ ಸಭೆಯವರಿಗೆ ಗೊತ್ತಿರತಕ್ಕ ವಿಷಯ. ಈಗ ನಮ್ಮ ರಾಜ್ಯ ಅಷ್ಟೇ ಅಲ್ಲ ರಾಷ್ಟ್ರಾದ್ಯಂತ ವಿದ್ಯುಚ್ಛಕ್ತಿ ಕೊರತೆ ನಮ್ಮನ್ನು ಕಾಡಿಸುತ್ತದೆ. ನಮ್ಮ ಅಭಿವೃದ್ಧಿಗೆ ಕುಂಠಿತವಾಗಿರತಕ್ಕದ್ದು, ಅಡಚಣೆಯನ್ನು ಒಡ್ಡಿರತಕ್ಕದ್ದು ಎಲ್ಲರ ಗಮನವನ್ನು ಸೆಳೆಯತಕ್ಕದ್ದು ವಿದ್ಯುಚ್ಛಕ್ತಿ ಅಭಾವ. ವಿದ್ಯುಚ್ಛಕ್ತಿ ತಯಾರಾಗುವುದು ಯಾವ ಯಾವ ಮೂಲದಿಂದ ಎಂಬುದು ಗೊತ್ತಿದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ನೈಸರ್ಗಿಕ ಮೂಲದಿಂದ ವಿದ್ಯುಚ್ಛಕ್ತಿ ಉತ್ಪಾದನೆ ಮಾಡುವುದಕ್ಕೆ ವಿಪುಲವಾದಂತಹ ಅವಕಾಶ ಇದೆ. ಇದನ್ನು ವಿವರಣೆ ಮಾಡಬೇಕಾದ ಅಗತ್ಯವಿಲ್ಲ. ದೆಹಲಿಯಲ್ಲಿ ಕುಳಿತುಕೊಂಡಿರುವ ವರಿಷ್ಠರು. ನಮಗೆ ನೈಸರ್ಗಿಕ ಮೂಲವನ್ನು ಉಪಯೋಗಿಸಿಕೊಳ್ಳಲು ಆದ್ಯತೆ ಕೊಡುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ. ಥರ್ಮಲ್ ಎಲೆಕ್ಟ್ರಿಸಿಟಿ, ಅಥವಾ ಅಣು ಶಕ್ತಿಯನ್ನು ಉಪಯೋಗಿಸಿಕೊಂಡು ವಿದ್ಯುಚ್ಛಕ್ತಿ ತಯಾರು ಮಾಡುವುದಕ್ಕೆ ಎಷ್ಟು ಖರ್ಚು ವೆಚ್ಚ ಬರುತ್ತದೆ ಎಂಬುದು ಗೊತ್ತಿದೆ. ಆದ್ದರಿಂದ ಇದಕ್ಕೆ ಮೊದಲು ಪ್ರಾಶಸ್ತ್ಯ ಸಿಕ್ಕುತ್ತದೆ. ಈಗ ದೇಶದಲ್ಲಿ ಒದಗಿರತಕ್ಕ ವಿದ್ಯುಚ್ಛಕ್ತಿ ಅಭಾವದ ದೆಸೆಯಿಂದ ನಮ್ಮ ರಾಜ್ಯದಲ್ಲಿರತಕ್ಕ ನೈಸರ್ಗಿಕ ಮೂಲದಿಂದ ವಿದ್ಯುಚ್ಛಕ್ತಿ ಉತ್ಪನ್ನ ಮಾಡುವುದಕ್ಕೆ ಸಾಕಷ್ಟು ಪ್ರಮಾಣದಲ್ಲಿ ನೆರವು ಕೊಡುತ್ತಾರೆಂದು ನಿರೀಕ್ಷಣೆ ಮಾಡಿದರೆ ತಪ್ಪಾಗಲಾರದು. ಇವೊತ್ತು ಆಹಾರಾಭಾವದಿಂದ ಹೊರದೇಶಗಳಿಂದ ಮತ್ತು ಪರದೇಶಗಳಿಂದ ಆಹಾರವನ್ನು ತರಿಸುವಂಥಾ ಪರಿಸ್ಥಿತಿ ಪದೇ ಪದೇ ಒದಗುತ್ತಿದೆ. ದೇಶದಲ್ಲಿರತಕ್ಕ ಆಹಾರಾಭಾವ ವಿಷಯ ನಮಗೆಲ್ಲರಿಗೂ ಗೊತ್ತಿದೆ. ನಮಗೆ ಕೃಷ್ಣಾ ನದಿಯ ನೀರನ್ನು ನಮ್ಮ ಪಾಲಿನ ನೀರನ್ನು ಉಪಯೋಗಿಸಿ ಕೊಳ್ಳುವುದಕ್ಕೆ ಅವಕಾಶ ಇದೆ. ಬಹುಶ: ನಮ್ಮ ರಾಜ್ಯ ಒಂದೇ ಅಲ್ಲ, ನಾನು ನಿರೀಕ್ಷಣೆ ಮಾಡುತ್ತೇನೆ ಕೃಷ್ಣಾ ನದಿಯಲ್ಲಿ ನಮ್ಮ ಪಾಲಿನ ನೀರನ್ನು ಉಪಯೋಗಿಸಿಕೊಳ್ಳಲು ಸರಿಯಾದ ರೀತಿಯಲ್ಲಿ ವ್ಯವಸ್ಥೆ ಮಾಡಿದರೆ ಇಡೀ ದಕ್ಷಿಣ ಇಂಡಿಯಾ ದೇಶದಲ್ಲೇ ಆಹಾರ ಅಭಾವ ಇರುವುದಿಲ್ಲ ಎಂದು ನಿಸ್ಸಂದೇಹದಿಂದ ಹೇಳಬಹುದು. ನಾಲ್ಕು ರಾಜ್ಯಗಳಲ್ಲಿ ಎಂದರೆ ಆಂಧ್ರ, ಮದ್ರಾಸ್, ಕೇರಳ ಮತ್ತು ಕರ್ನಾಟಕ ಈ ನಾಲ್ಕು ರಾಜ್ಯಗಳಲ್ಲಿಯೂ ಕೂಡ ಆಹಾರದ ಅಭಾವ ಇರುವುದಿಲ್ಲ. ಅಷ್ಟೇ ಅಲ್ಲ. ಅನೇಕ ಬೇರೆ ಬೆಳೆಗಳನ್ನೂ ಕೂಡ ಬೆಳೆಯಬಹುದು. ಹತ್ತಿ ಎಣ್ಣೆ ಬೀಜ. ಇವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬೆಳೆಯಬಹುದು. ರಾಷ್ಟ್ರದ ಉತ್ಪನ್ನವನ್ನು ಬಹುಮುಖವಾಗಿ ಹೆಚ್ಚಿಸಬಹುದು. ಇದು ಎಲ್ಲರಿಗೂ, ಗೊತ್ತಿದೆ. ನಮಗೆ ಆತಂಕ ಇರತಕ್ಕದ್ದು ಹಣಕಾಸಿನ ಅಭಾವ.

ಆದಕ್ಕಾಗಿ [illegible] ನಮಗೆ [illegible] ಕಡಿಮೆಯಾಗಿದೆ [illegible] ಅವಕಾಶವಿಲ್ಲ ಎನ್ನುವುದನ್ನು ಸಮಿತಿಯಲ್ಲಿ ಕೇಳಿದ್ದರೂ ಕೂಡ ರಾಷ್ಟ್ರದ ನಾಯಕರು [illegible] ಗಮನ ಕೊಡಲಿಲ್ಲ. ಪಕ್ಷಪಾತ ಮಾಡುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ. ತಾಯಿ ಮಗುವಿಗೆ ಹಾಲು ಕೊಡುವುದಿಲ್ಲ ಎಂದು ಹೇಳುವುದಕ್ಕಾಗುತ್ತದೆಯೇ?

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಕರ್ನಾಟಕ ಜನತೆ [illegible] ಮುಕ್ತರಾಗಬೇಕು ಎಂದು ತಮ್ಮ ಅಭಿಪ್ರಾಯವೇ ?

ಶ್ರೀ ಕೆ. ಪುಟ್ಟಸ್ವಾಮಿ:-

ಬೇರೆಯವನ್ನು ಬಿಟ್ಟುಕೊಳ್ಳಬೇಕು. ಮನುಷ್ಯ ಆಶಾವಾದಿಯಾಗಿರಬೇಕು. ಇಂಥಾ ಪ್ರಾಮುಖ್ಯವಾದ ಯೋಜನೆಗಳು ಇರುವಾಗ ಈ ಯೋಜನೆಗೆ ಕೇಂದ್ರ ಸರ್ಕಾರ ಯಾವ ನೀತಿಯನ್ನು ಅನುಸರಿಸಿ ಕೊಡಬೇಕು? ನಮಗೆ ಹೆಚ್ಚಿನ ಗಮನ ಕೊಡಬೇಕು. ಅದರಲ್ಲಿ ಸಂದೇಹವಿಲ್ಲ ಎಂದು ನಾನು ಮತ್ತೊಮ್ಮೆ ಹೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ಇದುವರೆಗೂ ಕಳೆದ ಎರಡು ವರ್ಷಗಳಿಂದ ನಮ್ಮ ವಿಚಾರದಲ್ಲಿ ಕೇಂದ್ರ ಸರ್ಕಾರ ಯಾವ ರೀತಿ ನಡೆದುಕೊಂಡಿದೆ ಎಂಬುದು ಎಲ್ಲರಿಗೂ ಗೊತ್ತಿದೆ. ಅದನ್ನು ಪರಿಶೀಲನೆ ಮಾಡೋಣ. ಅಥವಾ ಬೇರೆ ರಾಜ್ಯಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಹೆಚ್ಚಿನ ಸಹಾಯವನ್ನು ಮಾಡಿ ನಮ್ಮನ್ನಾದರೂ ಅಲಕ್ಷ್ಯ ಮಾಡಿದ್ದರೆ ಅದನ್ನು ಪರಿಶೀಲನೆ ಮಾಡಬೇಕಾದ್ದು ಅಗತ್ಯ.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ನಮಗೆ ಬರಗಾಲದಲ್ಲಿ ಬಂದದ್ದೇ ಸಾಕ್ಷಿಯಾಗಿ ಉಳಿದಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಶ್ರೀಮಾನ್ ಪುಟ್ಟಸ್ವಾಮಯ್ಯನವರು ಮಧ್ಯ ಮಧ್ಯ ಎದ್ದು ಮಾತನಾಡದೇ ಹೋದರೆ ಶೋಭಾಯಮಾನವಾಗಿರುವುದಿಲ್ಲ. 1973-74ನೇ ಇಸವಿಯಲ್ಲಿ ಕೇಂದ್ರ ಸರ್ಕಾರದವರು ನಮಗೆ 35:46 ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ. ಸ್ಪೆಷಲ್ ಅಸಿಸ್ಟೆನ್ಸ್ 9 ಕೋಟಿ 46 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಕಾಳಿನದಿ ಪ್ರಾಜೆಕ್ಟಿಗೆ 14 ಕೋಟಿ 59 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಹೀಗೆ ಒಟ್ಟು 59 ಕೋಟಿ 81 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ.

ಶ್ರೀ ಹೆಚ್. ಡಿ. ದೇವೇಗೌಡ:-

5ನೇ ಫೈನಾನ್ಸ್ ಕಮಿಷನ್‌ನಲ್ಲಿ ನಮ್ಮ ರಾಜ್ಯಕ್ಕೆ ಹೊಡೆತ ಬಿದ್ದಿತ್ತು. ಅದನ್ನು ಇದರಲ್ಲಿ ಎಷ್ಟು ತುಂಬಿಕೊಟ್ಟಿದ್ದಾರೆ ಎಂಬುದನ್ನು ಅವರು ಹೇಳಿದ್ದಾರೆ. ಆದರೆ 5ನೇ ಫೈನಾನ್ಸ್ ಕಮಿಷನ್ನಿನಲ್ಲಿ ನಮಗೆ ಪೆಟ್ಟು ಬಿದ್ದದ್ದರಿಂದ ಕೇಂದ್ರ ಸರ್ಕಾರದವರು ನಮಗೆ ಎಷ್ಟು ಹಣವನ್ನು ಕೊಡುತ್ತೇವೆ ಎಂದು ಹೇಳಿದ್ದರೋ ಅಷ್ಟು ಹಣವನ್ನು ಕೊಟ್ಟಿದ್ದಾರೆಯೇ? ಈ 14 ಕೋಟಿ ರೂಪಾಯಿಗಳು ಮತ್ತು 9 ಕೋಟಿ ರೂಪಾಯಿಗಳನ್ನು ಇಲ್ಲಿ ಸೇರಿಸಿದ್ದಾರೆಯೋ ಇಲ್ಲವೇ ಎಂಬುದನ್ನು ಕೇಳಿ.

ಶ್ರೀ ಕೆ. ಪುಟ್ಟಸ್ವಾಮಿ:-

ಹರಿಶ್ಚಂದ್ರ ಕಾವ್ಯದಲ್ಲಿ ಒಂದು ಉಕ್ತಿ ಇದೆ. ಅದು ಏನೆಂದರೆ ಬಂದ ಕಾಲ ಗುಣವೋ ನಿಂತ ನೆಲದ ಗುಣವೋ ಎಂದು.

ಮಾನ್ಯ ಸದಸ್ಯರು ಹೇಳಿದ್ದು ಖಂಡಿತವಾಗಿ ಸರಿಯಾಗಿದೆ. ನಾನು ಮುಂಚೆ ಅದರ ಬಗ್ಗೆ ಮಾತನಾಡಿದಾಗ ಸಾಕಷ್ಟು ವಿವರವಾಗಿ ಹೇಳಿದ್ದೇನೆ. ಆ ಸ್ಥಳಕ್ಕೆ ಬಂದಾಗ ಏನೇನೊ ಆಗುತ್ತದೆ. ಆ ಸ್ಥಳದಿಂದ ಈ ಸ್ಥಳಕ್ಕೆ ಬಂದಾಗ ಹಾಗಿರದು. ಇದಕ್ಕೆ ಒಂದು ನಿದರ್ಶನ ಕೊಡುತ್ತೇನೆ. ಯಾರೋ ಇಬ್ಬರು ಅಣ್ಣತಮ್ಮಂದಿರು ಕುರುಕ್ಷೇತ್ರಕ್ಕೆ ಹೋದರಂತೆ. ಅಣ್ಣ ತಮ್ಮಂದಿರಲ್ಲಿ ಇಬ್ಬರೂ ಬಹಳ ವಿಶ್ವಾಸದಿಂದಾಗಿದ್ದರು. ಆದರೆ ಕುರುಕ್ಷೇತ್ರಕ್ಕೆ ಇಳಿದು ಆ ನೆಲಕ್ಕೆ ಕಾಲಿಟ್ಟಾಗ ಇಬ್ಬರೂ ಜಗಳವಾಡಿದರಂತೆ. ಆ ರೀತಿಯಲ್ಲಿ ನಮ್ಮ ನಮ್ಮ ಪರಿಸ್ಥಿತಿ ಆಗುವುದು ಸ್ವಾಭಾವಿಕ. ನಾನು ಈ ಸಂದರ್ಭದಲ್ಲಿ ಏನು ಹೇಳುತ್ತೇನೆಂದರೆ 5ನೇ ಹಣಕಾಸಿನ ಆಯೋಗದಿಂದ ನಮಗೆ ತೊಂದರೆಯಾಗಿರುವುದು ಉಂಟು, ನಮ್ಮ ದೃಷ್ಟಿಯಿಂದ ಅನ್ಯಾಯವಾದುದೂ ಉಂಟು. ಕೇಂದ್ರ ಕಂಡೂ ಇಂಡಿಯಾ ಸರಕಾರ ನಮಗೆ ಅನ್ಯಾಯ ಮಾಡಿದ್ದಾರೆಯೋ ಎಂಬುದು ಕೇಳತಕ್ಕ ಪ್ರಶ್ನೆ. ಯಾವ್ಯಾವ ರಾಜ್ಯಗಳಿಗೆ ಎಷ್ಟೆಷ್ಟು ಹಣ ಸಂದಾಯ ಮಾಡಬೇಕೆಂಬ ಬಗ್ಗೆ ಏನಾದರೂ ಒಂದು ನೀತಿಯನ್ನು ಕೇಂದ್ರ ಸರಕಾರದವರು ಅನುಸರಿಸಿದ್ದಾರೆಯೋ ಇಲ್ಲವೋ ಎಂಬುದು ಕೇಳತಕ್ಕ ಪ್ರಶ್ನೆ. ಕೆಲವರಿಗೆ ಹೆಚ್ಚು ಬಂದಿದೆ, ಕೆಲವರಿಗೆ ಕಡಿಮೆ ಬಂದಿದೆ ಎಂಬುದು. ಇದೇ ಹಣಕಾಸಿನಿಂದ ನಮಗೆ 250 ಕೋಟಿ ರೂಪಾಯಿಗಳ ಬದಲು 550 ಕೋಟಿ ರೂಪಾಯಿಗಳವರೆಗೆ ಬಂದಿತು.

3.30 ಪಿ. ಎಂ.

ಶ್ರೀ ಹೆಚ್.ಡಿ. ದೇವೇಗೌಡ:-

ಆ ರೀತಿಯಾಗಿ ಅನ್ಯಾಯವಾಗಿದೆಯೆಂಬ ವಿಷಯ ಕೇಂದ್ರಕ್ಕೆ ಗೊತ್ತಾದ ಮೇಲೆ ಸ್ಪೆಷಲ್ ಅಸಿಸ್ಟೆನ್ಸ್ ಕೊಡುತ್ತೇನೆಂಯು ಹೇಳಿ 72-73ರಲ್ಲಿ ಕಾಳೀ ನದಿ ಯೋಜನೆಗೆ ಎಷ್ಟು ರೊಕ್ಕ ಬಂತು? ಅದನ್ನು ಸರಿಯಾಗಿ ಹೇಳದೆ ಕೇಂದ್ರ ಸರಕಾರದವರು ಏನೋ ಕೊಟ್ಟಿದ್ದಾರೆಂದು ಸುಮ್ಮನೆ ಹೇಳುವುದು ಸರಿಯಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:-

ನೀವು ಹೇಳುವಂಥ ವಾಸ್ತವಿಕ ವಿಚಾರವನ್ನು ನೋಡುವ ದೃಷ್ಟಿ ಬೇರೆ ಇದೆ. 4ನೇ ಪಂಚವಾರ್ಷಿಕ ಯೋಜನೆಯ ಕೊನೆಯ ವರ್ಷದಲ್ಲಿ ನಮಗೆ ಕೇಂದ್ರ ಸರಕಾರ ಕೊಡಬೇಕಾದಂಥ ಹಣಕ್ಕಿಂಥ ಹೆಚ್ಚಿಗೆ ಕೊಟ್ಟಿದೆ. ಅದು ಸ್ಪೆಷಲ್ ಅಸಿಸ್ಟೆನ್ಸ್. ಹೆಚ್ಚಿಗೆ ಕಾಳೀ ಯೋಜನೆಗಾಗಿ ಕೊಟ್ಟಿದ್ದಾರೆ. ಆ ರೀತಿಯಾಗಿ ಕೊಡುವ ಧರ್ಮ ಇರಲಿಲ್ಲ, ಅದಕ್ಕೆ ತಕ್ಕ ಒತ್ತಾಯವೂ ಸಹ ಇರಲಿಲ್ಲ, ನಮಗೇನೋ ತೊಂದರೆಯಾಗಿದೆ. ಆದರೆ ನಾನು ಅನ್ಯಾಯ ಎಂಬ ಪದವನ್ನು ಉಪಯೋಗಿಸುವುದಿಲ್ಲ, ಏಕೆಂದರೆ, ನಮಗೆ ಹಣ ಬರಲಿಲ್ಲವೆಂಬುದಾಗಿ ಹೇಳಿದ ಕಾರಣದಿಂದ ನಮಗೆ ಹಣ ಕೊಟ್ಟರು. ಮಾನ್ಯ ಶ್ರೀ ದೇವೇಗೌಡರು ಮಾತನಾಡುತ್ತಾ ಆ ರೀತಿ ಹಣ ಕೊಡುವುದಕ್ಕೆ

ಇವರು ಅನ್ಯಾಯವಾಗಿದೆ ಎಂದು ಹೇಳಿದ್ದರಿಂದ, ಹಾಗೂ ಇವರು ಮೆಹರ್‌ಬಾನಿ ಮಾಡಿದ್ದರಿಂದ ಕೊಟ್ಟಿದ್ದಾರೆಂದು ಹೇಳಿದರು. ಅವರೇನೂ ನಾವು ಮೆಹರ್‌ಬಾನಿ ಮಾಡಿದ್ದಕ್ಕೆ ಕೊಡಲಿಲ್ಲ. ಇಂಡಿಯಾ ಸರಕಾರದವರು ರಾಜ್ಯ ಸರ್ಕಾರಕ್ಕೆ ಕೊಡುವುದರಲ್ಲಿ ಹಣ ಒದಗಿಸುವುದರಲ್ಲಿ ಯಾವ ಮೆಹರಬಾನಿಯೂ ಇಲ್ಲ. ದಾಕ್ಷಿಣ್ಯವಿಲ್ಲ. ಅವರು ಯಾವ ಸ್ಪೆಷಲ್ ಅಸಿಸ್ಟೆನ್ಸ್ ಕೊಡಲಿ, ಸ್ಪೆಷಲ್ ಅಕಾಮಡೇಷನ್ ಕೊಡಲಿ, ಅವರು ಯಾವುದೇ ಹೆಸರಿನಲ್ಲಿ ಏನೇ ಕೊಟ್ಟರೂ ಆ ರೀತಿ ಅವರು ಕೊಡುವುದು ಅವರ ಕರ್ತವ್ಯ. ಅದನ್ನು ತೆಗೆದುಕೊಳ್ಳಲು ಪೂರ್ಣ ಹಕ್ಕು ಇದೆ. ಅದಕ್ಕಾಗಿ ನಾನು ಅವರನ್ನು ಪ್ರಶಂಸೆ ಮಾಡುವುದಾಗಲೀ, ತೆಗಳುವುದೇ ಆಗಲೀ ಮಾಡುತ್ತಾ ಇಲ್ಲ.? ಇದರಲ್ಲಿ ಅವರನ್ನು ತೆಗಳುವ ಮಾತು ಏನೂ ಇಲ್ಲ.

ಶ್ರೀ ಹೆಚ್. ಡಿ. ದೇವೇಗೌಡ:-

ನೀವು ಸಮಾಧಾನಪಟ್ಟರೆ ರಾಜ್ಯಕ್ಕೆ ಸಮಾಧಾನ. ನಿಮಗೆ ಸಮಾಧಾನ ಅಲ್ಲಿರುವವರೆಗೂ ಆಗುವುದಿಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:-

ಅದೊಂದು ನಮೂನೆಯ ಆಹ್ವಾನ. ನನಗೆ ಪಕ್ಷಾತೀತವಾಗಿ ಮಾತನಾಡಲು ಮನಸ್ಸು ಇಲ್ಲ. ನಿಮ್ಮ ನಡೆನುಡಿ, ನೀವು ಹೇಳತಕ್ಕ ನೀತಿಯನ್ನು ಜನರು ಒಪ್ಪಿ ನಿಮ್ಮನ್ನು ಆ ಕಡೆಯಿಂದ ಈ ಕಡೆಗೆ ಕಳುಹಿಸಿದರೆ ನಾನು ವ್ಯಥೆಪಡುವುದಿಲ್ಲ. ನಾನು ಬಹಳವಾಗಿ ಸಂತೋಷಪಡುತ್ತೇನೆ. ಬಿಫೋರ್ ಯು ಡಿಸೈರ್ ಐ ವಾಂಟ್ ಯು ಟು ಡಿಸರ್ವ್. ಆದ್ದರಿಂದ ಇವತ್ತು ಏನು ಮಾತನಾಡಿದರೂ..

**Sri H. D. DEVE GOWDA:-**

So. what you deserved Government of India gave it.

**Sri K. PUTTASWAMY:-**

No, that is not the question. It is our right to receive and they gave it. We may deserve something more according to principle of devolution of finances. ನಮ್ಮ ಹಕ್ಕು ಪ್ರಕಾರ ಅದು ಬಂದಿದೆ.

**Sri. H. D. DEVEGOWDA:-**

I would like to know whether the some principle with regard to devolution of finances was applied when they have given special assistance to U.P. and Maharashtra?

ಶ್ರೀ ಕೆ. ಪುಟ್ಟಸ್ವಾಮಿ:

ಕೇಂದ್ರದಿಂದ ಸ್ಪೆಷಲ್ ಅಸಿಸ್ಟೆನ್ಸ್ ಕೊಡಬೇಕಾದರೆ ಅವರು ಕೆಲವು ನಿಯಮಗಳಿಗೊಳಪಟ್ಟು ಕೊಡುತ್ತಾರೆ. ಅದರಲ್ಲಿ ಏನೂ ತಾರತಮ್ಯವಿರುವುದಿಲ್ಲ. ಅವರು ಸ್ಪೆಷಲ್ ಅಸಿಸ್ಟೆನ್ಸ್ ಕೊಡುವಾಗ

ಆದರಲ್ಲಿ ಏನಾದರೂ ವ್ಯತ್ಯಾಸವಾಗಿದೆಯೇ ಇಲ್ಲವೇ ಎಂಬುದನ್ನು ನಾವು ಪರಿಶೀಲನೆ ಮಾಡಬೇಕು. ಆದರೆ ಮಾನ್ಯ ಶ್ರೀ ದೇವೇಗೌಡರು ಮಾತನಾಡುವಾಗ ಇಂಡಿಯಾ ಸರಕಾರದವರು ವಿಶೇಷ ಹಣ ಕೊಡುವ ವಿಷಯದಲ್ಲಿ ಯಾವುದಾದರೂ ರಾಜ್ಯಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಕೊಟ್ಟಿದ್ದರೆ, ಹಾಗೇನಾದರೂ ಇತರ ರಾಜ್ಯಗಳಿಗೆ ನ್ಯಾಯವಾಗಿ ಕೊಡಬೇಕಾದ್ದನ್ನು ಕೊಟ್ಟಿಲ್ಲವೆಂದು ಹೇಳಿದರೆ, ಅವರು ಆ ರೀತಿ ಕೊಟ್ಟಿರುವುದು ಅನ್ಯಾಯವೆಂದು ಹೇಳಿದರೆ, ನಾನೂ ಸಹ ಅವರ ಹೇಳಿಕೆಯಲ್ಲಿ ಸೇರುವುದಕ್ಕೆ ಸಿದ್ಧವಾಗಿದ್ದೇನೆ.

ಶ್ರೀ ಹೆಚ್. ಡಿ. ದೇವೇಗೌಡ:-

ಮಾನ್ಯ ಶ್ರೀ ಪುಟ್ಟಸ್ವಾಮಿಯವರು ಬಹಳ ಒಳ್ಳೆಯ ಪಾರ್ಲಿಮೆಂಟೇರಿಯನ್. ಅವರೂ ಸಹ ಮಂತ್ರಿಯಾಗಿ ಸುಮಾರು 10 ವರ್ಷಗಳ ಕಾಲ ಇದ್ದರು. ಅಂತಹವರು ಮಾನ್ಯ ಆರ್ಥಿಕ ಸಚಿವರಿಗೆ ಬೇಕಾದರೆ ಹೇಳಲಿ. ನನಗೆ ಅದರ ಬಗ್ಗೆ ಅಂಕಿಅಂಶಗಳನ್ನು ಮಾನ್ಯ ಸದಸ್ಯರು ತರಿಸಿಕೊಡಲಿ. ಯಾವ್ಯಾವ ರಾಜ್ಯಕ್ಕೆ ವಿಶೇಷ ಸವಲತ್ತುಗಳನ್ನು ಎಷ್ಟೆಷ್ಟು ಕೊಟ್ಟಿದ್ದಾರೆ. ನನಗೆ ಅಂಕಿ ಅಂಶಗಳನ್ನು ಕೊಡಲಿ. ನನಗೆ ಅವು ಸಿಗುವುದಿಲ್ಲ.

ಶ್ರೀ ಕೆ. ಪುಟ್ಟಸ್ವಾಮಿ:-

ನೀವು ಪೇಪರ್‌ನಲ್ಲಿ ಬಂದುದನ್ನು ಹೇಳುತ್ತಿದ್ದೀರಿ. ಆದರೆ ನಾರ್ಮಲ್ಲಾಗಿ ಸೆಂಟ್ರಲ್ ಅಸಿಸ್ಟೆನ್ಸ್ ಎಲ್ಲಾ ರಾಜ್ಯಗಳಿಗೆ ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಕೊನೆಯ ವರ್ಷದಲ್ಲಿ ಏನು ಕೊಟ್ಟರೋ ಅಷ್ಟೇ ಈಗ ಕೊಡುತ್ತಿದ್ದಾರೆ. ಇದನ್ನು ಕೇಂದ್ರ ಸರ್ಕಾರದವರು ಬಹಿರಂಗವಾಗಿಯೇ ಹೇಳಿದ್ದಾರೆ. ಈಗಲೂ ಹೇಳುತ್ತಾ ಬಂದಿದ್ದಾರೆ. ಇದು ಕೇವಲ ಕರ್ನಾಟಕಕ್ಕೇ ಮಾತ್ರ ಅನ್ವಯಿಸುವ ಕ್ರಮವಲ್ಲ. ಎಲ್ಲಾ ರಾಜ್ಯಗಳಿಗೂ ಅನ್ವಯಿಸುತ್ತದೆ. ಏನಾದರೂ ಒಂದು ರಾಜ್ಯಕ್ಕೆ ಹೆಚ್ಚು ಹಣವನ್ನು ಕೊಟ್ಟಿದ್ದಾರೆಂದು ಅವರು ಹೇಳುವುದಾದರೆ ಅದನ್ನು ಕೇಂದ್ರ ಸರ್ಕಾರದಿಂದ ತಿಳಿದುಕೊಳ್ಳಬೇಕಾಗುತ್ತದೆ. ಪತ್ರಿಕೆಯಲ್ಲಿ ಯು. ಪಿ. ಮತ್ತು ಬಿಹಾರದಲ್ಲಿ ಹೆಚ್ಚು ಹಣವನ್ನು ಕೊಟ್ಟಿದ್ದಾರೆಂಬ ಬಗ್ಗೆ ಅವರು ಪ್ರಸ್ತಾಪ ಮಾಡುತ್ತಿದ್ದಾರೆ. ಅದರ ಬಗ್ಗೆ ಕೇಂದ್ರಕ್ಕೆ ಬರೆದಿದ್ದಾರೆ ಎಂಬುದಾಗಿ ತಿಳಿದು ಬಂದಿದೆ. ಪತ್ರಿಕೆಯಲ್ಲಿ ಬಂದಿರುವ ಪ್ರಕಾರ ಅವರಿಗೆ ಏನು ಕೊಟ್ಟಿದ್ದಾರೋ ಅದನ್ನು ಸ್ಪಷ್ಟವಾಗಿ ತಿಳಿಸಬೇಕೆಂದು ಈಗಾಗಲೇ ಕೇಂದ್ರ ಸರ್ಕಾರಕ್ಕೆ ಬರೆದಿದ್ದೇವೆ. ಅವರಿಂದ ಉತ್ತರ ಬಂದ ನಂತರ ನಿಮಗೆ ಕ್ಷಿಪ್ರವಾಗಿ ತಿಳಿಸುತ್ತೇವೆಂದು ಸರ್ಕಾರದವರು ಹೇಳಿದ್ದಾರೆ.

**Sr H. D. DEVEGOWDA:-**

As leader of Opposition I must come to certain conclusions only on the basis of Press reports. If the information that has appeared in the Press is correct then my charge against the Goverment of India is also correct.

**Sri. M. Y. GHORPADE:-**

We have sought clarification in the matter. But before it is clarified it is not proper to assume things.

**ಶ್ರೀ ಹೆಚ್. ಡಿ. ದೇವೇಗೌಡ:-**

ಈ ಸಭೆಯ ಸೀನಿಯರ್ ಮೆಂಬರ್ ಆಗಿರುವ ಮಾನ್ಯ ಶ್ರೀ ಪುಟ್ಟಸ್ವಾಮಿಯವರು ತಮ್ಮ ಕಡೆಯವರನ್ನು ಬ್ರೀಫ್ ಮಾಡಿದರೆ ಸಾಕು. ಆಗ ಇಷ್ಟು ಮಾತನಾಡತಕ್ಕ ಅವಶ್ಯಕತೆ ಏನಿದೆ? ಏಕೆಂದರೆ ಫಂಡಮೆಂಟಲ್ ಸರ್ಕಾರವೇ ಅವರ ಕೈಲಿದೆ. ಎಷ್ಟೋ ವಿಷಯಗಳನ್ನು ನನಗೆ ಅವರು ಹೇಳುವುದಿಲ್ಲ.

**ಶ್ರೀ ಕೆ. ಪುಟ್ಟಸ್ವಾಮಿ:-**

ಮಾನ್ಯ ವಿರೋಧ ಪಕ್ಷದ ನಾಯಕರಲ್ಲಿ ಒಂದು ವಿನಂತಿ. ನಾನು ಹೇಳತಕ್ಕ ಅಂಕಿಅಂಶಗಳನ್ನು ನಾನು ಯಾವ ಕಚೇರಿಯಿಂದಲೂ ತಂದಿಲ್ಲ. ಯಾರನ್ನೇ ಆಗಲೀ ಕೇಳಿಯೂ ತಂದಿಲ್ಲ. ನನ್ನ ಜ್ಞಾಪಕ ಶಕ್ತಿಯ ಮೇಲೂ ಹೇಳಿಲ್ಲ. ಇದುವರೆಗೂ ಯಾವ್ಯಾವ ವಿಚಾರಗಳನ್ನು ಇಲ್ಲಿ ಹೇಳಿದ್ದೇನೋ ಅವೆಲ್ಲವೂ ಇಲ್ಲಿಯೇ ಇರುತ್ತದೆ. 5ನೇ ಫೈನಾನ್ಸ್ ಕಮಿಷನ್ ಅವರು 250 ಕೋಟಿ ರೂಪಾಯಿಗಳನ್ನು ಕೊಡುತ್ತೇವೆಂದು ಹೇಳಿದ್ದರು. ಈಗ 510 ಕೋಟಿ ರೂಪಾಯಿಗಳು ಅವರಿಂದ ಬರುತ್ತದೆಂಬ ವಿಚಾರ ಬಿಟ್ಟರೆ ಬಾಕೀದು ಎಲ್ಲಾ ಇಲ್ಲಿಯೇ ಇದೆ. ಈ ಪುಸ್ತಕದಲ್ಲಿಯೇ ಇದೆ. ನಾವು ಅನೇಕರು ಓದುವುದಿಲ್ಲ. ನೀವು ಎಲ್ಲವನ್ನೂ ಓದಿದ್ದೀರಿ.

**ಶ್ರೀ ಹೆಚ್. ಡಿ. ದೇವೇಗೌಡ:-**

ಆದರೆ ನಾವು ಅದನ್ನೆಲ್ಲಾ ಜೀರ್ಣಿಸಿ ಕೊಳ್ಳುವುದಕ್ಕೆ ಶಕ್ತಿ ಇಲ್ಲ. ನೀವು ಮಾತನಾಡುವಾಗ ಮೂಗಿನ ನೇರಕ್ಕೆ ಸರಿಯಾಗಿ ಹೇಳುತ್ತೀರಿ.

**ಶ್ರೀ ಕೆ. ಪುಟ್ಟಸ್ವಾಮಿ:-**

ನೀವು ಹೋಗುವ ದಾರಿಯೇ ಬೇರೆ. ನಾವು ಹೋಗುವ ದಾರಿಯೇ ಬೇರೆ.

ಮಾನ್ಯ ವಿರೋಧ ಪಕ್ಷದ ನಾಯಕರು ಇನ್ನೊಂದು ವಿಚಾರ ಹೇಳಿದರು. ಅದೇನೆಂದರೆ ಹಣಕಾಸಿನ ಮಂತ್ರಿಗಳ ಬಗ್ಗೆ ಕೆಲವು ಆಪಾದನೆಗಳನ್ನು ಮಾಡಿದ್ದಾರೆ. ಆದರೆ ಆ ಆಪಾದನೆಗಳು ಅವರು ಕೊನೆಯಲ್ಲಿ ಮಾಡಿದ್ದಾರಲ್ಲಾ ಆ ನಮೂನೆಯ ಆಪಾದನೆಗಳಲ್ಲ. ನಮಗೆ ಕೇಂದ್ರ ಸರ್ಕಾರದಿಂದ ಏನು ಸಲ್ಲಬೇಕೋ ಅಷ್ಟನ್ನು ಪೂರ್ಣವಾಗಿ ಪಡೆಯುವುದಕ್ಕೆ ನಮ್ಮ ಹಣಕಾಸಿನ ಮಂತ್ರಿಗಳು ಪ್ರಯತ್ನ ಮಾಡಿಲ್ಲ ಎಂದು ಇವರ ಮೇಲೆ ಒಂದು ಛಾರ್ಜನ್ನು ತಂದಿದ್ದಾರೆ. ಹಾಗೊಂದು ವೇಳೆ ಇಲ್ಲಿ ನಮ್ಮ ಹಣಕಾಸಿನ ಮಂತ್ರಿಗಳು ಕೇಂದ್ರದ ಮೇಲೆ ಜೋರು ಮಾಡಿದರೆ ಇವರಿಗೂ ಆ ವಿ. ಪಿ. ನಾಯ್ಕರ ಗತಿ ಅವರಿಗಾದ ಹಾಗೆ ಇವರಿಗೂ ಆಗುತ್ತದೆ ಎಂದು ಹೇಳಿದರು. ಆದರೆ ನಾನು ಇಲ್ಲಿ ಈ ಬಡ್ಜೆಟ್‌ನ ಬಗ್ಗೆ ಎಷ್ಟೇ ವ್ಯಾಖ್ಯಾನ ಮಾಡಿ ಮಾತನಾಡಿದರೂ ಈ ವರದಿಯಲ್ಲಿ ಮಾನ್ಯ ಹಣಕಾಸಿನ ಸಚಿವರು ಏನೊಂದು ಪರಿಣಾಮಕಾರಿ ರೀತಿಯಲ್ಲಿ ಹೇಳಿದ್ದಾರೆ ಆದಕ್ಕಿಂತ ಮಿಗಿಲಾಗಿ ನನಗೆ ಹೇಳುವುದಕ್ಕಾಗುವುದಿಲ್ಲ. ಅವರು ಈ ಒಂದು ಫೆಡರಲ್

ಸ್ವಾತಂತ್ರ್ಯದ ಸನ್ನಿವೇಶದಲ್ಲಿ ಯಾವ ರಾಜ್ಯ ಕೇಂದ್ರಕ್ಕೆ ಎಷ್ಟರಮಟ್ಟಿಗೆ ಅಧೀನವಾಗಿರಬೇಕು ಎಂಬುದನ್ನು ಗಮನದಲ್ಲಿಟ್ಟು ಕೊಂಡು ಈ ಮಾತುಗಳನ್ನು ಅವರು ಹೇಳಿದ್ದಾರೆ. ಮಾನ್ಯ ಹಣಕಾಸಿನ ಸಚಿವರು ಈ ವರದಿಯ ಪುಟ 4 ಮತ್ತು 5ರಲ್ಲಿ ತಮ್ಮ ಅಭಿಪ್ರಾಯವನ್ನು ಬಹಳ ಸ್ಪಷ್ಟವಾಗಿ ಹೇಳಿದ್ದಾರೆ. ಅದು ಈ ರೀತಿ ಇದೆ.

> " The National Development Council has not yet met to determine the quantum of Central assistance and the formula for its distribution to all States.

ಹಿಂದೆ ಆ ಗಾಡ್ಗಿಲ್ ವರದಿ ಪ್ರಕಾರ ಮಾಡಿದ್ದರು. ಈಗ 2 ವರ್ಷಗಳು ಕಳೆದರೂ ಅದರಂತೆ ಇನ್ನೂ ಮಾಡುವುದಕ್ಕಾಗಿಲ್ಲ. ನಮಗಿಲ್ಲಿ ಸಂಸಾರದ ತೊಂದರೆಗಳು ಎಷ್ಟಿದೆಯೋ ಹಾಗೇ ಆ ಕೇಂದ್ರಕ್ಕೂ ತೊಂದರೆಗಳಿವೆ. ಅದನ್ನು ಮಾನ್ಯ ವಿರೋಧ ಪಕ್ಷದ ಸದಸ್ಯರು ಮತ್ತು ನಾಯಕರು ಗಮನಕ್ಕೆ ತೆಗೆದುಕೊಳ್ಳಬೇಕು.

**Sri H. D. DEVEGOWDA:-**

The draft Fifth Plan has gone to cold Storage.

**SRI K. PUTTASWAMY:-**

There are many more things which are not in our hands or in the hands of Central Government. There are certain other things which take their own course.

ನಮಗೆ ಇಲ್ಲಿ ಕೇಂದ್ರದವರಿಗೆ ಆ ರಿಸೋರ್ಸಸ್‌ಗಳು ಎಲಾಸ್ಟಿಕ್ಕಾಗಿರುವಷ್ಟು ನಮಗೆ ಎಲ್ಯಾಸ್ಟಿಕ್ ಆಗಿಲ್ಲ. ಸಾಲದ್ದಕ್ಕೆ ನಮಗಿಲ್ಲಿ ಹಣದ ಒತ್ತಡ ಬಹಳ ಜಾಸ್ತಿಯಾಗಿ ಇರುತ್ತದೆ ಎಂದಿದ್ದಾರೆ.

In the Finance Minister's Speech it is stated as follows:-

> " This should be done as soon as possible in order to end uncertainties and ensure that both the Centre and States share the burden of development equitably. No doubt the centre has its own problems, but the fact remains that the revenues of the Centre are far more elastic than those of the States".

I would like the hon. the Leader of the Opposition to note this. That is the song of this House, this Government. Every now

and then you have elastic resources ಎಂದು ಹೇಳುತ್ತಿದ್ದರೂ ಆ ಕೇಂದ್ರಕ್ಕೂ ಕೆಲವು ತೊಂದರೆಗಳಿಲ್ಲದೆ ಇಲ್ಲ. ನೆನ್ನೆ ಪತ್ರಿಕೆಯಲ್ಲಿ ಆ ಅಮೇರಿಕಾದವರು ಶಸ್ತ್ರಾಸ್ತ್ರಗಳ ಮೇಲೆ ಹಾಕಿದ್ದ ನಿರ್ಬಂಧವನ್ನು ಎತ್ತಿದ್ದಾರೆ......

**Sir H. D. DEVEGOWDA:-**

With that we have raised our resources to Rs. 119 crores.

**Sri K. PUTTASWAMY:-**

They have also raised their resources. But they have other commitments also. ಕೇಂದ್ರದವರು ನಮ್ಮ ಸರ್ಕಾರವನ್ನು ಅತ್ತೆ ಸೊಸೆಯನ್ನು ನೋಡತಕ್ಕ ರೀತಿಯಲ್ಲಿ ನೋಡುತ್ತಿದೆ ಎಂದು ಹೇಳುವುದು ಸರಿಯಲ್ಲ. ಆ ಪಾಕಿಸ್ತಾನದವರು ಅಮೇರಿಕಾದವರಿಂದ ಆಧುನಿಕ ಶಸ್ತ್ರಾಸ್ತ್ರಗಳನ್ನು ಇಷ್ಟ ಬಂದ ಹಾಗೆ ಕೊಳ್ಳುವುದಕ್ಕೆ ಹೊರಟರೆ ನಮ್ಮ ರಾಷ್ಟ್ರ ಸುಮ್ಮನೆ ಇಲ್ಲಿ ಕೈ ಕಟ್ಟಿ ಕುಳಿತುಕೊಳ್ಳುವುದಕ್ಕಾಗುವುದಿಲ್ಲ. ಅಂಥ ಪ್ರಸಂಗ ಬಂದರೆ ಆ ಪಾರ್ಲಿಯಮೆಂಟ್ ಆ ಕೇಂದ್ರಕ್ಕೆ ಕೊಡತಕ್ಕ ಪ್ರೋತ್ಸಾಹಕ್ಕಿಂತ ಹೆಚ್ಚಿನ ಪ್ರೋತ್ಸಾಹವನ್ನು ಇಲ್ಲಿ ನಮ್ಮ ಈ ಸಭೆ ಕೊಡುತ್ತದೆ ಎಂಬ ವಿಶ್ವಾಸ ನನಗಿದೆ.

**Sri H.D. DEVEGOWDA:-**

We know what the implications are.

**Sri K. PUTTASWAMY:-**

I concede that the Leader of the Opposition is more alive to these things than some of us. ಇಲ್ಲಿ ನಮಗೆ ಹೊಟ್ಟೆ ಹಸಿವು ಬಹಳ ಜಾಸ್ತಿಯಾಗಿದೆ ಎಂಬುದನ್ನು ನಮ್ಮ ಆರ್ಥಿಕ ಸಚಿವರು ಬಹಳ ಮಾರ್ಮಿಕವಾಗಿ ಇಲ್ಲಿ ಹೇಳಿದ್ದಾರೆ.

ಶ್ರೀ ಹೆಚ್. ಡಿ. ದೇವೇಗೌಡ:-

ನಾನು ಹಳ್ಳಿಗೌಡ ಒರಟಾಗಿ ಹೇಳಿದ್ದೇನೆ. ಅರ್ಥ ಸಚಿವರು ನವಿರಾಗಿ ಹೇಳಿದ್ದಾರೆ.

**K. PUTTASWAMY:-**

It is further stated as follows:

> " and it is only right and proper that the States should get their due share in the increasing resources of the Centre."

ಅಷ್ಟೇ ಅಲ್ಲದೆ ನಮಗೆ ಬ್ಯಾಂಕಿನಿಂದಲಾದರೂ ಸಾಲ ಪಡೆಯುವುದಕ್ಕೆ ಅವಕಾಶ ಮಾಡಿಕೊಡಿ ಎಂದು ಕೇಳಿದ್ದಾರೆ.

> "Apart from this, I would urge the Central Government to give us a measure of freedom to raise more funds from

commercial banks for viable projects like Kali which, judged by any standards are eminently bankable".

I request the hon. the Leader of the Opposition to mark the following:-

" I am aware that while assessing the total resources for the national plan, the planning commission takes into account the availability of funds from the banking institutions also".

ನಮಗೆ ಬ್ಯಾಂಕಿನಿಂದ ಸಾಲ ಪಡೆಯುವುದಕ್ಕೆ ತಾವು ಏಕೆ ಅಡ್ಡಿ ಪಡಿಸುತ್ತಿದ್ದೀರಿ ಎಂದು ಕೇಳಿದ್ದಾರೆ. ಚಿಕ್ಕಪ್ಪ ತಾನೂ ಕೊಡ, ಭಿಕ್ಷೆ ಮಾಡುವುದಕ್ಕೂ ಬಿಡ ಎಂದು ಹೇಳಿದ ಹಾಗಾಯಿತು. ಇದಕ್ಕಿಂತ ಇನ್ನೇನು ಹೇಳಬೇಕು?

Finance Minister is aware of these facts also. He is not blind to this fact. He has already taken note of it.

ಐದನೇ ಪಂಚವಾರ್ಷಿಕ ಯೋಜನೆಗೆ ಐದು ಸಾವಿರ ಕೋಟಿ ರೂಪಾಯಿಗಳನ್ನು ಒದಗಿಸಬೇಕೆಂದು ಹೇಳಿದ್ದಾಗ ಮಾನ್ಯ ಸಚಿವರು ಯಾವ ಯಾವ ಬ್ಯಾಂಕಿನಿಂದ ಎಷ್ಟೆಷ್ಟು ಹಣ ಬರುತ್ತೆ, ಇನ್ನೂ ಯಾವ ಯಾವ ಬಾಬಿನಿಂದ ಎಷ್ಟೆಷ್ಟು ಹಣ ಬರುತ್ತದೆಂಬುದನ್ನೆಲ್ಲಾ ಗಮನದಲ್ಲಿಟ್ಟೇ ಅದನ್ನು ಹೇಳಿದ್ದಾರೆ.

" While this may be so from the macro angle, Credit planning as it now obtains in the country does not adequately take note of the requirements of high priority projects" ಎಂದು ಸಾಕಷ್ಟು ತಿವಿದು ಹೇಳಿದ್ದಾರೆ. ಆ ಕೇಂದ್ರಕ್ಕೂ ಇವರು ಹೈಪ್ರಯಾರಿಟಿ ಪ್ರಾಜೆಕ್ಟ್‌ಗಳಿಗೆ ಹಣ ಬೇಕೆಂದು ಹೇಳಿದ್ದಾರೆ. This is a very powerful argument.

ಶ್ರೀ ಹೆಚ್. ಡಿ. ದೇವೇಗೌಡ:-

ಹಾಗೆ ಜೋರಾಗಿ ಹೇಳಿದರೆ ಆ ವಿ. ಪಿ. ನಾಯಕರಿಗಾದ ಗತಿಯೇ ಇವರಿಗೂ ಆಗುತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಈ ರೀತಿ ಹೇಳುವುದನ್ನು ಬಿಟ್ಟರೆ ವಿರೋಧ ಪಕ್ಷದವರಿಂದ ಇನ್ನೇನು ಹೆಚ್ಚಿಗೆ ಹೇಳುವುದಕ್ಕಾಗುತ್ತದೆ? That is his right to say. If he do not say that much, what other arguments has he against this budget?

Kali and Krishna Projects are definitely high priority projects according to me. There are several other high priority projects

like Mangalore Harbour, Chemicals and Fertillisers. Iron ore Project is also a High Priority project. ಇವೆಲ್ಲಾ ಹೈ ಪ್ರಿಯಾರಿಟಿ ಪ್ರಾಜೆಕ್ಟುಗಳು. ಇವು ರಾಷ್ಟ್ರೀಯ ಹಿತದೃಷ್ಟಿಯಿಂದ ಬಹಳ ಪ್ರಾಮುಖ್ಯವಾದುವು. ಆದುದರಿಂದ ಅವರಿಗೆ ಇಷ್ಟವಿಲ್ಲದಿದ್ದರೂ ಸಹಾಯ ಮಾಡಬೇಕಾಗುತ್ತದೆ. Reluctantly they will have to help us.

> " I do hope that the Government of India and the Planning Commission will give serious consideration to this matter. Similarly while utilising the World Bank assistance and international finances connected with oil, projects of national significance such as Kali, and Krishna project should be kept in view and given the attentionthey deserve". ಎಂದು ಹೇಳಿದ್ದಾರೆ.

ಇದಕ್ಕಿಂತ ಉತ್ತಮವಾಗಿ ನಾನು ಹೇಳುವುದಕ್ಕಾಗುವುದಿಲ್ಲ. ಆದರೆ ವರ್ಲ್ಡ್ ಬ್ಯಾಂಕು ಸಾಲದ ವಿಚಾರ ಆಳ್ವರವರು ಹೇಳಿದರು, ಮಾರ್ಕೆಟ್ ಏರಿಯಾ ಡೆವಲಪ್‌ಮೆಂಟಿಗೆ ವರ್ಲ್ಡ್ ಬ್ಯಾಂಕ್ ಸಾಲ ಕೊಡುವ ವಿಚಾರ ಹೇಳಿದರು. ಪ್ರಿಯಾರಿಟಿ ವಿಚಾರ ನಾವು ಮಾತನಾಡುತ್ತೇವೆ, ಹಣಕಾಸಿನ ಸಚಿವರೂ ಹೇಳುವರು. ಆದರೆ ವರ್ಲ್ಡ್ ಬ್ಯಾಂಕಿನ ಸಾಲವನ್ನು ಮಾರ್ಕೆಟ್ ಡೆವಲಪ್‌ಮೆಂಟಿಗೆ ಹಾಕಬೇಕೋ ಅಥವಾ ಕಾಳಿನದಿ ಯೋಜನೆಗೆ ಹಾಕಬೇಕೋ, ನನಗೆ ಅರ್ಥವಾಗುವುದಿಲ್ಲ. ಇಂಥ ಅವಕಾಶವಿದ್ದರೆ ಕಾಳಿನದಿ ಯೋಜನೆಗೆ, ಅಪ್ಪರ್ ಕೃಷ್ಣ ಯೋಜನೆಗೆ ಸಹಾಯ ಮಾಡಿ ಎಂದು ಹೇಳಬೇಕಾಗುತ್ತದೆ. ನನ್ನ ಹತ್ತಿರ ಸ್ವಲ್ಪ ಹಣವಿದ್ದರೆ ಮಳೆ ಬಂದು ನೀರು ಬಂದಿದ್ದರೆ ಅದನ್ನು ಉಪಯೋಗಮಾಡಿ ವ್ಯವಸಾಯ ಮಾಡಬೇಕೇ ಅಥವಾ ಮನೆ ಕಟ್ಟಬೇಕೇ? ಆದುದರಿಂದ ಹೈ ಪ್ರಿಯಾರಿಟಿಯನ್ನು ನಿರ್ಧರಿಸುವಾಗ ಸರಕಾರದವರು ಹೆಚ್ಚು ಗಮನ ಕೊಡಬೇಕು. ಪ್ರಿಯಾರಿಟಿ ಹೇಗೆ ನಿರ್ಧಾರವಾಗುತ್ತದೆ ಎಂದರೆ ಸಚಿವ ಸಂಪುಟದಲ್ಲಿ ಯಾರದು ಪ್ರಭಾವ ಹೆಚ್ಚೋ ಅವರದೇ ಹೈ ಪ್ರಿಯಾರಿಟಿ. ಇದಾಗಬಾರದು.

ಇನ್ನೊಂದು ವಿಚಾರ. ಹಣಕಾಸಿನ ವಿಚಾರ ಬಿಟ್ಟು ಮುಂದಕ್ಕೆ ಹೋಗುತ್ತೇನೆ. ಹಣಕಾಸಿನ ಸಚಿವರನ್ನು ಮತ್ತು ನಮ್ಮ ಸರಕಾರದವರನ್ನು ಪ್ರಶಂಸಿಸಿ ಮಾಡಬೇಕಾದ ವಿಚಾರ. ಈ ನಮ್ಮ ಸರಕಾರದವರೇನು ಮಾಡಿದ್ದಾರೆ? ಏಕೆ ಅದನ್ನು ಮೆಚ್ಚಬೇಕು? ಎನ್ನಬಹುದು. ನಮ್ಮ ಮಾನ್ಯ ಸ್ನೇಹಿತರಾದ ರಾಜಶೇಖರಮೂರ್ತಿಯವರ ವಿಚಾರದಲ್ಲಿ ಪ್ರಯತ್ನ ಮಾಡಿ ಮಾತನಾಡಿಸಬೇಕು, ಅವರೂ ಸಹ ಇದು ಸರಿಯೆಂದು ಒಪ್ಪುವರು. ಅವರ ಮನೋಭಾವ ನನಗೆ ಗೊತ್ತಿದೆ. ಮೂರು ವರ್ಷದಿಂದ ನಾವು ಬಹಳ ಕಷ್ಟದಲ್ಲಿದ್ದೆವು, ಬರಗಾಲವಿತ್ತು, ಕ್ಷಾಮ ಬಂದರೂ ಹೋಗಿ ನೋಡುವುದಕ್ಕೆ ಆಗಲಿಲ್ಲ, ಆದರೆ ವಿಚಾರ ಕೇಳಿ ತಿಳಿದುಕೊಂಡೇ ಗುಲ್ಬರ್ಗ, ಬಿಜಾಪುರ ಮುಂತಾದ ಕಡೆ ಕುಡಿಯಲು ನೀರಿಲ್ಲದೆ ಲಾರಿಗಳ ಮೂಲಕ 70-80 ಮೈಲಿಗಳಿಂದ ಒದಗಿಸಬೇಕಾಯಿತು. ಅಂದರೆ ಎಂಥ ಭೀಕರವಾದ ಕ್ಷಾಮ ಬಂದಿತ್ತೆಂಬುದು ಅರ್ಥವಾಗುವುದು. ಆ ಕ್ಷಾಮ ಬಂದಾಗ ನಮ್ಮ ಪ್ರಯತ್ನ ಅದರ ನಿವಾರಣೆಗೆ ಎಷ್ಟು ಮಟ್ಟಿಗೆ ಆಗಿದೆ? ನಮ್ಮ ರಿಸೋರ್ಸ್

ಮೊಬಿಲೈಜೇಷನ್ ವಿಚಾರ ನೋಡಬಹುದು. ದೇವೇಗೌಡರು ಹೇಳಿದ್ದು ಅಪ್ಯಾಯಮಾನವಾಗಿದೆ. 51 ಕೋಟಿ ರೂಪಾಯಿ. 73-74ರಲ್ಲಿ, 74-75ರಲ್ಲಿ 99 ಕೋಟಿ, 75-76ರಲ್ಲಿ 119-120 ಕೋಟಿ ರೂಪಾಯಿ ರಿಸೋರ್ಸಸ್ ಮೊಬಿಲೈಜೇಷನ್. ಇಷ್ಟು ಹಣ ತಂದು ಏನು ಮಾಡಿದರು? ದುರ್ವಿನಿಯೋಗವಾಯಿತು, ಸರಿಯಾಗಿ ಖರ್ಚುಮಾಡಲಿಲ್ಲ ಎಂದು ಹೇಳಿದರು. ಈ ಹಣವನ್ನು ಇಂಥ ಕಠಿಣ ಕಾಲದಲ್ಲಿ ನಮ್ಮ ಅಭಿವೃದ್ಧಿ ಕಾರ್ಯಗಳಿಗೆ ಯೋಜನೆಯಲ್ಲಿ ಸೇರಿರುವ ಕಾರ್ಯಗಳಿಗೆ ಖರ್ಚು ಮಾಡಲು ಒದಗಿಸಿರುವುದು ಮೆಚ್ಚತಕ್ಕ ವಿಚಾರ ಹೇಳುತ್ತಿಲ್ಲ. 21 ಕೋಟಿ ರೂಪಾಯಿ ಬರುತ್ತದೆ, ಕೊಡುತ್ತಾರೆ ಎಂದಿದ್ದರು. ಕೊಡಲಿಲ್ಲ ಎನ್ನಬಹುದು. ಅನೇಕ ಸಾರಿ ಬಜೆಟ್ ಮಾಡುವಾಗ.

ಶ್ರೀ ಹೆಚ್. ಡಿ. ದೇವೇಗೌಡ:-

ಕರೆಸ್ಪಾಂಡಿಂಗ್ ಮ್ಯಾಚಿಂಗ್ ಗ್ರಾಂಟ್ ಕೇಂದ್ರ ಸರ್ಕಾರದಿಂದ ಬರಬೇಕೇ? ಬೇಡವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಕೊಡುವುದು ಬಿಡುವುದು ಅವರಿಗೆ ಸೇರಿದ್ದು. ಕೇಳುವುದಕ್ಕಾದರೂ ಅಧಿಕಾರ ಬೇಡವೇ? 21 ಕೋಟಿ ನಿರೀಕ್ಷೆ ಮಾಡಿದ್ದೆವು. ನಿರೀಕ್ಷೆ ಮಾಡಿದ್ದೆಲ್ಲಾ ನಮ್ಮ ಕೈಗೆ ಬಂದರೆ ಸ್ವರ್ಗ ಭೂಮಿಗೆ ಇಳಿಸಬಹುದು. ಇಂಡಿಯಾ ಸರಕಾರದವರು 21 ಕೋಟಿ ಕೊಡುತ್ತೇವೆಂದು ಹೇಳಿದ್ದರು. ಅವರಿಗೆ ಕಷ್ಟವಾಗಿ ಕೊಡಲಿಲ್ಲ.

ಶ್ರೀ ಹೆಚ್. ಡಿ. ದೇವೇಗೌಡ:-

ಹೇಳಿದ್ದೆಲ್ಲಾ ಕೊಡುವುದು ಬೇಡ, ಬಿಹಾರ, ಯು. ಪಿ. ಮತ್ತಿತರ ರಾಜ್ಯಗಳಿಗೆ ಮ್ಯಾಚಿಂಗ್ ಗ್ರಾಂಟ್ ಕೊಡುವಾಗ ಯಾವ ತತ್ವವನ್ನು ಅಪ್ಲೈ ಮಾಡುವರೋ ಅದನ್ನೇ ಕರ್ನಾಟಕಕ್ಕೂ ಅಪ್ಲೈ ಮಾಡಬೇಕು, ನಾವು ಅನಾಥ ಶಿಶುವಾಗಬಾರದು ಎಂದು ಹೇಳಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಅದು ಸರಿ. ನಮ್ಮ ಬಂಧುಗಳೊಬ್ಬರು ಬಿಹಾರಿಗೆ ಸರಕಾರಿ ಕೆಲಸದ ಮೇಲೆ ಹೋಗಿದ್ದರು. ಅವರು ಅಲ್ಲಿನ ಪರಿಸ್ಥಿತಿ ನೋಡಿದರು, ವರ್ಲ್ಡ್ ಹೆಲ್ತ್ ಆರ್ಗನೈಜೇಷನ್ನಿನವರು ಕರೆದುಕೊಂಡು ಹೋಗಿದ್ದರು. ಅವರು ಹೇಳುವುದನ್ನು ಕೇಳಿದರೆ ನಮ್ಮ ಮಟ್ಟಕ್ಕೆ ಬರಲು ಬಹಳ ಕಾಲ ಬೇಕಾಗ ಬಹುದೆಂದು ಕಾಣುತ್ತದೆ. ನಮ್ಮ ಪಕ್ಷ ಸಾಕಷ್ಟು ಅಭಿನಂದನಾರ್ಹ ರೀತಿಯಲ್ಲಿ ನಡೆದಿರುವುದಕ್ಕೆ ಸಂತೋಷಪಡಬೇಕು. ಇದು ಹಣಕಾಸಿನ ವಿಚಾರ.

ನಾವು ನೀವು ಸಂತೋಷಪಡಬೇಕಾದ್ದು. ಇಂದಿನ ಹಣಕಾಸಿನ ವಿಚಾರ. ಕಾಳೀ ನದಿ ಯೋಜನೆ ಮುಗಿಯಬೇಕು ಎನ್ನುವುದರಲ್ಲಿ ಎಲ್ಲರೂ ಒಂದೇ ಅಭಿಪ್ರಾಯವೆಂದು ಹೇಳಿದೆ. ಕೇಂದ್ರ ಸರ್ಕಾರದವರು ಇದಕ್ಕೆ 1973-74ರಲ್ಲಿ ಹಣ ಕೊಟ್ಟಿದ್ದಾರೆ. ಹೋದ ವರ್ಷ ಏಳೂವರೆ ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ. ಈ ವರ್ಷವೂ ಕೂಡ ಅಲ್ಲಿಂದ ಹಣವನ್ನು ನಿರೀಕ್ಷಣೆ

ಮಾಡುತ್ತಾ ಇದ್ದೇವೆ. ಈ ವರ್ಷ 39 ಕೋಟಿ ರೂಪಾಯಿಗಳನ್ನು, ಆದರೂ ನಾವು ಈ ಯೋಜನೆಗೆ ಖರ್ಚು ಮಾಡಬೇಕಾಗುತ್ತದೆ. ನಮ್ಮ ಸರಕಾರ ಇದಕ್ಕೆ 24 ಕೋಟಿ ರೂಪಾಯಿಗಳನ್ನು ಒದಗಿಸಿಕೊಂಡಿದೆ. ಇಂಡಿಯಾ ಸರ್ಕಾರದಿಂದ 15 ಕೋಟಿ ರೂಪಾಯಿ ಬರಬಹುದು ಎಂದು ನಿರೀಕ್ಷಣೆ ಮಾಡುತ್ತಿದ್ದೇವೆ. ಇದಕ್ಕೆ ನಾವು ಪ್ರಾಶಸ್ತ್ಯ ಕೊಡದೆ ಇಲ್ಲ. 24 ಕೋಟಿ ರೂಪಾಯಿಗಳನ್ನು ಕಾಳೀ ನದಿ ಯೋಜನೆಗೆ ನಮ್ಮ ಬಡ್ಜೆಟ್ಟಿನಲ್ಲಿ ಒದಗಿಸತಕ್ಕಂಥ ಒಂದು ಶಕ್ತಿಯನ್ನು ನಮ್ಮ ರಾಜ್ಯ ಸರ್ಕಾರದವರು ಪಡೆದಿರುವುದು, ನಮ್ಮ ಹಣಕಾಸಿನ ಪರಿಸ್ಥಿತಿ ಸುಭದ್ರವಾಗಿರುವುದಕ್ಕೆ ಕಾರಣವಾಗಿದೆ.

ಶ್ರೀ ಕೆ. ಎಚ್. ಹನುಮೇಗೌಡ:-

ಅಭಿವೃದ್ಧಿ ಕಾರ್ಯಗಳನ್ನೆಲ್ಲಾ ನಿಲ್ಲಿಸಿ ಬಿಟ್ಟು ಇನ್ನೂ '20' ಕೋಟಿ ರೂಪಾಯಿಗಳನ್ನು ಇದಕ್ಕೆ ಕೊಡಬಹುದು.

ಶ್ರೀ ಕೆ. ಪುಟ್ಟಸ್ವಾಮಿ:-

ಸರ್ಕಾರದ ಕೆಲಸ. ವಿದ್ಯಾವಂತ ತರುಣ ತರುಣಿಯುರಿಗೆ ಕೆಲಸವನ್ನು ಒದಗಿಸಿಕೊಡುವುದೂ ಒಂದು ಕೆಲಸವಾಗಿದೆ.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಅದಕ್ಕೆ ಶ್ರೀಮತಿ ಮನೋರಮ ಮಧ್ವರಾಜ ಅವರನ್ನು ಮಂತ್ರಿಯಾಗಿ ತೆಗೆದುಕೊಂಡಿದ್ದಾರೆ.

ಶ್ರೀ ಕೆ. ಪುಟ್ಟಸ್ವಾಮಿ:-

ಅಭಿವೃದ್ಧಿ ಕಾರ್ಯಗಳ ದೃಷ್ಟಿಯಿಂದ ಇದು ಅಭಿವೃದ್ಧಿಗೆ ಸಾಧನೆಯಾಗತಕ್ಕ ಆಯವ್ಯಯದ ಅಂದಾಜು ಎನ್ನುವುದು ನನಗೆ ಸ್ಪಷ್ಟವಾಗಿದೆ. ಅದಕ್ಕೆ ನಾನು ಇದನ್ನು ಮನಸಾರೆ ಸ್ವಾಗತ ಮಾಡುತ್ತೇನೆ. ನಾನು ಇದನ್ನು ಹೇಳಿದಾಗ, ತಾವುಗಳು ಏನೋ ಪುಟ್ಟಸ್ವಾಮಿಯವರು ಸರ್ಕಾರವನ್ನು ಮೆಚ್ಚುತ್ತಾರೆ, ಬಹಳ ಸಪೋರ್ಟ್ ಮಾಡುತ್ತಾರಲ್ಲ ಎಂದು ಹೇಳಬಹುದು. ಒಂದು ಮಾತನ್ನು ಹೇಳುತ್ತೇನೆ. ನಮ್ಮ ಪಕ್ಷದಲ್ಲಿದ್ದು, ಅಲ್ಲಿರತಕ್ಕವರೂ ಈ ವಿಚಾರವನ್ನು ಹೇಳಬೇಕಾಗಿದೆ; ಎಂದು.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಕಾಲಿಲ್ಲದವರಿಗೆ ಮರಗೋಲು ಕೊಟ್ಟು ನಡೆಸುತ್ತಿದ್ದೀರಿ.

ಶ್ರೀ ಕೆ. ಪುಟ್ಟಸ್ವಾಮಿ:-

ನಮ್ಮ ಪಕ್ಷದಲ್ಲಿ ನಾವು ಹೆಚ್ಚಿನ ಆದ್ಯತೆ ಕೊಡುವುದು, ನಮ್ಮ ಇಂಟರ್ನನಲ್ ಡೆಮಾಕ್ರೆಸಿಗೆ. ಇಂಥ ವಿಚಾರದಲ್ಲಿ ಭಿನ್ನಾಭಿಪ್ರಾಯ ಅನೇಕರಲ್ಲಿ ಇರುತ್ತದೆ. ನಾವೆಲ್ಲರೂ ಕುಳಿತುಕೊಂಡು ಚರ್ಚೆ ಮಾಡುತ್ತೇವೆ, ಒಬ್ಬರಿಗೊಬ್ಬರು ಘರ್ಷಣೆಯಾಗುವಂಥ ಮಟ್ಟದಲ್ಲಿ ನಮ್ಮ ಚರ್ಚೆಯಾಗಬಹುದು, ಅನಂತರ ಒಂದು ತೀರ್ಮಾನಕ್ಕೆ ಬರುತ್ತೇವೆ. ಇದರಿಂದ ಒಳ್ಳೆಯ

ತೀರ್ಮಾನಕ್ಕೆ ನಾವು ಬರುತ್ತೇವೆ. ನಿಮ್ಮ ಮುಂದೆ ಬರತಕ್ಕ ತೀರ್ಮಾನಗಳು, ನಮ್ಮಲ್ಲಿ ಘರ್ಷಣೆಯಾಗಿ, ಒಬ್ಬರಿಗೊಬ್ಬರು ವಿಚಾರ ವಿನಿಮಯ ಮಾಡಿ, ಆಮೇಲೆ ಇಲ್ಲಿ ಬರತಕ್ಕವು. ನಮ್ಮ ಘರ್ಷಣೆಗಳು ಪತ್ರಿಕೆಗಳಲ್ಲಿ ಬರುತ್ತವೆ.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಆಲಿಂಗನಾವಸ್ಥೆಗೆ ಬಂದಿದೆ.

ಶ್ರೀ ಕೆ. ಪುಟ್ಟಸ್ವಾಮಿ:-

ನಮ್ಮ ಒಳಗಡೆ ಭಿನ್ನಾಭಿಪ್ರಾಯ ಬಂದರೆ ಅದು ನಿಜವಾಗಲೀ, ಇವರಲ್ಲಿ ಭಿನ್ನಾಭಿಪ್ರಾಯ ಬೆಳೆಯಲಿ ಎನ್ನುವುದು ನಿಮ್ಮ ಆಶೆ. ಇದು ವಾಸ್ತವ. ಅದಕ್ಕೆ ನಿಮ್ಮನ್ನು ಏನೂ ಆಕ್ಷೇಪ ಮಾಡುವುದಿಲ್ಲ. ನಮ್ಮಲ್ಲಿ ಇಂಟರ್ನಲ್ ಡೆಮಾಕ್ರಸಿ ಇದೆ. ಆ ಕಾರಣದಿಂದ ಸರ್ಕಾರದ ರೀತಿನೀತಿಗಳಿಗೆ ಬದ್ಧರಾಗಿರತಕ್ಕವರು ನೀತಿಗಳನ್ನು ಒಪ್ಪಿ ಕಾಂಗ್ರೆಸ್ಸಿನಲ್ಲಿರುವುದು. ಅದಕ್ಕೆ ನಾವು ಸಂಪೂರ್ಣ ಬೆಂಬಲ ಕೊಡತಕ್ಕವರು. ಆದರೆ ಆಡಳಿತ ನಡೆಯುವಾಗ ಅಲ್ಲಿ ಇಲ್ಲಿ ದೋಷಗಳು ಇದ್ದರೆ, ಅವುಗಳನ್ನು ಎತ್ತಿ ಹೇಳಬಾರದು ಎಂದು ಯಾರೂ ನಿರೀಕ್ಷಣೆ ಮಾಡುವುದಿಲ್ಲ. ಹಾಗೆಯೇ ಆಡಳಿತದಲ್ಲಿರತಕ್ಕ ದೋಷಗಳನ್ನು ನೀವು ಹೊರಗೆ ಹಾಕದಿದ್ದರೆ ಕರ್ತವ್ಯ ಲೋಪ ಮಾಡಿದಂತಾಗುತ್ತದೆ.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಪಕ್ಷದ ಸದಸ್ಯರಲ್ಲದವರಾದ ಷೇಕ್ ಅಬ್ದುಲ್ಲಾ ಅವರನ್ನು ಮುಖ್ಯಮಂತ್ರಿಗಳನ್ನಾಗಿ ಮಾಡಿದ್ದೀರಿ.

ಶ್ರೀ ಕೆ. ಪುಟ್ಟಸ್ವಾಮಿ:-

ಇನ್ನೂ ಹತ್ತು ವರ್ಷಗಳಾದ ಮೇಲೆ ನಮ್ಮ ಪಕ್ಷದ ನೀತಿಯನ್ನು ನೀವು ತಿಳಿದುಕೊಳ್ಳಬಹುದು. ಇನ್ನು ನಮ್ಮ ವಿರೋಧ ಪಕ್ಷದ ನಾಯಕರು ಹೇಳಿದ ಇನ್ನೊಂದು ವಿಚಾರಕ್ಕೆ ಬರುತ್ತೇನೆ. ವಿರೋಧಪಕ್ಷದ ನಾಯಕರು ಅವರ ಭಾಷಣವನ್ನು ಸಮಾಪ್ತಿ ಮಾಡುವಾಗ ಮುಖ್ಯಮಂತ್ರಿಗಳ ಮೇಲೆ ನೇರವಾದಂಥ ಆಪಾದನೆಗಳನ್ನು ಮಾಡಿದ್ದಾರೆ. ಆಪಾದನೆಗಳನ್ನು ಮಾಡುವುದಕ್ಕೆ ಅವರು ಸ್ವತಂತ್ರರು. ಅವರು ಹತ್ತಿರ ಅಂಕಿಅಂಶಗಳು ಇರುವಾಗ ಅವರು ಆ ರೀತಿಯ ಆರೋಪಗಳನ್ನು ಹೊರಿಸದೇ ಹೋದರೆ ಅವರು ತಪ್ಪಿತಸ್ಥರಾಗುತ್ತಾರೆ. ಅದರ ಮೇಲೆ ನನ್ನ ಆಕ್ಷೇಪಣೆ ಏನೂ ಇಲ್ಲ. ಅವರು ಯಾವ ರೀತಿಯಲ್ಲಿ ಮಾಡಿದರು? ಅವರು ಈ ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ, ಇದು ನನಗೂ ಮುಖ್ಯಮಂತ್ರಿಗಳಿಗೂ ನೇರವಾಗಿ ಸಂಬಂಧಪಟ್ಟದ್ದು ಎಂದು ಹೇಳಿದರು. ಅವರು ಸವಾಲು ಹಾಕಿದ್ದನ್ನು ನಾನು ಒಪ್ಪಿಕೊಂಡಿದ್ದೇನೆ. ನಾನು ಅವರಲ್ಲಿ ನಮ್ರವಾಗಿ ವಿನಂತಿ ಮಾಡಿಕೊಳ್ಳುತ್ತೇನೆ. ಇದು ಅವರಿಬ್ಬರಿಗೆ ನೇರವಾಗಿ ಸಂಬಂಧಪಟ್ಟಿದ್ದಲ್ಲ, ಅವರು ವಿರೋಧ ಪಕ್ಷದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ. ಆಡಳಿತ

ಪಕ್ಷದ ರೀತಿ ನೀತಿಗಳನ್ನು ಮುಖ್ಯಮಂತ್ರಿಗಳು ಪ್ರತಿಪಾದಿಸುತ್ತಾರೆ. ಇದು ಏನೇ ಇದ್ದರೂ ನಾವೂ ಪ್ರತಿನಿಧಿಗಳೇ ವಿನಹ ಸ್ವತಂತ್ರರಲ್ಲ. ನಾವು ಪ್ರತಿನಿಧಿಗಳು ಎಂದು ಒಪ್ಪಿಕೊಂಡ ಮೇಲೆ ನಿಮ್ಮಲ್ಲಿರತಕ್ಕ ಅಂಕಿಅಂಶಗಳನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳುವುದಕ್ಕೆ ತಾವು ಅವಕಾಶ ಕೊಡಬೇಕು. ನಿಮ್ಮನ್ನು ನಾವು ಕಡ್ಡಾಯ ಮಾಡುವುದಕ್ಕಾಗುವುದಿಲ್ಲ. ಇದು ನಿಮ್ಮಿಬ್ಬರ ಸ್ವಾತಂತ್ರ್ಯಕ್ಕೆ ಸೀಮಿತವಾದುದಲ್ಲ. ಸಭೆಯವರು ಎಲ್ಲಾ ವಿಚಾರವನ್ನು ತಿಳಿದುಕೊಳ್ಳುವುದಕ್ಕೆ ಹಕ್ಕು ಇದೆ. ಒಂದು ವೇಳೆ ತಾವು ಅದನ್ನು ನಿರಾಕರಿಸಿದರೆ, ಐ ಪ್ರೆಸ್ಯೂಮ್ ದಟ್ ಯು ಹಾವ್ ನೊ ಎವಿಡೆನ್ಸ್. ದಟ್ ಈಸ್ ಮೈ ಪ್ರೆಸ್ಯೂಮ್ಪ್ಷನ್. ಆದ್ದರಿಂದ ಇದು ಇಬ್ಬರಿಗೂ ಸೀಮಿತವಾದುದಲ್ಲ. ಈ ವಿಚಾರವನ್ನು ಇಲ್ಲಿಗೆ ಬಿಡತಕ್ಕದ್ದೂ ಸರಿಯಲ್ಲ. ನಾವು ಆಡಳಿತ ನಡೆಸತಕ್ಕವರು. ಇದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ, ನಮ್ಮ ಸ್ನೇಹಿತರೊಬ್ಬರು ಒಂದು ಸಾರಿ ಒಂದು ಮಾತನ್ನು ಹೇಳಿದರು. ಯಾರೋ ಕಕ್ಷಿಗಾರರು ಬಂದು ಒಂದು ಲಾಯರ್ ನೋಟೀಸ್ ಕೊಡಿಸಿದರು. ನೋಟೀಸ್ ನೋಡಿದರೆ, ಉದ್ದಕ್ಕೆ ಮೂರು ಪೇಜು ಇದೆ, ಅದರಲ್ಲಿ ಯಾವ ವಿಚಾರವೂ ಸ್ಪಷ್ಟವಾಗಿರಲಿಲ್ಲ. ಎಲ್ಲಾ ಮುಗುಂ ಆಗಿತ್ತು. ಇದಕ್ಕೆ ಒಂದು ರಿಪ್ಲೈ ನೋಟೀಸ್ ಕೊಡಿ ಎಂದರು, ಆಗ ಲಾಯರ್ ಅವರು ಓದಿನೋಡಿ, ಬೆಳಿಗ್ಗೆ ಬನ್ನಿ ನೋಟೀಸ್ ಕೊಡುತ್ತೇನೆಂದು ಹೇಳಿದರು; ಆಮೇಲೆ ಅವರು ಒಂದೇ ಒಂದು ಸೆಂಟೆನ್ಸ್‌ನಲ್ಲಿ ಉತ್ತರ ಕೊಟ್ಟರು, ಏಕೆಂದರೆ, ನಿಮ್ಮ ಮುಗುಂ ನೋಟೀಸ್‌ಗೆ ನನ್ನ ತಗುಂ ಜವಾಬು ಎಂದು. ಅದಕ್ಕೆ ನಾನು ಹೇಳಿದ್ದು ನಿಮಗೆ ತಗುಂ ಉತ್ತರ ಎಂದು ಆದ್ದರಿಂದ ತಾವು ನಿಮ್ಮ ಬತ್ತಳಿಕೆಯಲ್ಲಿ ಎಲ್ಲಾ ಇಟ್ಟುಕೊಳ್ಳುವುದು ಅಲ್ಲ, ನಿಮ್ಮಲ್ಲಿ ಏನು ರಿಕಾರ್ಡ್ಸ್ ಏನು ಇವೆ, ಅದನ್ನು ಇಡಿ. ಪ್ಲೇಸ್ ಯುವರ್ ರೆಕಾರ್ಡ್ಸ್?

ನಾನು ಹೇಳುತ್ತೇನೆ ನಮ್ಮ ಪಕ್ಷದವರು ಜವಾಬ್ದಾರರು ಎಂದು ಯಾವುದು ಆಪಾದನೆ ಮಾಡಿದ್ದಾರೆ, ಈ ರೀತಿ ಆಪಾದನೆ ಮಾಡಿದಾಗ ನಮ್ಮಲ್ಲಿ ಕೆಲವು ನಿರ್ದಿಷ್ಟವಾದ ವಿಚಾರಗಳು ಪ್ರತಿಯೊಬ್ಬರ ಜೇಬಿನಲ್ಲಿರತಕ್ಕಂಥ ವಿಚಾರಗಳೇನು ಅಲ್ಲ. ಪ್ರತಿಯೊಬ್ಬರ ತಲೆಯಲ್ಲೂ ಉಳಿದಿರತಕ್ಕಂಥ ವಿಚಾರಗಳೇನೂ ಅಲ್ಲ. ಪ್ರತಿಯೊಬ್ಬರಿಗೂ ವಿಷಯ ಜ್ಞಾಪಕಕ್ಕೆ ಬರುತ್ತದೆ ಎನ್ನತಕ್ಕಂಥದ್ದಲ್ಲ. ಅದು ಎಲ್ಲಾ ರಿಕಾರ್ಡ್‌ನಲ್ಲಿ ಇರುತ್ತದೆ. ರಿಕಾರ್ಡ್ ನಮಗೇನೂ ಸುಳ್ಳು ಹೇಳುವುದಕ್ಕೆ ಆಗುವುದಿಲ್ಲ. ರೆಕಾರ್ಡ್ಸ್ ವಿಲ್ ನೆವರ್ ಲೈ. ಯು ಟೇಕ್ ಇಟ್ ಫ್ರಮ್ ಮಿ. ಅದರ ಮೂಲಕ ನಿಮಗೆ ಸೂಕ್ತವಾದಂಥ ಸಮಯದಲ್ಲಿ ಕೊಡುತ್ತಾರೆ. ಅದರಲ್ಲಿ ನೀವು ಏನೂ ಆಲೋಚನೆ ಮಾಡಬೇಕಾದ್ದು ಇಲ್ಲ. ಸೂಕ್ತವಾದಂಥ ಜವಾಬು, ಸೂಕ್ತವಾದಂಥ, ಸಮಯ ಎಂದರೆ ನನಗೆ ಒಬ್ಬ ಮಂತ್ರಿಗಳು ಜ್ಞಾಪಕಕ್ಕೆ ಬರುತ್ತಾರೆ. ಅವರು ಯಾರೆಂದರೆ ಶ್ರೀಮಾನ್ ಚನ್ನಬಸಪ್ಪನವರು. ಅವರಿಗೆ ನಾವು ಮಿನಿಸ್ಟರ್ ಫಾರ್ ಪಿ. ಡಬ್ಲು. ಡಿ. ಎನ್ನುವ ಬದಲು "ಮಿನಿಸ್ಟರ್ ಫಾರ್ ಅಪ್ರೊಪ್ರಿಯೇಟ್ ಆಕ್ಷನ್ ಅಟ್ ಅಪ್ರೊಪ್ರಿಯೇಟ್ ಟೈಮ್" ಅಂತ ಹೇಳಬಹುದು. ಏತಕ್ಕೆಂದರೆ ಅವರು ಸುಮ್ಮನೇ ತಮಾಷೆಗೆ ಹೇಳುತ್ತಾರೆಂದು ಅಲ್ಲ. ಅವರು ಈ ಸಭೆಯಲ್ಲಿ ಅನೇಕ ಗುರುತರವಾದಂಥ ಹೇಳಿಕೆಯನ್ನು ಮಾಡಿ ಆ ಹೇಳಿಕೆಗಳ ಆಧಾರದ ಮೇಲೆ ಮುಂದಿನ ಕಾರ್ಯಕ್ರಮವನ್ನು ಅವರು ತೆಗೆದುಕೊಂಡಿಲ್ಲ. ಜಡ್ಜಮೆಂಟನ್ನು ಬೇಕಾದಷ್ಟು ಬರೆದರು. ಆದರೆ ಆಪರೇಟಿವ್ ಪ್ರೋಷನ್ - ಇಲ್ಲ, ಶರಾವತಿ ಬಗ್ಗೆ ಪತ್ರಿಕೆಯಲ್ಲಿ ಓದಿ

ನೋಡಿದಾಗ ದಂಗು ಬಡಿದು ಹೋಗಿತ್ತು. 136 ಕೋಟಿ ರೂಪಾಯಿಗಳು ಶರಾವತಿಯಲ್ಲಿ ಕೊಚ್ಚಿ ಹೋಯಿತೇನೋ ಎಂದು ಅನ್ನಿಸಿಬಿಟ್ಟಿತು. ಆ ಮೇಲೆ ಓ ಈಸ್ ಫಾಂಡ್ ಆಫ್ ಪ್ಲೇಸಿಂಗ್ ವೈಟ್ ಪೇಪರ್ಸ್. - - - ಆದರೆ ಅವು ಬ್ಲಾಕ್‌ನಲ್ಲಿಯೇ ಪ್ರಿಂಟ್ ಆಗಿರುತ್ತದೆ. ಓ ಕಾಲ್ಸ್ ದೆಮ್ ವೈಟ್.ಬಟ್, ಓ ನೆವರ್ ಟುಕ್ ಎನಿ ಆ್ಯಕ್ಷನ್. ಅವಕಾಶಗಳನ್ನು ನಾವು ಆ ರೀತಿ ಉಪಯೋಗಿಸಬಾರದು. ಅವರು ಆ ರೀತಿ ಹೇಳುವುದರಿಂದ ನಾವು ಅವರಿಗೆ "ಅಪ್ರೋಪ್ರಿಯೆಟ್ ಆಕ್ಷನ್ ಅಟ್ ಅಪ್ರೋಪ್ರಿಯೇಟ್ ಟೈಮ್" ಎಂದು ಹೇಳಿ ಗುಲ್ಲೆಬ್ಬಿಸುವುದು. ನೀವು ಒಬ್ಬರ ಮೇಲೆ ಆಪಾದನೆ ಮಾಡುವಾಗ, ಆ ಆಪಾದನೆ ನನ್ನ ಮೇಲೆ ಬಂದರೆ ಏನು ಎನ್ನುವುದನ್ನು ನೀವು ಆಲೋಚನೆ ಮಾಡಬೇಕು. ಆದುದರಿಂದ ಈ ಪ್ರಶ್ನೆಯನ್ನು ಪದೇ ಪದೇ ಅವರಿಗೆ ಅನೇಕ ಸಭೆಗಳಲ್ಲಿ, ಎಲ್ಲಾ ಕಡೆಯಲ್ಲೂ ಹಾಕಿದ್ದಾರೆ. ಐ ಡೋಂಟ್ ನೋ ವೆದರ್ ದ ಅಪ್ರೋಪ್ರಿಯೇಟ್ ಟೈಮ್ ವುಡ್ ಕಮ್ ವಿತ್‌ಇನ್ ಎ ರಿಜನಬಲ್ ಟೈಮ್ ಆಟ್ ಆಲ್.

ಶ್ರೀ ಹೆಚ್. ಡಿ. ದೇವೇಗೌಡ:-

ಒಂದೇ ಒಂದು ಕ್ಲಾರಿಫಿಕೇಷನನ್ನು ಕೇಳಿ ಬಿಡುತ್ತೇನೆ. ತಮ್ಮ ಆರ್ಗ್ಯುಮೆಂಟನ್ನು ಕೇಳಿದೆ. ಮಗುಂ ಜವಾಬಿಗೆ ತಗುಂ ಜವಾಬು ಎಂದು ತಾವು ಹೇಳಿದಿರಿ. ನಮ್ಮದು ಇಂಟರ್‌ನಲ್ ಡೆಮಾಕ್ರಸಿ ಎಂದು ಹೇಳಿ ಹೊಡೆದಾಡಿಕೊಂಡು ಓಪನ್ ಡೆಮಾಕ್ರಸಿಯಲ್ಲಿ ಬರುತ್ತೀರಿ, ಬಂದಾಗ ಕಿಸ್ ಮಾಡಬೇಕಾಗುತ್ತದೆ. ನಿಮ್ಮ ಆರ್ಗ್ಯುಮೆಂಟನ್ನು ನಿಮಗೇ ತಿರುಗಿಸಿ ಬಿಡುತ್ತೇನೆ. ಇವತ್ತು ಶ್ರೀಮಾನ್ ಪುಟ್ಟಸ್ವಾಮಿಯವರಿಗೆ ತಮ್ಮ ಮೂಲಕ ಒಂದು ಪ್ರಶ್ನೆ ಕೇಳುತ್ತೇನೆ. ದಯಮಾಡಿ ಅದಕ್ಕೆ ಅವರು ಉತ್ತರ ಕೊಟ್ಟರೆ ಸಾಕು, ಮಾನ್ಯ ಭಾಸ್ಕರ ಸೇಮಿತ ಬಗ್ಗೆ ಸ್ಪೀಕರ್‌ರವರು ಅಡ್ಜರ್ನ್‌ಮೆಂಟ್ ಮೋಷನ್‌ನ್ನು ನಿಲುವಳಿ ಸೂಚನೆಯಾಗಿ ಕೊಟ್ಟಿದ್ದು ನಮ್ಮ ನಿಮ್ಮ ಅನುಭವದ ಇತಿಹಾಸದಲ್ಲಿಯೇ ಇಲ್ಲ. ಆದರೆ ಅಂತಿಮವಾಗಿ ಈ ಸಭೆಯಲ್ಲಿ ಹೇಗೆ ಮುಕ್ತಾಯವಾಯಿತು ಎಂಬುದು ಇಡೀ ಸಭೆಗೇ ಗೊತ್ತಿದೆ. ಈಗ ತಾವು ಹೇಳುತ್ತೀರಿ, ನಾನು ಬಡ್ಜೆಟ್‌ನ ಬಗ್ಗೆ ಮಾತನಾಡುವಾಗ ನೋಡಿದಂಥ ದೃಷ್ಟಿ ಕೋನವೇ ಬೇರೆ ಎಂದು ಹೇಳಿದಾಗ ನೀವು ಈ ವಿಷಯದ ಬಗ್ಗೆ ಆರ್ಗ್ಯುಮೆಂಟ್ ಮಾಡುವ ದೃಷ್ಟಿಕೋನ ಸರಿಯೋ ತಪ್ಪೋ ಎಂದು ಹೇಳುವುದಕ್ಕೆ ಒಬ್ಬರು ಬೇಕಾಗುತ್ತದೆಂದು ಹೇಳುತ್ತೇನೆ.

ಶ್ರೀ ಕೆ. ಪುಟ್ಟಸ್ವಾಮಿ:-

ದ ಅನಾಲಜಿ ಸ್ಟಾಪ್ಸ್ ಸಮ್‌ವೇರ್, ಇವತ್ತು ಬಹುಶ: ಭಾಸ್ಕರ ಸೇಮಿತ ವಿಚಾರದಲ್ಲಿ ದ ಸ್ಪೀಕರ್ ವಾಜ್ ಕೈಂಡ್ ಎನಫ್ ಟು ಗೀವ್ ಆ್ಯನ್ ಅಪಾರ್ಚುನಿಟಿ ಟು ಸ್ಪೀಕ್. ನಾನು ಈಗ ಹೇಳುವುದೇನು ಇಲ್ಲ. ಇನ್ನು ಹಾಸನ ಕೇಸ್‌ನಲ್ಲಿ ಆಗಲೀ ಅಥವಾ ಐ ಡು ನಾಟ್ ವಾಂಟ್ ಟು ರಿಪೀಟ್. ಐ ಯಾಮ್ ನಾಟ್ ರಿಪೀಟಿಂಗ್. ಹಾಸನ ಅಥವಾ ಸೊಂಡೂರಿನ ಕೇಸಿನ ವಿಚಾರದಲ್ಲಿಯಾಗಲೀ ದೇರ್ ವಾಜ್ ನೊ ಅಪರ್ಚುನಿಟಿ ಫಾರ್ ದಟ್ ಮ್ಯಾಟರ್ ಟು ಗೋ ಬಿಫೋರ್ ಎ ಜುಡಿಷಿಯಲ್ ಪರ್‌ಸನ್. ಆದುದರಿಂದ ಇದಕ್ಕೂ ಅದಕ್ಕೂ ವ್ಯತ್ಯಾಸವಿದೆ.

ಶ್ರೀ ಕಾಗೋಡು ತಿಮ್ಮಪ್ಪ:-

ಮಾನ್ಯ ಚನ್ನಬಸಪ್ಪನವರ ವಿಷಯ ಹೇಳಿ.

ಶ್ರೀ ಕೆ. ಪುಟ್ಟಸ್ವಾಮಿ:-

ಶ್ರೀಮಾನ್ ಕಾಗೋಡು ತಿಮ್ಮಪ್ಪನವರು ಸಾಕಷ್ಟು ವಿಚಾರಗಳನ್ನು ತಿಳಿದುಕೊಂಡಿದ್ದಾರೆ. ನಾನು ಇದನ್ನು ಇಲ್ಲಿ ಹೇಳುವುದಲ್ಲ. ನಮ್ಮ ಪವರ್ ಹೌಸ್ ಕಾಂಗ್ರೆಸ್ ಆರ್ಗನೈಷನ್ ---- ಇದೆಯಲ್ಲ ಅವರೇ ಹೇಳಿದ್ದಾರೆ. ಇದನ್ನು ನಾನು ಹೇಳುವುದೇನು ಬಂತು ಅವರೇ ಹೇಳಿದ್ದಾರೆ. ದೇ ವಿಲ್ ಹ್ಯಾವ್ ಟು ಕಮ್ ಟು ಎಸಿಷನ್.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ನಿಮ್ಮ ಪವರ್ ಹೌಸ್‌ನಲ್ಲಿ ಕನ್‌ಡೆನ್ಸ್‌ರರೇ ಇಲ್ಲವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಇನ್ನು 'ಪಿ' ಡಬ್ಲ್ಯು 'ಡಿ' ಆಫೀಸರ್ಸ್ ಬಗ್ಗೆ ಶ್ರೀಮಾನ್ ಚನ್ನಬಸಪ್ಪನವರಿಗೆ ಏನೊಂದು ವ್ಯಾಮೋಹ, ಯಾವುದಾನರೊಂದು ಮಾತನ್ನು ಎತ್ತಿದರೆ ಉಗ್ರವಾದ ಶಿಕ್ಷೆಯನ್ನು ಮಾಡುತ್ತೇನೆ ಎಂದು ಹೇಳುತ್ತಾರೆ. ಅದು ಯಾವಾಗಲೂ ಉಗ್ರವಾದಂಥ ಶಿಕ್ಷೆಯನ್ನು ಎಲ್ಲಾ ಕಾರ್ಯಗಳಿಗೂ ಮಾಡುವುದಕ್ಕೆ ಆಗುವುದಿಲ್ಲ; ಮಾಡಲೂ ಬಾರದೆಂದು ಹೇಳುತ್ತೇನೆ. ತಪ್ಪಿಗೆ ತಕ್ಕಂತೆ ಶಿಕ್ಷೆಯೇ ಹೊರತು ಉಗ್ರವಾದ ಶಿಕ್ಷೆ ಇದು ಸರಿಯಲ್ಲ.

ಇನ್ನು ಮಾನ್ಯ ದೇವೇಗೌಡರು ಹೇಳಿದಂಥ ಚಾರ್ಜಸ್ ಬಗ್ಗೆ ಮಾತನಾಡುತ್ತೇನೆ. ಈ ವಿಷಯದಲ್ಲಿ ಅವರಿಗೊಂದು ಸಲಹೆಯನ್ನು ಮಾಡುತ್ತಿದ್ದೇನೆ. ಅವರು ಏನು ವಿಚಾರಗಳನ್ನು ಹೇಳಿದರೋ ಅದನ್ನೆಲ್ಲಾ ಪರಿಶೀಲನೆ ಮಾಡಿ, ಏನೊಂದು ಅಂಕಿ ಅಂಶಗಳು ಇದೆ ಅದನ್ನು ನಮ್ಮ ಈ ಸಭೆಗೆ ಒದಗಿಸಿಕೊಡಬೇಕು. ಆ ವಿಚಾರವನ್ನೆಲ್ಲಾ ಈ ಸಭೆಗೆ ಒದಗಿಸಿಕೊಡಬೇಕು ಎನ್ನುವುದರಲ್ಲಿ ನಾನು ಶ್ರೀಮಾನ್ ದೇವೇಗೌಡರವರಿಗೆ ಒಂದು ಮಾತನ್ನು ಹೇಳುವುದಕ್ಕೆ ಅಪೇಕ್ಷೆ ಪಡುತ್ತೇನೆ. ಈ ಸಭೆಯಲ್ಲಿ ಹೇಳತಕ್ಕಂಥ ವಿಚಾರದ ಮೇಲೆ ಆಗತಕ್ಕಂಥ ತೀರ್ಮಾನದಲ್ಲಿ ನಿಮಗೆ ವಿಶ್ವಾಸ ಇರಲಿ ಇಲ್ಲದೇ ಇರಲಿ...

ಶ್ರೀ ಹೆಚ್. ಡಿ. ದೇವೇಗೌಡ:-

ನಿಮ್ಮಲ್ಲಿ ವಿಶ್ವಾಸವಿಲ್ಲವೆಂದು ಹೇಳಲಿಲ್ಲ. ಅದು ನನ್ನ [illegible]ತಕ್ಕಂಥ ಇನ್‌ಹರೆಂಟ್ ಡಿಫೆಕ್ಟ್.

ಶ್ರೀ ಕೆ. ಪುಟ್ಟಸ್ವಾಮಿ:-

ಇನ್‌ಹರೆಂಟ್ ಡಿಫೆಕ್ಟ್ ಇರುವುದರಿಂದ ನಮ್ಮಲ್ಲಿ ವಿಶ್ವಾಸವಿಲ್ಲ ಎಂದು ಹೇಳುತ್ತೀರಿ. ಒಂದು ಸಲಹೆಯನ್ನು ಒಂದು ಹಿತವಚನವನ್ನು ಹೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ಅದು ಏನೆಂದರೆ ನೀವು ಹೇಳಿದಂಥ ಮಾತು ಇಲ್ಲಿಗೇ ಮುಗಿಯುವುದಿಲ್ಲ. ನೀವು ಹೇಳಿದ್ದನ್ನೆಲ್ಲಾ ರಾಜ್ಯದಾದ್ಯಂತ

ಜನ ಕೇಳುತ್ತಿರುತ್ತಾರೆ. ನೀವು ಹೇಳಿದಂಥ ಮಾತು ಸರಿಯಾಗಿದ್ದರೆ ನೀವು ತಾಳಿದಂಥ ನಿಲವು ಜನ ಮೆಚ್ಚಿದರೆ ಅದಕ್ಕೆ ನಿಮಗೆ ಡಿವಿಡೆಂಡ್ 1977ಕ್ಕೆ ಬರುತ್ತದೆ. ನಿಮ್ಮ ನಿಲುವು ಸರಿಯಾಗಿಲ್ಲದಿದ್ದರೆ, ನೀವು ತಾಳಿದಂಥ ಧೋರಣೆಯನ್ನು ಜನ ಮೆಚ್ಚದೇ ಇದ್ದರೆ ಡಿವಿಡೆಂಡ್ ಸಿಕ್ಕುವುದಿಲ್ಲ. ಆದುದರಿಂದ ನೀವು ಹೇಳುವಂಥದ್ದನ್ನು ನಾವು ಒಪ್ಪುತ್ತೇವೆಯೋ ಬಿಡುತ್ತೇವೆಯೋ ಅದನ್ನು ಅಷ್ಟಾಗಿ ನೀವು ಮನಸ್ಸಿಗೆ ಹಚ್ಚಿಕೊಂಡು ಕೆಡಿಸಿಕೊಳ್ಳಬೇಡಿ. ನಾನು ಹೇಳುವಂಥ ಮಾತನ್ನು ಕೇಳಿ ಆಖೈರಾಗಿ ತೀರ್ಮಾನ ಮಾಡುವವರು ಹೊರಗೆ ಇರುವುದರಿಂದ ನೀವು ಯಾವುದೊಂದು ವಿಚಾರವನ್ನು ಇಲ್ಲಿ ಹೇಳುವುದಿಲ್ಲವೆಂದರೆ, ಈ ಸಭೆಗೆ ವಂಚನೆ ಮಾಡಿದಷ್ಟೇ ಅಲ್ಲ ಜನತೆಗೇ ವಂಚನೆ ಮಾಡಿದಂತಾಗುತ್ತದೆ. ಆದುದರಿಂದ ನಿಮ್ಮಲ್ಲಿ ಕೆಲವು ಅಂಕಿಅಂಶಗಳು ಇದ್ದರೆ ಬಚ್ಚಿಡದೇ ಇಲ್ಲಿ ಎಲ್ಲವನ್ನೂ ಹೇಳಿಬಿಡಿ. ನಿಮಗೆ ಗೊತ್ತಿರತಕ್ಕಂಥದ್ದನ್ನು ಇಲ್ಲಿ ಹೇಳಿ.

ಶ್ರೀ **ಕಾಗೋಡು ತಿಮ್ಮಪ್ಪ**:-

ಇಲ್ಲಿ ಹೇಳತಕ್ಕಂಥ ವಿಚಾರಗಳು ಜನರ ಮಟ್ಟದಲ್ಲಿ ತೀರ್ಮಾನವಾಗುವುದಾದರೆ, ಇಲ್ಲಿ ತೀರ್ಮಾನವಾಗುವುದಕ್ಕೆ ಅವಕಾಶವಿಲ್ಲವೆನ್ನುವ ಅಭಿಪ್ರಾಯವೋ ತಮ್ಮದು?

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಕಾಗೋಡು ತಿಮ್ಮಪ್ಪನವರಿಗೇನೂ ನಾನು ರಾಜ್ಯಾಂಗ ಶಾಸನವನ್ನು ಹೇಳಿಕೊಡಬೇಕಾದ್ದು ಇಲ್ಲ. ಇವತ್ತು ಯಾವುದೇ ಒಂದು ವಿಷಯವನ್ನು ಸರ್ಕಾರ ತೀರ್ಮಾನ ಮಾಡಿದರೂ ಕೂಡಾ ಅದನ್ನು ತೂಕ ಮಾಡುವವರು ಹೊರಗಡೆ ಇದ್ದಾರೆ. ನಮ್ಮ ನಿಮ್ಮ ನಿಲುವನ್ನು ತೂಕ ಮಾಡುವವರು ಹೊರಗಡೆ ಇದ್ದಾರೆ.

ಇನ್ನು ಕೆಲವು ರಿಸೋರ್ಸ್ ಮೊಬಲೈಜೇಷನ್‌ನೊಳಗೆ ಸರ್ಕಾರ ಸಾಕಷ್ಟು ಪ್ರಯತ್ನ ಮಾಡಿದೆ ಎನ್ನುವುದನ್ನು ಅಂಕಿಅಂಶಗಳ ಮೂಲಕ ಹೇಳಿದ್ದಾರೆ.

ಇನ್ನು ಕೆಲವರಿಗೆ ಶ್ರೀಮಾನ್ ಕೋಣಂದೂರು ಲಿಂಗಪ್ಪನವರಿಗೆ ನಮ್ಮ ಹಳ್ಳಿಯ ಭಾಷೆಯಲ್ಲಿ ಹೇಳುವುದಾದರೆ ಹೊಟ್ಟೆ ಬಟ್ಟೆ ಕೇಳಬೇಡ ನಿನ್ನ ಗಿಣಿ ಹಾಗೆ ಸಾಕುತ್ತೇನೆ ಅಂತ ಅವರು ಯಾವುದೇ ವಿಚಾರ ಬರಲಿ ಆ ಕೆಲಸ ಮಾಡಲಿಲ್ಲಾ, ಈ ಕೆಲಸ ಮಾಡಲಿಲ್ಲಾ, ಇದಕ್ಕೆ ಬಡ್ಜೆಟ್ ಪ್ರಾವಿಷನ್ ಮಾಡಿದರು ಆ ಕೆಲಸ ಆಗಲಿಲ್ಲಾ, ಇದರ ಕೆಲಸ ಪ್ರೋಗ್ರಸೀವ್ ಆಗಿಲ್ಲಾ, ಇದು ಕುಂಠಿತವಾಗುತ್ತ ಇದೆ, ಮತ್ತು ಕಾಳೀನದಿ ಕೆಲಸ ಹಾಗೆ ಆಗುತ್ತಾ ಇದೆ, ಹೀಗೆ ಆಗುತ್ತಾ ಇದೆ. ಹೀಗಿದ್ದರೆ ಇನ್ನು 10 ವರ್ಷವಾದರೂ ಕೆಲಸವಾಗುವುದಿಲ್ಲಾ, ಅವರು ಪ್ರೋಗ್ರೆಸ್ ಕಡೆ ಏನೂ ಗಮನ ಕೊಡಲಿಲ್ಲಾ, ಇನ್ನು ಕಾವೇರಿ ಬಗ್ಗೆ ನಮಗೆ ಏನೂ ಫಲಿಸಲಿಲ್ಲಾ. ಈ ರೀತಿಯಾಗಿ ಒಂದೊಂದಾಗಿ ಆಪಾದನೆಗಳು ಮಾಡುವುದು ಸರಿಯೋ ಎಂದು ನಾನು ಅವರನ್ನು ಕೇಳುತ್ತೇನೆ. ಆದರೆ ಇದನ್ನು ಸಾಧಿಸುವುದು ಹೇಗೆ? ಅದಕ್ಕೆ ಕಂದಾಯ ಹಾಕಲೇ ಬೇಕು, ಅದಕ್ಕೆ ತೆರಿಗೆ ಹಾಕಲೇ ಬೇಕು. ಯಾವ ತೆರಿಗೆಗೂ ವಿರೋಧ ಪಕ್ಷದವರು ಬೆಂಬಲ ಕೊಡುವರು ಎನ್ನುವ ಭ್ರಮೆಯಿಂದ ಹೇಳುತ್ತಾ ಇಲ್ಲ. ಆದರೆ ಈ ರೀತಿ ಅವರು ಆಕ್ಷೇಪಣೆ ಮಾಡುವಾಗ ಅದಕ್ಕೆ

ಬದಲಾಗಿ ಇನ್ನೂ ಯಾವುದಾದರೂ ತೆರಿಗೆ ಹಾಕುವುದಕ್ಕೆ ಮಾರ್ಗ ಇದೆಯೇ ಎನ್ನುವುದನ್ನು ಅವರು ಹೇಳುವುದಕ್ಕಾಗುವುದಿಲ್ಲವೇ? ಅದು ಇಲ್ಲವೇ ಇಲ್ಲ. ಯಾವ ತೆರಿಗೆ ಬಂದರೂ ಅದಕ್ಕೆ ವಿರೋಧ ಮಾಡುವುದು, ಮಾನ್ಯ ಕಾಗೋಡು ತಿಮ್ಮಪ್ಪನವರು ಒಂದು ಮಾತು ಹೇಳಿದರು. ನಾನು ಸೋಷಿಯಲಿಸಂ ಮೇಲೆ ಪುಸ್ತಕ ಓದಿಲ್ಲ. ನನಗೆ ಪುಸ್ತಕದ ಜ್ಞಾನ ಅಷ್ಟು ಹೆಚ್ಚಾಗಿ ಇಲ್ಲ. ನಾನು ಅಲ್ಲಿ ಇಲ್ಲಿ ಕೇಳಿ ತಿಳಿದದ್ದು ಅವರು ಇವರು ಹೇಳಿದ್ದನ್ನು ಕಟ್ಟಿಟ್ಟುಕೊಂಡ ಬುತ್ತಿಯಲ್ಲಿ ಹೋಗತಕ್ಕಂಥಾದ್ದು. ನಾನು ಈ ಮಾತನ್ನು ಹೇಳಿದರೆ ತಾವು ಯಾರೂ ಕುಪಿತರಾಗಬೇಕಾಗಿಲ್ಲ. ಸಮಾಜವಾದದಲ್ಲಿರುವಂಥ ಸರ್ಕಾರ ಪರೋಕ್ಷವಾದ ತೆರಿಗೆಯನ್ನು ಹೆಚ್ಚು ಹೆಚ್ಚು ಹಾಕುವುದಕ್ಕೆ ಪ್ರಾಮುಖ್ಯತೆ ಕೊಡಬಾರದು ಎಂದು ಅವರು ಹೇಳಿದರು. ನನಗೆ ಬಹಳ ಆಶ್ಚರ್ಯವಾಯಿತು. ಪರೋಕ್ಷವಾದ ತೆರಿಗೆಯನ್ನು ಕೊಡತಕ್ಕಂಥಾವರು ಯಾರು ಎಂದರೆ ಇದನ್ನು ಕೊಡತಕ್ಕಂಥ ಶಕ್ತಿ ಯಾರು ಯಾರಿಗೆ ಇದೆಯೋ ಅವರವರ ಶಕ್ತ್ಯಾನುಸಾರವಾಗಿ ಬೀಳತಕ್ಕಂಥ ತೆರಿಗೆಯಾಗುತ್ತದೆ. ಉದಾಹರಣೆಗೆ, ನಾನು ಒಂದು ಕಾರನ್ನು ಇಟ್ಟಿದ್ದೇನೆ. ಕಾರು ಕೊಂಡುಕೊಳ್ಳಬೇಕಾದರೆ ಅದಕ್ಕೆ 30 ಸಾವಿರ ರೂಪಾಯಿ ಆಗುತ್ತದೆ. ಅದರ ಮೇಲೆ 8 ಪರ್ಸೆಂಟ್ ಅಥವಾ 12 ಪರ್ಸೆಂಟ್ ತೆರಿಗೆ ಇದೆ. ಮೂರೂವರೆ - 4 ಪರ್ಸೆಂಟ್ ಸೇಲ್ಸ್‌ಟ್ಯಾಕ್ಸ್ ಬೀಳುತ್ತದೆ. ಅದರ ಮೇಲೆ ಇನ್ನು ಬೇರೆ ಬೇರೆ ತೆರಿಗೆ ಬೀಳುತ್ತದೆ ಮತ್ತು ಕಾರಿನಲ್ಲಿ ಏನಾದರೂ ಒರಗಿಕೊಳ್ಳಬೇಕಾದರೆ ಬೇಕಾದಂಥ ಆರ್ಟಿಕಲ್ಸ್ ಏನು ಇದೆಯೋ ಅದನ್ನು ತೆಗೆದುಕೊಂಡರೆ ಅದರ ಮೇಲೆ ತೆರಿಗೆ ಬೀಳುತ್ತದೆ. ಕಾರಿಗೆ ಬೇಕಾದ ಪೆಟ್ರೋಲನ್ನು ಕೊಂಡು ಕೊಂಡರೆ ಅದರ ಮೇಲೆ ತೆರಿಗೆ ಬೀಳುತ್ತದೆ. ಇನ್ನು ಏನಾದರೂ ಅದಕ್ಕೆ ಬೇಕಾದರೆ ಎಲೆಕ್ಟ್ರಿಕಲ್ ಗೂಡ್ಸ್, ಲಕ್ಸುರಿ ಆರ್ಟಿಕಲ್ ತೆಗೆದುಕೊಂಡರೆ ಅದರ ಮೇಲೆ 7-8 ಪರ್ಸೆಂಟ್ ತೆರಿಗೆ ಬೀಳುತ್ತದೆ. ಈ ರೀತಿಯಾಗಿ ಯಾರು ಲಕ್ಸುರಿ ಆರ್ಟಿಕಲ್ಸ್‌ನ್ನು ಕೊಂಡುಕೊಳ್ಳುತ್ತಾರೋ ಅವರ ಮೇಲೆ ಹೆಚ್ಚು ಹೆಚ್ಚು ತೆರಿಗೆ ಬೀಳುತ್ತದೆ. ಒಬ್ಬ ಮನುಷ್ಯ ಒಂದು ಸಾವಿರ ರೂಪಾಯಿ ಸಂಪಾದನೆ ಮಾಡಿದರೆ ಅದಕ್ಕೆ ತಕ್ಕಂತೆ ಪ್ರಮಾಣದಲ್ಲಿ ಅವನಿಗೆ ತೆರಿಗೆ ಬೀಳುತ್ತದೆ. ಒಬ್ಬ ಮನುಷ್ಯ 100 ರೂಪಾಯಿ ಸಂಪಾದನೆ ಮಾಡಿದರೆ ಅದಕ್ಕೆ ತಕ್ಕಂಥ ಪ್ರಮಾಣದಲ್ಲಿ ತೆರಿಗೆ ಬೀಳುತ್ತದೆ ಎಂದು ನಾನು ತಿಳಿದಿದ್ದೇನೆ. ಈ ಪ್ರತ್ಯಕ್ಷವಾದಂಥ ತೆರಿಗೆಗೂ ಸೋಷಲಿಸ್ಟ ಸರ್ಕಾರಕ್ಕೂ ಏನೂ ನೆಂಟು ಇಲ್ಲ. ಪ್ರತ್ಯಕ್ಷವಾದ ತೆರಿಗೆ ಎಂದರೆ ನೇರವಾದ ತೆರಿಗೆಯನ್ನು ಹಾಕತಕ್ಕಂಥಾದ್ದು ಎಲ್ಲೆಲ್ಲಿ ಆವಶ್ಯಕವಾಗಿ ಇದೆಯೋ ಅಲ್ಲಲ್ಲಿ ಹಾಕುವುದು. ಇದು ಸರಿಯಲ್ಲವೇ ?

ಶ್ರೀ ಕಾಗೋಡು ತಿಮ್ಮಪ್ಪ:-

ನಾನು ಹೇಳಿದ ಅಭಿಪ್ರಾಯ ಏನೆಂದರೆ ಪ್ರತ್ಯಕ್ಷವಾದ ತೆರಿಗೆಗೂ ಮತ್ತು ಪರೋಕ್ಷವಾದ ತೆರಿಗೆಗೂ ಇರತಕ್ಕಂಥ ಪ್ರಮಾಣಗಳು ಇವೆಯೆಲ್ಲಾ ಅದರಲ್ಲಿ ನಾವು ಸಮಾಜವಾದೀ ಕಲ್ಪನೆ ಇಟ್ಟುಕೊಂಡಿದ್ದೇವೆ ಅಂತ ಹೇಳುವುದನ್ನು ನಾನು ಹೇಳುತ್ತೇನೆ. ಪ್ರತ್ಯಕ್ಷವಾದ ತೆರಿಗೆಯಾಗಲಿ, ಪರೋಕ್ಷವಾದ ತೆರಿಗೆಯಾಗಲಿ, ಇರಬಾರದು ಎಂದು ನಾನು ಹೇಳಲಿಲ್ಲ. ಪ್ರತ್ಯಕ್ಷವಾದ ತೆರಿಗೆ ಯಾವ ಪ್ರಮಾಣದಲ್ಲಿ ಇರಬೇಕು, ಪರೋಕ್ಷವಾದ ತೆರಿಗೆ ಯಾವ ಪ್ರಮಾಣದಲ್ಲಿ ಇರಬೇಕು ಎಂದು ನಾನು ಹೇಳುತ್ತಾ ಇರುವುದು.

ಶ್ರೀ ಕೆ. ಪುಟ್ಟಸ್ವಾಮಿ:-

ಐ ಹ್ಯಾವ್ ಅಬ್‌ಸ್ಯೂಲಟಲಿ ನೊ ಕ್ವಾರಲ್ ವಿತ್ ದಟ್ ಪ್ರಿನ್ಸಿಪಲ್. ನೇರವಾಗಿ ಡೈರೆಕ್ಟ್ ಟ್ಯಾಕ್ಸೇಷನ್ ಹಾಕತಕ್ಕಂಥಾ ತೆರಿಗೆಯನ್ನು ಯಾವುದು ಬಿಟ್ಟಿದ್ದಾರೆ. ಬಹುಶ: ನನಗೆ ತಿಳಿದಮಟ್ಟಿಗೆ ಎಲ್ಲಾ ಕಡೆಯೂ ಸಾಕಷ್ಟು ತೆರಿಗೆ ಹಾಕಿದ್ದಾರೆ. ಸಾಮಾನ್ಯವಾಗಿ ಈ ಸಭೆಯಿಂದ ಹೊರಗಡೆ ಹೋದರೂ ಸಹ ಜನ ಗೊಣಗುತ್ತಾರೆ. ಒಂದು ಕಲ್ಯಾಣಕರವಾದ ಒಂದು ಸಮಾಜವನ್ನು ಸೃಷ್ಟಿಸಬೇಕಾದರೆ, ಅದನ್ನು ಕಟ್ಟಬೇಕಾದರೆ ಒಂದು ವೆಲ್‌ಫೇರ್ ಸ್ಟೇಟ್ ಮಾಡಬೇಕಾದರೆ ಕಂದಾಯ ಹಾಕದೇ ಬೇರೆ ಮಾರ್ಗವೇ ಇಲ್ಲ. ಕಂದಾಯ ಸಾಕಷ್ಟು ಪ್ರಮಾಣದಲ್ಲಿ ಹಾಕಲೇಬೇಕು. ಆದರೆ ಹೊಸ ಹೊಸ ಕಂದಾಯವನ್ನು ಹಾಕುವುದಕ್ಕೆ ಮುಂಚೆ ಸರ್ಕಾರ ತನ್ನದೂ ಒಂದು ಕರ್ತವ್ಯ ಇದೆ, ಎಂದು ತಿಳಿದುಕೊಳ್ಳಬೇಕು. ಅದು ಏನೆಂದರೆ ಏನು ತೆರಿಗೆಯನ್ನು ವಸೂಲ್ಮಾಡುತ್ತಾರೋ ಆ ಹಣ ಸದುಪಯೋಗ ಮಾಡುತ್ತಿದ್ದೇವೆಯೇ ಅನ್ನುವುದನ್ನು ಸಾರ್ವಜನಿಕರಿಗೆ ಮನದಟ್ಟು ಮಾಡುವುದು ನಮ್ಮ ಕರ್ತವ್ಯ ಎಂದು ಅವರು ತಿಳಿದುಕೊಳ್ಳಬೇಕು ಮತ್ತು ಆ ಬಗ್ಗೆ ಯಾವುದೇ ವಿಧವಾದಂಥ ಹಣ ಪೋಲು ಮಾಡಿದರೂ ಕೂಡ ನಮಗೆ ತೆರಿಗೆ ಹಾಕತಕ್ಕಂಥ ಅಧಿಕಾರ ಕಳೆದು ಹೋಗಿದೆ ಅನ್ನುವುದನ್ನು ತಿಳಿದುಕೊಳ್ಳಬೇಕು. ದೇರ್ ಲೈಸ್ ಯುವರ್ ಡ್ಯೂಟಿ, ಈ ಹಣ ಎಲ್ಲಾದರೂ ಅಪವ್ಯಯವಾಗುತ್ತಿದ್ದರೆ ಅದನ್ನು ಹೇಳಬೇಕಾದ್ದು ನಿಮ್ಮ ಕರ್ತವ್ಯ. ನಿಮ್ಮ ಪ್ರಶ್ನೆಗೆ ಉತ್ತರವಾಗಿ ಸರ್ಕಾರ ನಿಮಗೂ ಮತ್ತು ಸಾರ್ವಜನಿಕರಿಗೂ ಸಮಾಧಾನವಾಗುವ ರೀತಿಯಲ್ಲಿ ಈ ಹಣ ಯಾವುದೇ ರೀತಿಯಲ್ಲಿ ಪೋಲಾಗುತ್ತಾ ಇಲ್ಲ ಅಂತ ಹೇಳಬೇಕಾದ್ದು ಸರ್ಕಾರದ ಕರ್ತವ್ಯ. ಆದುದರಿಂದ ಈ ತೆರಿಗೆಗಳನ್ನು ಹಾಕುವುದಕ್ಕಿಂತ ಮುಂಚಿತವಾಗಿ ಸರ್ಕಾರದ ಹಣ ಯಾವುದೇ ರೀತಿಯಲ್ಲಿ ಪೋಲಾಗದಂತೆ ನೋಡಿಕೊಳ್ಳುವುದು ಅಗತ್ಯ ಎಂದು ಹೇಳುತ್ತೇನೆ.

ಸ್ವಾಮಿ, ನಮ್ಮ ಸರ್ಕಾರ ಎಷ್ಟೋ ಕಾರ್ಪೊರೇಷನ್‌ಗಳನ್ನು ಮಾಡುತ್ತಿದ್ದಾರೆ. ಸ್ವಯಂ ಆಡಳಿತ ಸಂಸ್ಥೆಗಳನ್ನು ಮಾಡುತ್ತಿದ್ದಾರೆ. ಇದರಲ್ಲಿ ನಾನು ಹೇಳುವುದೂ ಇಷ್ಟೆ. ಈ ಸ್ವಯಂ ಆಡಳಿತ ಸಂಸ್ಥೆಗಳು ಎಲ್ಲಾ ಆವಶ್ಯಕತೆ ಇದೆಯೇ? ಮತ್ತು ಈ ಸ್ವಯಂ ಆಡಳಿತ ಸಂಸ್ಥೆಗಳನ್ನು ತಾವು ಮಾಡುವಾಗ ತಮ್ಮ ಮನಸ್ಸಿನಲ್ಲಿ ಒಂದು ಸ್ಪಷ್ಟ ಇರಬೇಕು. ಈ ಸಭೆಯ ಅಧಿಕಾರವ್ಯಾಪ್ತಿಯನ್ನು ತಾವು ಮೊಟಕು ಮಾಡುತ್ತಿದ್ದೀರಿ. ಯಾವ ಕೆಲಸಕಾರ್ಯಗಳು ನಿಮ್ಮ ಮುಂದೆ ಬರಬೇಕೋ ನೀವು ಕಾರ್ಪೊರೇಷನ್ ಮಾಡುವುದರ ಮೂಲಕ ಅವನ್ನು ಈ ಸಭೆಯ ವ್ಯಾಪ್ತಿಯಿಂದ ಹೊರಗಡೆ ಇಡುವುದಕ್ಕೆ ಪ್ರಯತ್ನ ಮಾಡುತ್ತೀರಿ. ಈ ಕಾರ್ಪೊರೇಷನ್ನಿಗೆ ಎಷ್ಟು ಹಣ ಖರ್ಚುಮಾಡಿದೆ, ಏನು ಪ್ರಗತಿ ಸಾಧಿಸಿದೆ ಅದನ್ನು ನೀವೇ ನೇರವಾಗಿ ಮಾಡುವುದಕ್ಕಾಗುವುದಿಲ್ಲವೆ? ಈ ಸ್ವಯಂ ಆಡಳಿತ ಸಂಸ್ಥೆಗಳಿಂದ ಏನು ಒಂದು ಕಾರ್ಯ ಆಗಬೇಕಾಗಿತ್ತೋ ಆ ಬಗ್ಗೆ ನಾವು ಚರ್ಚೆ ಮಾಡುವುದಕ್ಕೆ ಮತ್ತು ಅದರ ಬಗ್ಗೆ ಒಂದು ತೀರ್ಮಾನ ಕೈಗೊಳ್ಳುವುದಕ್ಕೆ ಅವಕಾಶ ಕೊಡಬೇಕು. ನಾನು ಈಗಾಗಲೇ ಹೆಚ್ಚು ಕಾಲ ತೆಗೆದುಕೊಂಡಿದ್ದೇನೆ. ಈ ಬಗ್ಗೆ ಹೆಚ್ಚು ಹೇಳುವುದಕ್ಕೆ ನನ್ನ ಹತ್ತಿರ ಅಂಕಿಅಂಶ ಇಲ್ಲ. ಅನೇಕ ಸ್ವಯಂ ಆಡಳಿತ ಸಂಸ್ಥೆಗಳು ಫಲಪ್ರದವಾಗಿ ಕೆಲಸ ಮಾಡುವುದಕ್ಕೆ ಆಗಿಲ್ಲ. ಹಣ ಮಾತ್ರ ಯಥೇಚ್ಛವಾಗಿ ಖರ್ಚಾಗಿದೆ. ಆ ಖರ್ಚು ಸಭೆಯ ಮುಂದೆ ಬಂದಿದ್ದರೆ ಈ ಸಭೆ ಒಪ್ಪಿಗೆ ದೊರಕುತ್ತಾ ಇರಲಿಲ್ಲ.

ಆದುದರಿಂದ ಈ ಒಂದು ಅವಧಿಯಲ್ಲಿ ಆಯವ್ಯಯದ ಮೇಲೆ ಚರ್ಚೆ ಆಗುವಾಗ ನಾನು ವಿನಂತಿ ಮಾಡಿಕೊಳ್ಳುವುದು ಏನೆಂದರೆ ಪ್ರತಿಯೊಬ್ಬರೂ ಕೂಡ ಅವರವರ ಅಧಿಕಾರ ವ್ಯಾಪ್ತಿಯೊಳಗಿದ್ದಾರೆ. ಆದ್ದರಿಂದ ಈ ಸ್ವಯಂ ಆಡಳಿತ ಸಂಸ್ಥೆಗಳ ಕೆಲಸಕಾರ್ಯಗಳ ವಿಚಾರವಾಗಿ ಅವು ಏನು ಪ್ರಗತಿಯನ್ನು ಸಾಧಿಸಿವೆ ಎನ್ನುವ ವಿಚಾರದಲ್ಲಿ ನಮಗೆ ಸ್ಪಷ್ಟವಾದಂಥ ತಿಳುವಳಿಕೆ ಕೊಡಬೇಕು. ಇತ್ತೀಚೆಗೆ ಬೆಳೆದುಬಂದಂಥ ಸಂಪ್ರದಾಯ ನನ್ನ ಮನಸ್ಸಿಗೆ ನೋವನ್ನುಂಟು ಮಾಡಿದೆ. ನಾನು ಅನೇಕ ಮಿತ್ರರಲ್ಲಿ ತಿಳಿಸಿದ್ದೇನೆ. ಮತ್ತು ಮಂತ್ರಿಗಳಲ್ಲೂ ಕೂಡ ತಿಳಿಸಿದ್ದೇನೆ. ರಾಜ್ಯಪಾಲರ ಭಾಷಣದ ಮೇಲೆ ಆದಂಥ ಚರ್ಚೆಯಾಗಲಿ ಮತ್ತು ಬಡ್ಜೆಟ್ ಭಾಷಣದ ಮೇಲೆ ಆದಂಥ ಚರ್ಚೆಯಾಗಲಿ ಪ್ರತಿಯೊಬ್ಬ ಸದಸ್ಯನೂ ಯಾವ ಯಾವ ಆಕ್ಷೇಪಗಳನ್ನು ಎತ್ತಿದಾನೋ ಮತ್ತು ಯಾವ ಯಾವ ಸಲಹೆಗಳನ್ನು ಮಾಡಿದ್ದಾನೋ ಅದಕ್ಕೆ ಆಯಾಯ ಸಚಿವರು ತಮ್ಮ ಪ್ರತಿಕ್ರಿಯೆಯನ್ನು ತಿಳಿಸಬೇಕಾದ್ದು ಅತ್ಯಂತ ಅಗತ್ಯ ಎಂದು ಹೇಳುತ್ತೇನೆ.

ಇಲ್ಲದಿದ್ದರೆ ಈ ಸಭೆಯ ಕಾರ್ಯಕಲಾಪಗಳಲ್ಲಿ ನಾವು ಏತಕ್ಕೆ ಚರ್ಚೆ ಮಾಡಬೇಕು? ಮತ್ತು ನಾವು ಏಕೆ ಇಲ್ಲಿ ಭಾಗವಹಿಸಬೇಕು? ನನ್ನ ಮನಸ್ಸಿನಲ್ಲಿ ಒಂದು ತಪ್ಪು ಕಲ್ಪನೆ ಇರಬಹುದು. ಇದನ್ನು ನಾನು ಸಭೆಯ ಮುಂದೆ ಇಟ್ಟಿರಬಹುದು. ಅದಕ್ಕೆ ನೀವೇನೂ ಸರಿಯಾದ ಉತ್ತರ ಕೊಡುವುದಿಲ್ಲ. ರಾಜ್ಯಪಾಲರ ಭಾಷಣದ ಬಗ್ಗೆ ಇಲ್ಲಿ ನಡೆದಿರುವ ಚರ್ಚೆಗೆ ಮುಖ್ಯ ಮಂತ್ರಿಗಳು ಇಲ್ಲಿ ಉತ್ತರ ಕೊಡುತ್ತಾರೆ. ಅದೇ ರೀತಿ ಬಡ್ಜೆಟ್ಟಿನ ಬಗ್ಗೆ ನಡೆದ ಚರ್ಚೆಗೆ ಫೈನಾನ್ಸ್ ಮಿನಿಷ್ಟರು ಮಾತ್ರ ಉತ್ತರ ಹೇಳಬಹುದು ಇಲ್ಲವೇ ಮುಖ್ಯ ಮಂತ್ರಿಗಳೇ ಹೇಳಬಹುದು. ಇದರಿಂದ ನಮಗೆ ಅಷ್ಟು ಸಮಾಧಾನವಾಗುವುದಿಲ್ಲ. ಇಲ್ಲಿ ಮಂತ್ರಿಗಳು ಹಾಜರಿದ್ದರೆ ಎಷ್ಟೋ ವಿಚಾರಗಳು ಇಲ್ಲಿ ಬರುತ್ತವೆ. ಆಗ ಅವರ ಮನಸ್ಸಿನಲ್ಲೂ ಬರುತ್ತವೆ. ಇದರ ಬಗ್ಗೆ ಅವರೂ ವಿವರಣೆಗಳನ್ನು ಕೊಡಬೇಕು ಮತ್ತು ಈ ಸಭೆಯ ಕಾರ್ಯಕಲಾಪಗಳನ್ನು ಇನ್ನೂ ಆಕರ್ಷಣೀಯವಾಗಿ ಮಾಡಬೇಕಾದರೆ ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಎಲ್ಲ ಮಂತ್ರಿಗಳೂ ಇಲ್ಲಿ ಇರಬೇಕಾದುದು ಅಗತ್ಯ. ಕೊನೆಯ ಪಕ್ಷ 14-15 ಮಂತ್ರಿಗಳಾದರೂ ಇಲ್ಲಿರಬೇಕು. ಇಲ್ಲಿ ಅನೇಕ ವಿಚಾರಗಳು ಗುರುತರವಾದ ಹಾಗೂ ಗಹನವಾದ ಆಕ್ಷೇಪಣೆಗಳು, ಆಗಿಂದಾಗ್ಗೆ ಬರುತ್ತಲೇ ಇರುತ್ತವೆ. ಆಗ ಮಂತ್ರಿಗಳಿಲ್ಲ ಎಂದು ಹೇಳಬಹುದು. ಆ ರೀತಿಯಾಗಬಾರದು. ಕೆಲವು ಮಂತ್ರಿಗಳಾದರೂ ಇದ್ದು ಇಲ್ಲಿ ಉತ್ತರ ಕೊಡಬೇಕು. ಇದು ನಮ್ಮ ಪಕ್ಷದ ದೃಷ್ಟಿಯಿಂದಲೂ ಕೂಡ ಅತ್ಯಾವಶ್ಯಕ ಎಂದು ನಾನು ಭಾವಿಸುತ್ತೇನೆ. ನಿನ್ನೆ ದಿನ ಇಲ್ಲಿ ಶ್ರೀ ಕಾಗೋಡು ತಿಮ್ಮಪ್ಪನವರು ಮಾತನಾಡಿದರು ಮತ್ತು ಅವರು ಇಲ್ಲಿ ಎಷ್ಟೋ ಗುರುತರವಾದ ಆಕ್ಷೇಪಣೆಗಳನ್ನು ಮಾಡಿರಬಹುದು. ಇವುಗಳ ಬಗ್ಗೆ ಇಂದು ಪತ್ರಿಕೆಯಲ್ಲಿ ಬಂದಿದೆ. ಆದರೆ ಇದಕ್ಕೆ ಉತ್ತರವಾಗಿ ಸರಕಾರದ ಮಂತ್ರಿಗಳು ಇನ್ನು ಮೂರು ನಾಲ್ಕು ದಿನಗಳಾದ ಮೇಲೆ ಹೇಳಿದರೆ ಅದರಿಂದ ಜನರ ಮನಸ್ಸಿನಲ್ಲಿ ಒಂದು ರೀತಿಯಾದ ತಪ್ಪು ಭಾವನೆ ನಿಂತು ಹೋಗುತ್ತದೆ. ಇದಕ್ಕಾಗಿ ಈ ಸಭೆಯ ಕಾರ್ಯ ಕಲಾಪಗಳು ಪ್ರಯೋಜನವಾಗಬೇಕಾದರೆ ನಮ್ಮ ಮಂತ್ರಿಗಳು ಇಲ್ಲಿ ಹಾಜರಿರಬೇಕು ಮತ್ತು ಈ ಸಮಯದಲ್ಲಿ ಇದ್ದರೆ ಇನ್ನೂ ಹೆಚ್ಚು ಆಸಕ್ತಿ ವಹಿಸಬಹುದು. ಅದೂ ಅಲ್ಲದೆ ಆಗಾಗ್ಗೆ ನಮ್ಮ ವಿರೋಧ ಪಕ್ಷದವರೂ ಕೂಡ ಇಲ್ಲಿ ಸಭೆಯಲ್ಲಿ ಮಂತ್ರಿಗಳೇ ಇಲ್ಲ ಎಂದು ಹೇಳುವ ಆಕ್ಷೇಪಣೆಗಳೂ ಬರುವುದಿಲ್ಲ. ಸದಸ್ಯರು ಹೇಳುವ ಮಾತುಗಳಿಗೆ ಸರಿಯಾದ ಪ್ರತಿಫಲ ದೊರೆಯುತ್ತಿಲ್ಲ ಎನ್ನುವ ಮಾತುಗಳು ಬರುವುದು ಬೇಡ. ಆದಷ್ಟು ಸರಕಾರಕ್ಕೆ ಸಲಹೆಗಳು ಬಂದಿರುವಾಗ ಇದರ ಬಗ್ಗೆ ಉತ್ತರ

ಕೊಡುವಾಗ ಎಲ್ಲ ಮಂತ್ರಿಗಳೂ ತಮಗೆ ಸಂಬಂಧಪಟ್ಟಂತೆ ಇಲ್ಲಿ ಹೇಳಿಕೆಗಳನ್ನು ಕೊಡುವುದು ಒಳ್ಳೆಯದು. ಇದಕ್ಕೆ ಬದಲು ಮಾನ್ಯಮಂತ್ರಿಗಳು ಅವರ ಡಿಮ್ಯಾಂಡುಗಳು ಬಂದಾಗ ನಾವು ಉತ್ತರ ಕೊಡುತ್ತೇವೆಂದು ಹೇಳಬಹುದು. ಆದರೆ ಆಗ ಇದರ ಬಗ್ಗೆ ಹೇಳುವ ಮಾತುಗಳು ಪತ್ರಿಕೆಯಲ್ಲಿ ಬರುವುದಿಲ್ಲ. ಜನರಲ್ಲಿ ಕೂಡ ಸರಿಯಾದ ತಿಳುವಳಿಕೆ ಬರುವುದಿಲ್ಲ. ಇದನ್ನು ಎಲ್ಲ ಮಂತ್ರಿಗಳೂ ಗಮನಿಸಬೇಕು. ಇದನ್ನು ತಾವು ತೀರ್ಮಾನ ಮಾಡಬೇಕು.

ಶ್ರೀ ಬಿ. ಪುಟ್ಟಸ್ವಾಮಯ್ಯ:-

ಮಾನ್ಯ ಸದಸ್ಯರು ಹಿರಿಯರು ಮತ್ತು ನಮಗೆ ಪಿತೃ ಸಮಾನವಾದವರು. ಆದುದರಿಂದ ನಾನು ಸದ್ಭಾವನೆಯಿಂದ ಒಂದು ಮಾತನ್ನು ಅವರಲ್ಲಿ ಕೇಳಬೇಕಾಗಿದೆ. ಪದೇ ಪದೇ ತಮ್ಮ ಮಂತ್ರಿ ಮಂಡಲ ಬದಲಾವಣೆಯಾಗುತ್ತಿದ್ದರೆ ರಾಜ್ಯದಲ್ಲಿ ಸುಭದ್ರವಾದ ಸರಕಾರ ಇರಲು ಸಾಧ್ಯವೇ?

ಶ್ರೀ ಕೆ. ಪುಟ್ಟಸ್ವಾಮಿ:-

ಹಾಗೇನಿಲ್ಲ. ನಮ್ಮ ಮಂತ್ರಿಮಂಡಲ ಸಾಕಷ್ಟು ಭದ್ರವಾಗಿದೆ.

ಶ್ರೀ ಹೆಚ್. ಡಿ. ದೇವೇಗೌಡ:-

ಮಾನ್ಯ ಸದಸ್ಯರು ಹೇಳುವ ಮಾತುಗಳನ್ನು ನೋಡಿದರೆ ನಮ್ಮ ಮಂತ್ರಿಮಂಡಲದಲ್ಲಿ ಮೈಸೂರು ಕಡೆಯಿಂದ ಬಂದಿರುವವರು ಒಬ್ಬರು ನಿರ್ಗಮಿಸುತ್ತಾರೆಂದು ಭಾಸವಾಗುತತ್ತದೆ.

ಶ್ರೀ ಕೆ. ಪುಟ್ಟಸ್ವಾಮಿ:-

ಮಾನ್ಯ ಅಧ್ಯಕ್ಷರು ಇದಕ್ಕಾಗಿ ಒಂದು ನಿಮಿಷ ಅವಕಾಶ ಕೊಡಬೇಕು. ಮಾನ್ಯ ಶ್ರೀ ದೇವೇಗೌಡರವರ ಮನಸ್ಸಿನಲ್ಲಿ ತಪ್ಪು ಕಲ್ಪನೆ ಬಂದಿರಬಹುದು. ತಾವೇನಾದರೂ ಮೈಸೂರು ಜಿಲ್ಲೆಯಿಂದ ಬಂದಿರುವ ಮಂತ್ರಿಗಳು ಮಂತ್ರಿಮಂಡಲದಿಂದ ನಿರ್ಗಮಿಸುತ್ತಾರೆಂದು ತಿಳಿಯುವುದು ಬರೀ ಭ್ರಮೆ.

ಒಬ್ಬರು ಸದಸ್ಯರು:-

ಶ್ರೀ ಚನ್ನಬಸಪ್ಪನವರು ಹೊರಕ್ಕೆ ಬಂದು ಶ್ರೀ ಪುಟ್ಟಸ್ವಾಮಿಗಳು ಮಂತ್ರಿಮಂಡಲಕ್ಕೆ ಹೋಗುತ್ತಾರೆಂದು ಹೇಳುತ್ತೀರಾ?

ಶ್ರೀ ಕೆ. ಪುಟ್ಟಸ್ವಾಮಿ:-

ಮಂತ್ರಿಮಂಡಲದ ಪುನರ್‌ರಚನೆ ವಿಚಾರ ಮಾನ್ಯ ಮುಖ್ಯಮಂತ್ರಿಗಳಿಗೆ ಸೇರಿದುದು. ನಿಮಗೆ ಇಷ್ಟು ಭರವಸೆ ಮಾತ್ರ ಕೊಡಬಲ್ಲೆ. ಎಷ್ಟು ಸಾರಿ ಮಂತ್ರಿಮಂಡಲ ಬದಲಾವಣೆಯಾದರೂ ಮೈಸೂರು ಜಿಲ್ಲೆಯಿಂದ ಮಂತ್ರಿಗಳಾಗಿ ಬಂದಿರುವವರು ಯಾರೂ ಹೊರಕ್ಕೆ ಬರುವುದಿಲ್ಲ ಮತ್ತು ಯಾರೂ ಒಳಕ್ಕೆ ಹೋಗುವುದಿಲ್ಲ.

ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರನ್ನು ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

## 12. ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಮಿಲ್‌ನ ಕಾರ್ಮಿಕ ಸಂಘಗಳ ಘರ್ಷಣೆ ಕುರಿತು - 1975.*

ಮಾನ್ಯ ಉಪಾಧ್ಯಕ್ಷರೇ, ಕಾರ್ಮಿಕ ಇಲಾಖೆಯ ವಿಚಾರವಾಗಿ ನಾಲ್ಕು ಮಾತುಗಳನ್ನು ಅನಿವಾರ್ಯವಾಗಿ ಮಾತನಾಡಬೇಕಾಗಿದೆ. ಈಗ ಇಲ್ಲಿ ನಡೆಯುತ್ತಿರತಕ್ಕಂಥ ಚರ್ಚೆಯಲ್ಲಿ ನಾನು ಭಾಗವಹಿಸುವ ಮನಸ್ಸು ಉಳ್ಳವನು ಆಗಿರಲಿಲ್ಲ. ಆದರೆ ಮಾನ್ಯ ಶ್ರೀ ಎಂ. ಎಸ್. ಕೃಷ್ಣನ್‌ರವರು ಮೈಸೂರು ನಗರದಲ್ಲಿರುವ ಕೃಷ್ಣರಾಜೇಂದ್ರ ಮಿಲ್ಲಿನಲ್ಲಿರತಕ್ಕಂಥ ಕಾರ್ಮಿಕ ಸಂಘಗಳ ಘರ್ಷಣೆ ಏನಿದೆ, ಆ ವಿಚಾರವಾಗಿ ಅಲ್ಲಿ ಉದ್ಭವಿಸಿರತಕ್ಕಂಥ ಪರಿಸ್ಥಿತಿಯ ಬಗ್ಗೆ ಅವರು ಮಾತನಾಡಿದ್ದಾರೆ. ಆದರೆ ನನಗೆ ತಿಳಿದಂತೆ ಅಲ್ಲಿರತಕ್ಕಂಥ ವಾಸ್ತವಿಕವಾದ ಕೆಲವು ವಿಚಾರಗಳನ್ನು ಅನಿವಾರ್ಯವಾಗಿ ತಿಳಿಸಲೇಬೇಕಾಗಿದೆ. ಶ್ರೀ ಕೃಷ್ಣರಾಜೇಂದ್ರ ಗಿರಣಿಯಲ್ಲಿ ಕಳೆದ 30 ವರ್ಷಗಳಿಂದ ಕಾರ್ಮಿಕ ಸಂಘಗಳ ತಿಕ್ಕಾಟವಾಗಿ ಆಗಲೀ ಅಥವಾ ಕಾರ್ಮಿಕರಿಗೂ ಮಾಲೀಕರಿಗೂ ಪರಿಹಾರ ಮಾಡುವುದಕ್ಕೆ ಆಗದೇ ಇರತಕ್ಕಂಥ ವ್ಯಾಜ್ಯಗಳು ಆಗಲೀ ಅಲ್ಲಿ ಇರಲಿಲ್ಲ. ದುರಾದೃಷ್ಟವಶಾತ್ ಕಳೆದ ಒಂದು ವರ್ಷದಿಂದ ಇಂಥಾ ವಿಶೇಷವಾದಂಥ ಪರಿಸ್ಥಿತಿ ಅಲ್ಲಿ ಉದ್ಭವವಾಗಿದೆ. ಒಂದೂವರೆ ವರ್ಷದಿಂದ ಈಚೆಗೆ 2-3 ವೇಳೆ ಅಲ್ಲಿ ಬೀಗಮುದ್ರೆ ಹಾಕುವಂಥ ವಿಶೇಷ ಪರಿಸ್ಥಿತಿ ಬಂತು. ಸಾಮಾನ್ಯ ಕಾರ್ಮಿಕರಿಗೆ ಜೀವನ ಮಾಡುವುದೇ ಕಷ್ಟವಾಗಿದೆ.

ಈಗ ಫೆಬ್ರವರಿ 14ನೇ ತಾರೀಖಿನಿಂದ ಇವತ್ತಿನವರೆಗೂ ಕೂಡ ಆ ಕೈಗಾರಿಕೆಯಲ್ಲಿ ಬೀಗಮುದ್ರೆ ಹಾಕಿದ್ದಾರೆ. ಆ ಕೈಗಾರಿಕೆ ನಡೆಯುತ್ತಿಲ್ಲ. ಎಷ್ಟೇ ಪ್ರಯತ್ನ ಮಾಡಿದರೂ ಕೂಡ ಆ ಮಾಲಿಕ ವರ್ಗದವರು ಲಾಕ್‌ಔಟ್ ತೆಗೆದು ಕೆಲಸ ಪ್ರಾರಂಭಮಾಡುವಂಥ ಪರಿಸ್ಥಿತಿ ಇವತ್ತಿನವರೆಗೂ ಉಂಟಾಗಲಿಲ್ಲ. ಇದಕ್ಕೆ ಕಾರಣ ಸುಮಾರು ಒಂದುವರ್ಷದ ಹಿಂದೆ ಸ್ಥಾಪಿತವಾದಂಥ ಒಂದು ಕಾರ್ಮಿಕ ಸಂಘ ಕಾರಣವಾಗಿದೆ ಎಂದರೆ ಅದು ವಾಸ್ತವಿಕತೆಗೆ ದೂರವಾಗಿಲ್ಲ. ಈ ಕಾರ್ಮಿಕ ಸಂಘ ಸ್ಥಾಪನೆಯಾದಂದಿನಿಂದ ಅನೇಕ ಕಾರ್ಮಿಕರು ಫ್ಯಾಕ್ಟರಿಯ ಕೆಲಸಕ್ಕೆ ಹೋಗುವುದು ಕಷ್ಟವಾಗಿದೆ. ಇದು ಮೈಸೂರು ನಗರದ ಹೊರಗಡೆ ಇದೆ. ಟೋಲ್ ಗೇಟಿನಿಂದ ಸುಮಾರು ಒಂದು ಮೈಲಿ ದೂರಇದೆ. ಜನ ಸಂಚಾರ ಇಲ್ಲದೆ ಇದ್ದಂಥ ರಸ್ತೆಯಲ್ಲಿ ಕಾರ್ಮಿಕರು ರಾತ್ರಿಹೊತ್ತು ಎರಡು ಮೂರು ಷಿಫ್ಟ್ ಹೋಗತಕ್ಕಂಥವರು ಬರತಕ್ಕಂಥವರು ಏಟುಗಳನ್ನು ತಿಂದು ಪೋಲೀಸರಿಗೆ ಇದರ ಬಗ್ಗೆ ಎಷ್ಟು ಫಿರ್ಯಾದು ಕೊಟ್ಟರೂ ಕೂಡ ಅದರ ಮೇಲೆ ಪರಿಣಾಮಕಾರಿಯಾದ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ಕಾರ್ಮಿಕರ ಮೇಲಿರತಕ್ಕ ದೂರು ಆದರೂ ಏನು? ಹೊಸದಾಗಿ ಪ್ರಾರಂಭವಾಗಿರತಕ್ಕ ಸಂಘಕ್ಕೆ ಇತರ ಕಾರ್ಮಿಕರು ಸೇರಿಲ್ಲ ಎನ್ನುವುದೇ ಒಂದು ದೊಡ್ಡ ಫಿರ್ಯಾದೆ. ಯಾರು ಇದಕ್ಕೆ ಸೇರುವುದಿಲ್ಲವೋ ಅವರಿಗೆಲ್ಲಾ ಏಟು ಬೀಳುತ್ತಿವೆ, ಪೋಲೀಸರಿಗೆ ದೂರು ಕೊಟ್ಟಿರುವುದು ಇವೆಲ್ಲವೂ ಸರ್ಕಾರದ ಗಮನಕ್ಕೆ ಬಂದಿದೆ ಎಂದು ನಾನು ತಿಳಿದಿದ್ದೇನೆ. ಇದುವರೆಗೂ ಬಡ ಕಾರ್ಮಿಕರಿಗೆ ಯಾರೂ ರಕ್ಷಣೆಯನ್ನು ಕೊಡುವುದಕ್ಕೆ ಆಗಲಿಲ್ಲ. ಅಧ್ಯಕ್ಷರೇ ಸುಮಾರು ಒಂದೂವರೆ ವರ್ಷದ ಹಿಂದೆ ಅಲ್ಲಿದ್ದಂಥ

---

* ವಿಧಾನ ಸಭಾ ಕಲಾಪ ದಿನಾಂಕ: 29-3-1975

ಪರಿಸ್ಥಿತಿ ಈಗ ಅಲ್ಲಿಲ್ಲ. ಬೋನಸ್ ಇತ್ಯರ್ಥ ಮಾಡದೆ ಇರುವುದು ಇನ್ನೊಂದು ಕಾರಣ, ಕಾರ್ಮಿಕ ಮಂತ್ರಿಗಳು ಮಾಲೀಕರ ಹಾಗೂ ಕಾರ್ಮಿಕ ಮಧ್ಯಸ್ಥಿಕೆಯನ್ನು ವಹಿಸಿ ಒಂದು ತೀರ್ಮಾನ ಮಾಡುವುದಕ್ಕೆ ಕಾರ್ಮಿಕ ಇಲಾಖೆಯ ಮುಖ್ಯ ಅಧಿಕಾರಿಗಳಿಗೆ ಬಿಡಲಾಯಿತು, ಅವರು ಏನು ತೀರ್ಮಾನ ಮಾಡುತ್ತಾರೋ ಅದನ್ನು ಒಪ್ಪಿಕೊಳ್ಳುವುದು ಎಂದಾಯಿತು. ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಏನು ತೊಂದರೆಯಾಯಿತೋ ಏನೋ ಗೊತ್ತಾಗಲಿಲ್ಲ, ಒಂದೂವರೆ ವರ್ಷದಿಂದ ಇವತ್ತಿನವರೆಗೂ ಕೂಡ ಇದನ್ನು ತೀರ್ಮಾನ ಮಾಡುವುದಕ್ಕೆ ಆಗಲಿಲ್ಲ. ಬೋನಸ್ ಕೊಡತಕ್ಕದ್ದು ಪ್ರತಿವರ್ಷ ಬರತಕ್ಕ ವಿಚಾರ ಒಂದೂವರೆ ವರ್ಷದಿಂದ ತೀರ್ಮಾನವಾಗಬೇಕಂಥಾದ್ದು ಇವತ್ತಿನವರೆಗೂ ಕೂಡ ತೀರ್ಮಾನವಾಗಲಿಲ್ಲ. 1973-74ನೇ ಇಸವಿಯ ಬೋನಸ್ ಕೊಡಬೇಕಾಗಿ ಬಂದು ಅದೂ ಕೂಡ ತೀರ್ಮಾನವಾಗಲು ಎರಡು ಭಿನ್ನಾಭಿಪ್ರಾಯವಾಗಿ ತೀರ್ಮಾನವಾಗದೆ ಇದೆ. ನಾನಾದರೂ ಕೂಡ ಈ ಸಮಯದಲ್ಲಿ ತಮ್ಮ ಮೂಲಕ ಸರ್ಕಾರದಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ದಯಮಾಡಿ ಲೇಬರ್ ಕಮಿಷನರ್ ಅವರಿಗೆ ಯಾವ ಜವಾಬ್ದಾರಿಯನ್ನು ಕೊಟ್ಟಿದ್ದೀರೋ ಅದನ್ನು ನಿರ್ವಹಿಸಿ, ಈ ವರ್ಷದ ಬೋನಸ್ ಏನು ಕೊಡಬೇಕೋ ಅದನ್ನು ಕೊಡಬೇಕೆಂದು ತೀರ್ಮಾನ ಮಾಡಿದರೆ ಬಹಳ ಮಟ್ಟಿಗೆ ಪರಿಸ್ಥಿತಿಯನ್ನು ಸುಧಾರಿಸುವುದಕ್ಕೆ ಅನುಕೂಲವಾಗುತ್ತದೆ, ಅಲ್ಲದೆ ಗತವರ್ಷದ ಬೋನಸ್ ಅನ್ನೂ ಕೂಡ ತೀರ್ಮಾನ ಮಾಡುವುದಕ್ಕೆ ಅದು ಸಹಾಯವಾಗುತ್ತದೆ. ಅವರು ತಮಗೆ ವಹಿಸಿರತಕ್ಕ ಕಾರ್ಯವನ್ನು ನಿರ್ವಹಿಸತಕ್ಕ ಕಾಲದಲ್ಲಿ ಯಾವ ತತ್ವಗಳನ್ನು ಅನುಷ್ಠಾನಕ್ಕೆ ತಂದು ತೀರ್ಮಾನ ಮಾಡುತ್ತಾರೋ ಅದೇ ತತ್ವಗಳನ್ನು 1973-74ನೇ ಇಸವಿಗೂ ಅನ್ವಯಿಸಿ ಬೋನಸ್ ಅನ್ನು ತೀರ್ಮಾನ ಮಾಡುವುದಕ್ಕೆ ಅನುಕೂಲವಾಗುತ್ತದೆ. ಇವತ್ತು ಬಹಳ ಜಿಜ್ಞಾಸೆಗೆ ಒಳಗಾಗಿರತಕ್ಕ ಎರಡು ವಿಚಾರಗಳು ಎಂದರೆ ಕಳೆದ ಎರಡು ವರ್ಷದಲ್ಲಿ ಬೋನಸ್ ಅನ್ನು ತೃಪ್ತಿಕರವಾಗಿ ಬಗೆಹರಿಸುವುದಕ್ಕೆ ಆಗಿಲ್ಲ. ಆದ್ದರಿಂದ ಈ ಕಾರ್ಯವನ್ನು ಆದಷ್ಟು ಜಾಗ್ರತೆಯಾಗಿ ಮಾಡಿಸಬೇಕು ಎಂದು ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನೊಂದು ಜಿಜ್ಞಾಸೆಗೆ ಒಳಗಾಗಿರತಕ್ಕ ವಿಚಾರ ಎಂದರೆ, ಅದು ಡಿ. ಎ. ವಿಚಾರ. ಕಾರ್ಮಿಕರಿಗೆ ಮತ್ತು ಮಾಲೀಕರಿಗೆ ಒಂದು ಒಪ್ಪಂದವಾಗಿ, ಒಪ್ಪಂದದ ಪ್ರಕಾರ 1-1-75 ರಿಂದ ಜೀವನದ ವೆಚ್ಚದ ಅಂಕವನ್ನು ಅನುಸರಿಸಿ ಅವರು ಡಿ. ಎ. ಕೊಡಬೇಕಾಗುತ್ತದೆ. ಅದನ್ನು ಮಾಲೀಕರು ಕೊಡುವುದಕ್ಕಾಗುವುದಿಲ್ಲ ಎಂದು ಹೇಳಿದರು. ಸರ್ಕಾರದವರು ಇದನ್ನು ನೋಡಿ, ಕಾರ್ಮಿಕರಿಗೂ ಮತ್ತು ಮಾಲೀಕರಿಗೂ ಮಧ್ಯ ಆಗಿರತಕ್ಕ ಒಪ್ಪಂದ ಕರಾರಿನ ಪ್ರಕಾರ, ಮಾರ್ಗದರ್ಶನ ಮಾಡುವುದು ಆವಶ್ಯಕ. ಇದು ಸರ್ಕಾರದವರು ಮಾಡಬೇಕಾದಂಥ ಕಾರ್ಯ ಎಂದು ನಾನಾದರೂ ಭಾವಿಸುತ್ತೇನೆ. ಶ್ರೀಮಾನ್ ಕೃಷ್ಣನ್ ಅವರು ಸರ್ಕಾರ ಪಕ್ಷಪಾತ ಮಾಡಿದೆ ಎನ್ನತಕ್ಕ ಆರೋಪವನ್ನು ಮಾಡಿದ್ದಾರೆ. ಸರ್ಕಾರ ಇದರಲ್ಲಿ ಯಾವ ಪಕ್ಷಪಾತವನ್ನೂ ಮಾಡಿಲ್ಲ. ಕಳೆದ ಬಾರಿ ಲಾಕ್ ಔಟ್ ಆದಂಥ ವೇಳೆಯಲ್ಲಿ ಸರ್ಕಾರ ಮಧ್ಯಸ್ಥಿಕೆ ವಹಿಸಿ ಯಾವ ಒಂದು ವಿಚಾರದಲ್ಲಿ ಜಿಜ್ಞಾಸೆ ಬಂದಿತ್ತೋ ಆ ವಿಚಾರವನ್ನು ಪಂಚಾಯಿತಿಗೆ ಒಪ್ಪಿಸಿ ಲಾಕ್‌ಔಟ್ ಅನ್ನು ಮುಕ್ತಾಯ ಮಾಡಿದ್ದಾರೆ. ಈಗ ಬಂದಿರತಕ್ಕದ್ದಕ್ಕೆ, ಹಿಂದೆ ಯಾವ ಒಂದು ಜಿಜ್ಞಾಸೆ ಬಂದಿತ್ತೋ ಅದೇ ಪುನಃ ಬಂದಿದೆ. ಈ ಒಂದು ಕಾರ್ಮಿಕ

ಸಂಘ ತಳೆದಿರತಕ್ಕ ನೀತಿ ಏನೆಂದರೆ ಸರ್ಕಾರ ಈಗಾಗಲೇ ಇದನ್ನು ತೀರ್ಮಾನ ಮಾಡಬೇಕು, ಕಾರ್ಮಿಕರಿಗೆ ಮತ್ತು ಮಾಲೀಕರಿಗೆ ಮಧ್ಯ ಉದ್ಭವಿಸಿರುವ ಭಿನ್ನಾಭಿಪ್ರಾಯಗಳನ್ನು ಸರ್ಕಾರ ಒತ್ತಾಯದ ಮೂಲಕ ತೀರ್ಮಾನ ಮಾಡುವುದಕ್ಕಾಗುವುದಿಲ್ಲ. ಸರ್ಕಾರದವರು ಇಬ್ಬರಿಗೂ ವಿವೇಕ ಹೇಳಬೇಕು ಮತ್ತು ಇವರಿಬ್ಬರ ನಡುವೆ ಒಂದು ಒಪ್ಪಂದವನ್ನು ಕುದುರಿಸುವುದಕ್ಕೆ ಪ್ರಯತ್ನ ಮಾಡಬಹುದು. ಈ ರೀತಿ ಆಗದೇ ಇದ್ದಂಥ ಕಾಲದಲ್ಲಿ ಅದನ್ನು ಪಂಚಾಯಿತಿಗೆ ಒಪ್ಪಿಸಿ ಲಾಕ್‌ಔಟ್ ಅನ್ನು ತೆಗೆಯಿರಿ ಎಂದು ಹೇಳಬೇಕು. ನನಗೆ ತಿಳಿದಂತೆ ಈಗ ಯಾವ ಯಾವ ವಿಚಾರಗಳು ಜಿಜ್ಞಾಸೆಗೆ ಒಳಗಾಗಿದ್ದಾವೆಯೋ ಅವೆಲ್ಲವೂ ಒಂದಲ್ಲಿ ಒಂದು ರೀತಿಯಲ್ಲಿ ಪಂಚಾಯಿತಿಯ ಮುಂದೆ ಹೋಗಿರತಕ್ಕವು. ಡಿ. ಎ. ವಿಚಾರ ಮಾತ್ರ ಪಂಚಾಯಿತಿಗೆ ಹೋಗಿಲ್ಲ. ಬೋನಸ್ ಕೊಡುವುದು ತೀರ್ಮಾನವಾಗದೆ ಪರಿಸ್ಥಿತಿ ಸುಧಾರಿಸುವ ಸೂಚನೆ ಕಂಡುಬರುತ್ತಿಲ್ಲ. ಹೀಗಿದ್ದೂ ಕೂಡ ಮಾನ್ಯ ಸ್ನೇಹಿತರಾದ ಕೃಷ್ಣನ್ ಅವರು ಸರ್ಕಾರದ ಮೇಲೆ ಪಕ್ಷಪಾತ ಮಾಡುತ್ತಿದೆ ಎನ್ನುವ ಆರೋಪಣೆಯನ್ನು ಏಕೆ ಮಾಡಿದರೋ ನನಗೆ ಗೊತ್ತಿಲ್ಲ. ಇಲ್ಲಿ ಬಹುಶ: ಅವರು ಯಾರ ಅಭಿಪ್ರಾಯವನ್ನು ಪ್ರತಿನಿಧಿಸಿ ಮಾತನಾಡುತ್ತಾರೋ, ಅವರ ಅಭಿಪ್ರಾಯದಂತೆ ಸರ್ಕಾರ ತೀರ್ಮಾನ ಮಾಡುತ್ತದೆ ಎನ್ನುವ ಭಾವನೆ ಬಂದಿದೆ. ನಾನಾದರೂ ಇಲ್ಲಿ ಪರಿಸ್ಥಿತಿಯನ್ನು ಸ್ವತ: ಅರಿತವನಾಗಿ ಹೇಳುತ್ತೇನೆ. ಕಳೆದ ಎರಡು ತಿಂಗಳಿಂದ ಸಾಮಾನ್ಯ ಕಾರ್ಮಿಕರು ತಾವು ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲದಂಥ ಪರಿಸ್ಥಿತಿಯನ್ನು ಉಂಟುಮಾಡಿದ್ದಾರೆ. ಅನೇಕರಿಗೆ ಜೀವಕ್ಕೆ ಭಯ ಬರುವಂಥ ಪ್ರಾಣ ಭಯ ಬರುವಂಥ ರೀತಿಯಲ್ಲಿ ವರ್ತಿಸಿದ್ದಾರೆ. ಮೈಸೂರು ನಗರದಲ್ಲಿ ಜನನಿಬಿಡವಾದಂಥ ಸ್ಥಳದಲ್ಲಿ, ಮಾರ್ಕೆಟ್ ಪ್ಲೇಸ್‌ನಲ್ಲಿ ಹೋಗತಕ್ಕ ಜನರನ್ನು ಹಿಡಿದು ಹೊಡೆದಿದ್ದಾರೆ. ಇಷ್ಟಾದರೂ ಕೂಡ ಅಲ್ಲಿಯ ಪೋಲೀಸರು ಸರಿಯಾದಂಥ ಕ್ರಮವನ್ನು ತೆಗೆದುಕೊಂಡಿಲ್ಲ ಎಂದು ನನಗಾದರೂ ವ್ಯಥೆಯಾಗುತ್ತದೆ. ಇನ್ನೊಂದು ವಿಚಾರವನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಸುಮಾರು 15 ದಿವಸಗಳ ಹಿಂದೆ ಕೃಷ್ಣರಾಜೇಂದ್ರ ಗಿರಣಿಯ ಕಾಲೋನಿಯಲ್ಲಿ ಇಬ್ಬರು, ಕಾರ್ಮಿಕರು ಮನೆಯನ್ನು ನುಗ್ಗಿ ತಮ್ಮ ಸಂಘಕ್ಕೆ ಸೇರದೇ ಇರುವವರ ಮನೆಗೆ ನುಗ್ಗಿ ಅವರ ಮನೆಯ ಹೆಂಗಸರು ಮಕ್ಕಳನ್ನು ಎಲ್ಲರನ್ನೂ ಹೊಡೆದಿದ್ದಾರೆ. ಅದಕ್ಕೆ ಪೋಲೀಸರಿಗೆ ಫಿರ್ಯಾದೆ ಕೊಟ್ಟಿದ್ದಾರೆ. ಫಿರ್ಯಾದೆ ಕೊಟ್ಟ ಮೇಲೂ ಪೋಲೀಸರು ಮಾಡಿದ ಕ್ರಮ ಏನೆಂದರೆ ಯಾರು ಫಿರ್ಯಾದೆ ಕೊಟ್ಟಿದ್ದಾರೋ ಅವರನ್ನೇ ಅರೆಸ್ಟ್ ಮಾಡಿಕೊಂಡು ಬಂದು, ಅವರನ್ನು ಪೋಲೀಸ್ ಸ್ಟೇಷನ್‌ನಿಂದ ಕೃಷ್ಣರಾಜೇಂದ್ರ ಆಸ್ಪತ್ರೆಗೆ ಕೃಷ್ಣಾರಾಜೇಂದ್ರ ಆಸ್ಪತ್ರೆಯಿಂದ ಪೋಲೀಸ್ ಸ್ಟೇಷನ್‌ಗೆ, ರೈಲ್ವೆ ಸ್ಟೇಷನ್ ರೋಡ್‌ನಲ್ಲಿ ಮಧ್ಯಾಹ್ನದ ಹೊತ್ತು ಕೈಗೆ ಬೇಡಿ ಹಾಕಿ ನಡೆಸಿಕೊಂಡು ಬಂದದ್ದನ್ನು ನಾನೇ ಕಣ್ಣಾರೆ ನೋಡಿದ್ದೇನೆ.

ಇದು ಯಾರೂ ಹೇಳಿದಂಥ ಮಾತಲ್ಲ, ಇದನ್ನು ನಾನು ನೋಡಿದ ಮೇಲೆ ಇಂಥಾ ಒಂದು ಪರಿಸ್ಥಿತಿ ಬರಬಾರದು ಅಂತ ನಾನೇ ತಕ್ಷಣ ಡಿ. ಐ.ಜಿ. ಹತ್ತಿರ ಹೋಗಿ ಈ ರೀತಿ ಅವಮಾನ ಮಾಡುತ್ತಿದ್ದಾರೆ, ಇದಕ್ಕೆ ಅವಕಾಶ ಕೊಡಬಾರದು ಎಂದು ತಿಳಿಸಿದೆ. ಅದಾದ ಮೇಲೆ ನಾನು ಇಲ್ಲಿಗೆ ಬಂದು ಆ ಬಗ್ಗೆ ಒಂದು ಕಾಲ್ ಅಟೆನ್‌ಷನ್ ನೋಟೀಸ್ ಅನ್ನು ಕಳುಹಿಸಿದ್ದೇನೆ. ಅದು ಒಂದು ವಾರದ ಮೇಲಾಯಿತು. ಆ ಬಗ್ಗೆ ಸಮಾಚಾರ

ಸಂಗ್ರಹಿಸಬೇಕಾಗುತ್ತದೆ ಅದಕ್ಕೆ ಮುಂದೆ ಉತ್ತರ ಕೊಡುತ್ತಾರೆಂದು ತಿಳಿದುಕೊಂಡಿದ್ದೇನೆ. ಈ ರೀತಿ ಒಂದು ಪರಿಸ್ಥಿತಿಯನ್ನು ಉಂಟು ಮಾಡತಕ್ಕಂಥಾವರು ಯಾರು? ಅದಕ್ಕೆ ಮುಖಂಡರು ಯಾರು ಅನ್ನುವುದನ್ನು ಸರ್ಕಾರದವರು ಪರಿಶೀಲಿಸಿ, ಅದನ್ನು ವಿಚಾರಿಸಿ ಅದರ ಮೇಲೆ ಸರಿಯಾದಂಥ ಕಾರ್ಯಕ್ರಮವನ್ನು ಕೈಗೊಳ್ಳಬೇಕೇ ವಿನಾ ಇದನ್ನು ಹಾಗೆಯೇ ಬಿಟ್ಟುಬಿಟ್ಟರೆ ಅಲ್ಲಿ ಇತರಕ್ಕಂಥ ನಿರಪರಾಧಿ ಕಾರ್ಮಿಕರಿಗೆ ಜೀವನ ಮಾಡಲು ಬಹಳ ಕಷ್ಟವಾಗುತ್ತದೆ ಎಂದು ನಾನು ತುಂಬಾ ವ್ಯಸನದಿಂದ ಹೇಳಬೇಕಾಗಿದೆ. ಮತ್ತು ಶ್ರೀಮಾನ್ ಎಂ. ಎಸ್. ಕೃಷ್ಣನ್‌ರವರು ಸರ್ಕಾರದ ಮೇಲೆ ಏನು ಪಕ್ಷ ಪಾತದ ಆರೋಪಣೆ ಮಾಡುತ್ತಿದ್ದಾರೆಲ್ಲ ಅದೂ ಕೂಡ ತುಂಬಾ ವ್ಯಸನವಾಗಿದೆ, ಆದುದರಿಂದ ಸರ್ಕಾರದವರು ಕೂಡಲೇ ಅಲ್ಲಿರತಕ್ಕಂಥ ಪರಿಸ್ಥಿತಿಯನ್ನು ಗಮನಿಸಿ ಅದಕ್ಕೆ ಯಾವ ರೀತಿ ಕ್ರಮ ತೆಗೆದುಕೊಳ್ಳಬೇಕೋ ಅದನ್ನು ತೆಗೆದುಕೊಂಡು ಅಲ್ಲಿ ಫ್ಯಾಕ್ಟರಿಯ ಬಾಗಿಲನ್ನು ಬಿಚ್ಚುವಂತೆ ಮಾಡಿ ಅಲ್ಲಿಯ ಜನರಿಗೆ ಸರಿಯಾದ ರೀತಿಯಲ್ಲಿ ಅಲ್ಲಿ ಕೆಲಸ ಮಾಡಿ ಜೀವನ ಮಾಡುವುದಕ್ಕೂ ಮತ್ತು ಆ ಫ್ಯಾಕ್ಟರಿಗೆ ಹೋಗತಕ್ಕಂಥಾವರಿಗೆ ಯಾವರೀತಿಯಾದ ತೊಂದರೆಯೂ ಇಲ್ಲದಂತೆ ಒಂದು ಪರಿಸ್ಥಿತಿಯನ್ನು ಉಂಟು ಮಾಡುವುದಕ್ಕೆ ಸರ್ಕಾರ ಕಾರ್ಯಕ್ರಮ ಕೈಗೊಳ್ಳಬೇಕು ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ಎಂ. ಎಸ್. ಕೃಷ್ಣನ್–

ನಾನು ಅವರನ್ನು ಒಂದು ವಿಷಯ ಕೇಳಬೇಕಾಗುತ್ತದೆ. ನಮ್ಮ ಯೂನಿಯನ್‌ನವರು ಅವರನ್ನು ಹೊಡೆಯುವುದಕ್ಕೆ ಶುರು ಮಾಡಿದರು ಅಂತಲೇ?

ಶ್ರೀ ಕೆ. ಪುಟ್ಟಸ್ವಾಮಿ:–

ಅಲ್ಲಿ ನಿಮ್ಮ ಯೂನಿಯನ್‌ನವರು ಉಂಟೇ ಇಲ್ಲವೇ ಅನ್ನುವುದನ್ನು ಒಪ್ಪಿಕೊಳ್ಳುತ್ತೀರಾ?

ಶ್ರೀ ಎಂ. ಎಸ್. ಕೃಷ್ಣನ್:–

ಅಲ್ಲಿ ಏನಾಯಿತು ಎನ್ನುವುದು ನನಗೆ ಗೊತ್ತಿದೆ. ಮತ್ತು ಆ ಕಾರ್ಮಿಕರು ನಿಮ್ಮ ಬಗ್ಗೆ ಏನು ಹೇಳುತ್ತಾರೆ ಅನ್ನುವುದೂ ಗೊತ್ತಿದೆ. ಅಲ್ಲಿ ಅವರು ಇಷ್ಟಬಂದ ರೀತಿಯಲ್ಲಿ ನಡೆದರೆ...

ಶ್ರೀ ಕೆ. ಪುಟ್ಟಸ್ವಾಮಿ:–

ನನ್ನ ಬಗ್ಗೆಯಾಗಲಿ ಅವರ ಬಗ್ಗೆಯಾಗಲಿ ನಾನು ಹೇಳುತ್ತಾ ಇಲ್ಲ. ಮಾತೆತ್ತಿದರೆ ಸದಸ್ಯರ ಮೇಲೆ ಆರೋಪಣೆ ಮಾಡುವಂಥ ಒಂದು ಕೆಟ್ಟಚಾಳಿ ಬಂದಿದೆ.

ಶ್ರೀ. ಎಂ. ಎಸ್. ಕೃಷ್ಣನ್:–

ಅದು ಸತ್ಯಕ್ಕೆ ದೂರವಾದ ಮಾತು. ಆದುದರಿಂದ ನಾನು ಎದ್ದು ನಿಂತುಕೊಂಡೇ ಆ ಬಗ್ಗೆ ಹೇಳಬೇಕಾಗುತ್ತದೆ.

**Mr. Deputy Speaker:-**

There is nothing against the Hon. Member.

**Sri M.S. Krishnan:-**

I represent one Union and if he Speaks about that Union I totally reject it. There are the People to Judge and not the Hon. Member.

**ಶ್ರೀ ಹೆಚ್. ಡಿ. ದೇವೇಗೌಡ (ಹೊಳೆನರಸೀಪುರ):-**

ಮಾನ್ಯ ಉಪಸಭಾಪತಿಗಳೇ. ಈಗ ಕಾರ್ಮಿಕ ಇಲಾಖೆಗೆ ಸಂಬಂಧಪಟ್ಟ ಹಾಗೆ ನನ್ನ ಸ್ನೇಹಿತರಾಗಿರತಕ್ಕಂಥ ಶ್ರೀಮಾನ್ ಎಂ. ಎಸ್. ಕೃಷ್ಣನ್‌ರವರು ಹಾಗೂ ಶ್ರೀಮಾನ್ ಕೆ.ಬಿ. ಶಿವಯ್ಯನವರು ಮಾತನಾಡುತ್ತಾ ಕಾರ್ಮಿಕರ ಕಲ್ಯಾಣಕ್ಕೆ ಅವರ ರಕ್ಷಣೆಗೆ ಮತ್ತು ಅವರ ಎಲ್ಲಾ ಕಷ್ಟಕಾರ್ಪಣ್ಯಗಳನ್ನು ನಿವಾರಣೆ ಮಾಡತಕ್ಕಂಥಾದ್ದರ ಬಗ್ಗೆ ಕಳಕಳಿಯಾದ ಮಾತನ್ನು ಈ ಸಭೆಯಲ್ಲಿ ಆಡಿದ್ದಾರೆ. ಶ್ರೀಮಾನ್ ಕೆ.ಪುಟ್ಟಸ್ವಾಮಿಯವರೂ ಕೂಡ ಈಗ ನಡೆದಂಥ ಒಂದು ಪಾಶವೀಕೃತ್ಯದ ಘಟನೆಯನ್ನು ಈ ಸಭೆಗೆ ತಿಳಿಸಿದ್ದಾರೆ. ನಾನು ಒಂದು ಮಾತ್ರ ಹೇಳುತ್ತೇನೆ. ಕಾರ್ಮಿಕರ ಕಲ್ಯಾಣ ಆಗಬೇಕಾದರೆ ರಾಜಕೀಯ ಪಕ್ಷಗಳು ದೂರ ಇದ್ದರೆ ಇನ್ನೂ ಹೆಚ್ಚು ಉತ್ತಮರೀತಿಯಲ್ಲಿ ಆಗುತ್ತದೆ ಎಂದು ನನಗೆ ವಿಶ್ವಾಸ ಇದೆ. ಕೇವಲ ಸ್ವಾರ್ಥಕೋಸ್ಕರವಾಗಿ ರಾಜಕಾರಣಿಗಳು ಪ್ರವೇಶಿಸಿದ್ದರೆ ಇಂಥಾ ಒಂದು ಕೆಟ್ಟ ವಾತಾವರಣ ನಾವೇ ನಾವಾಗಿ ನಿರ್ಮಾಣ ಮಾಡುತ್ತಿದ್ದೇವೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಕಾರ್ಮಿಕ ರಂಗದಲ್ಲಿ ಮಹಾರಾಷ್ಟ್ರ ಏಕೀಕರಣ ಸಮಿತಿಯ ಸದಸ್ಯರಾದ ಶ್ರೀಮಾನ್ ಬಿ.ಬಿ. ಸಯನಕ್‌ರವರು ಇದಕ್ಕೆ ಒಂದೇ ಯೂನಿಯನ್ ಸಾಕು ಎಂದರೆ ಆ ರೀತಿ ಅದನ್ನು ಬಿಡಲಿಕ್ಕೂ ಸಾಧ್ಯವಿಲ್ಲ.

## ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

### (1998-1999)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ,<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಶ್ರೀರಂಗದೇವರಾಯಲು<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ವಸಂತ ಕಮಲಾಕರ ಅಸ್ನೋಟಿಕರ<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಶಶಿಲ್ .ಜಿ. ನಮೋಶಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 5. | ಡಾ|| ಮಹಾದೇವ ಬಣಕಾರ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 6. | ಕೆ.ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

### (1999-2000)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಕಾಕಾಸಾಹೇಬ .ಪಾಂ. ಪಾಟೀಲ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಸಿರಾಜ್ ಶೇಖ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಪಿ.ಎಂ. ರಂಗನಾಥ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 5. | ಎಸ್. ಸಂಪಂಗಿ<br>ವಿಧಾನಸಭಾ ಸದಸ್ಯರು | ಸದಸ್ಯರು |
| 6. | ಡಾ|| ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 7. | ಡಾ|| ಎಚ್.ಎಲ್. ನಾಗೇಗೌಡ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 8. | ಕೆ.ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

---

ಮುದ್ರಕರು : ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾ.ಸೂ. 2157